# ಗೀತಾರ್ಥಬೋಧಿನಿ

ಅಥವಾ

## ಕನ್ನಡದಲ್ಲಿ ವಿಶೇಷಾರ್ಥವನ್ನೊಳಗೊಂಡ ಗೀತೆಯ ಮುಂದಿನ ಹನ್ನೆರಡು ಅಧ್ಯಾಯಗಳ ಅನುವಾದವು

## ಭಾಗ ೨




ಲೇಖಕರು:

**ಸವಣೂರ ಗೋವಿಂದರಾಯರು**

'ಸೂತ್ರಾರ್ಥರತ್ನಾವಲಿ' 'ಉಪನಿಷದರ್ಥಬೋಧಿನಿ' ಇವುಗಳ ಕರ್ತರು, ಮತ್ತು ಗೀತಾವಿವೃತಿ, ಭಾಗವತ ಟಿಪ್ಪಣಿ, ಸುಧೆ, ಮುಂತಾದವುಗಳ ಪ್ರಕಾಶಕರು.



— ಪ್ರಥಮಾವೃತ್ತಿ —

ಶಕೆ ೧೮೫೪

**ಅಂಕಲಿಗಿ ಬ್ಯಾಂಕ, ಧಾರವಾಡ**

**ಬೆಲೆ:— ಮೂರು ರೂಪಾಯಿ**

# ಮುನ್ನುಡಿ

ಬಹುದಿವಸದಿಂದ ಕಾಯ್ದುಕೊಂಡಿದ್ದ ಗೀತಾರ್ಥಬೋಧಿನಿಯ ೨ನೆಯ ಭಾಗವು ಈಗ ವಾಚಕರ ಕೈಸೇರುತ್ತಲಿದೆ. ಇದಕ್ಕೆ ಮುನ್ನುಡಿಯೊಂದನ್ನು ಬರೆಯಲಿಕ್ಕೆ ನನ್ನಂಥ ಪಾಮರನು ಪ್ರಯತ್ನಿಸುವದು ಸಾಹಸವಾಗಿದ್ದರೂ ಭಗವಾನ್ ಶ್ರೀಕೃಷ್ಣನ ಗೀತೆಯ ಪುಣ್ಯಸ್ಮರಣವು ಯಾವ ನಿಮಿತ್ತದಿಂದಲಾದರೂ ನನಗೆ ಆಗಲೆಂದು ಬಗೆದು ಶ್ರೀಯುತ ಗೋವಿಂದರಾಯರು ನನಗೆ ಕೇಳಿದ ಈ ಅಲ್ಪ ಸೇವೆಯನ್ನು ಮಾಡಲಿಕ್ಕೆ ನಾನು ಒಪ್ಪಿಕೊಂಡಿರುವೆನು.

ಅಧ್ಯಾತ್ಮತತ್ವದ ರಹಸ್ಯವನ್ನು ನಿತ್ಯದ ಆಚರಣೆಯಲ್ಲಿ ತಂದು ನಾವು ಮಾಡುವ ಕೆಲಸಗಳೆಲ್ಲವೂ ಪರಮಾತ್ಮನ ಪೂಜೆಯೆಂದು ಭಾವಿಸಿ ಬಾಳುವ ಪವಿತ್ರಜೀವನದ ಹಾದಿಯನ್ನು ತೋರಿಸುವ ಭಗವದ್ಗೀತೆಯಂಥ ದಿವ್ಯಗ್ರಂಥದ ಮಹಿಮೆಯನ್ನು ನಮ್ಮ ದೇಶದವರಿಗೆ ಬಣ್ಣಿಸಿ ಹೇಳುವುದು ಅನವಶ್ಯಕ. ಭಗವದ್ಗೀತೆಯು ಯಾರ ಮನೆಯಲ್ಲಿ ಇರುವದಿಲ್ಲವೋ ಅಂಥ ಹಿಂದುವಿನ ಮನೆಯು ಸಿಕ್ಕುವುದು ಅಪರೂಪ. ಅದರಲ್ಲಿಯ ಒಂದೆರಡು ಶ್ಲೋಕಗಳಾದರೂ ಬಾಯಿಗೆ ಬರದವರು ವಿರಳ. ಇಷ್ಟು ಜನಮನೋಹರವಾದ ಶ್ರೀಕೃಷ್ಣನ ಸಂದೇಶವನ್ನು ಯಥಾಸ್ಥಿತವಾಗಿ ತಿಳುಕೊಂಡು ಅದರಂತೆ ಜೀವಿಸಲಿಕ್ಕೆ ಕಲಿಯುವದು ಪ್ರತಿಯೊಬ್ಬ ಮನುಷ್ಯನ ಕರ್ತವ್ಯವಾಗಿದೆ.

ವೇದ ಉಪನಿಷತ್ತುಗಳ ರಹಸ್ಯವನ್ನು ಮೂವರು ಆಚಾರ್ಯರು ಮೂರು ಬೇರೆಬೇರೆ ಬಗೆಯಾಗಿ ಕಂಡಿದ್ದಾರೆ. ಅವುಗಳಲ್ಲಿ ಯಾವದು ಸರಿಯಾದದ್ದು ಎಂಬದನ್ನು ನಿರ್ಣಯಿಸುವದು ಸಾಮಾನ್ಯ ಕೆಲಸವಲ್ಲ. ಅದನ್ನು ಪ್ರತಿಯೊಬ್ಬ ಮನುಷ್ಯನು ತನ್ನಷ್ಟಕ್ಕೆ ತಾನೇ ನಿರ್ಣಯ ಮಾಡಿಕೊಳ್ಳಬೇಕು. ಆದರೆ ಅವನು ಅದಕ್ಕೆ ತಕ್ಕ ತಪಶ್ಚರ್ಯೆಯನ್ನು ಮಾತ್ರ ಮಾಡಿಯೇ ತೀರಬೇಕು. ಅದಾವದೆಂದರೆ, ಪ್ರಥಮತಃ ಗುರುಮುಖದಿಂದ ಒಂದು ಮತವನ್ನು ಚನ್ನಾಗಿ ಅಭ್ಯಾಸಮಾಡಿ ಇನ್ನುಳಿದ ಮತಪ್ರಮೇಯಗಳನ್ನು ನಿಷ್ಪಕ್ಷಪಾತದೃಷ್ಟಿಯಿಂದ ಪರಿಶೀಲಿಸಿ ಆನಂತರ ತನ್ನ ಸದಸದ್ವಿವೇಕಬುದ್ಧಿಗೆ ಸರಿದೋರುವ ಮಾರ್ಗವನ್ನು ಸ್ವೀಕರಸಬೇಕು. ಈ ಕಷ್ಟವನ್ನು ಸಹಿಸಲಿಕ್ಕೆ ಧೈರ್ಯಸಾಲದೆ ಪರಮತಗಳ ಮೇಲೆ ಮನಸೋಕ್ತ ಟೀಕೆಯನ್ನು ಮಾಡಲಿಕ್ಕೆ ಉದ್ಯುಕ್ತರಾಗುವವರು ಜನರ ಅಪಹಾಸ್ಯಕ್ಕೆ ಮಾತ್ರ ಗುರಿಯಾಗುವರು.

ಶ್ರೀಮದಾನಂದತೀರ್ಥರ ಭಾಷ್ಯವು ಶ್ರುತಿಸ್ಮೃತಿಗಳ ಆಶಯಕ್ಕೂ, ಯುಕ್ತಿಗೂ, ಅನುಭವಕ್ಕೂ ಹೊಂದುವಂಥದಿರುವದೆಂದು ನಿರ್ವಿವಾದವಾಗಿ ಹೇಳಬಹುದು. ಆದ್ದರಿಂದಲೇ ವ್ಯವಹಾರದಲ್ಲಿ ಎಲ್ಲರೂ ಇದೇ ಮತವನ್ನು ಅನುಸರಿಸಿದ್ದು ಕಂಡುಬರುವದು. ಎಲ್ಲ ಆಸ್ತಿಕರು ದೇವರು ದೊಡ್ಡವನು, ನಾನು ಅಲ್ಪನು, ಎಂಬ ಭಾವನೆಯಿಂದ ಪೂರಿತರಾಗಿಯೇ ಇಹಲೋಕದ ಯಾತ್ರೆಯನ್ನು ಮುಗಿಸುವರು. ಇರಲಿ, ನಾನು ದ್ವೈತಾದ್ವೈತವಾದವನ್ನು ಇಲ್ಲಿ ಮಾಡಬೇಕೆನ್ನುವದಿಲ್ಲ ಯಾರಿಗೆ ಶ್ರೀಮನ್ಮಧ್ವಾಚಾರ್ಯರ ಉಪದೇಶವು ತಾರಕವೆಂಬ ಶ್ರದ್ಧೆ ಇರುವದೋ ಅವರಿಗೆ ಭಗವದ್ಗೀತೆಯ ತಾತ್ಪರ್ಯವನು ಸುಲಭವಾಗಿ ಗ್ರಹಣಮಾಡಲಿಕ್ಕೆ ಈ ಪುಸ್ತಕವು ಅತೀವ ಉಪಕಾರಿಯಾಗಿದೆ. ನಮ್ಮ ವೇದಾಂತ ಗ್ರಂಥಗಳೆಲ್ಲವೂ ಕನ್ನಡದಲ್ಲಿ ಟೀಕಾಟಿಪ್ಪಣೆಗಳ ಸಮೇತವಾಗಿ ಪ್ರಕಾಶಿಸಲ್ಪಟ್ಟವಾದರೆ ಸಾಮಾನ್ಯ ಜನರಿಗೆ ಮಹತ್ತರವಾದಂಥ ಪ್ರಯೋಜನವನ್ನು ಕಲ್ಪಿಸಿಕೊಟ್ಟಂತಾಗುವದು. ಈ ಪುಸ್ತಕದ ಮೊದಲನೆಯ ಭಾಗದಲ್ಲಿ ಶ್ಲೋಕಾರ್ಥವನ್ನು ಹೇಳಲಿಕ್ಕೆ ಅನುಸರಿಸಿದ ಪದ್ಧತಿಯನ್ನೇ ಇಲ್ಲಿಯೂ ಅನುಸರಿಸಲಾಗಿದೆ. ಅಧ್ಯಾಯಸಂಗತಿ ಶ್ಲೋಕಸಂಗತಿಗಳು ಬಹು ಸ್ಪಷ್ಟವಾಗಿ ತೋರಿಸಲ್ಪಟ್ಟಿರುವವು. ಮುಖ್ಯವಾಗಿ ಅನೇಕ

# ಮುನ್ನುಡಿ

ಟೀಕೆಗಳ ಸಾರವು ವಾಚಕರಿಗೆ ಒಂದೇ ಪುಸ್ತಕದಲ್ಲಿ ದೊರೆಯುವದೇ ಈ ಪುಸ್ತಕದ ವೈಶಿಷ್ಟ್ಯವಾಗಿದೆ ಎಂದು ಹೇಳಬಹುದು.

ಗೀತೆಯಿಂದ ನಾವು ಏನು ಕಲಿತುಕೊಳ್ಳಬೇಕೆಂಬುದನ್ನು ದಿವಂಗತರಾದ ಧಾರವಾಡಕರ ವಾಮನ ರಾಯರು ಮೊದಲನೆಯಭಾಗದ ಮುನ್ನುಡಿಯಲ್ಲಿ ಚನ್ನಾಗಿ ಹೇಳಿರುವರು. "ಜೀವನು ತಾನು ಮಾಡುವ ಸಕಲ ಕರ್ಮಗಳಲ್ಲಿ ಫಲಾಸಕ್ತಿಯನ್ನಿಡದೆ ಪ್ರಪಂಚದಲ್ಲೊದಗುವ ಸುಖದುಃಖಾದಿಗಳನ್ನು ಅಭಿಮಾನತ್ಯಾಗದಿಂದ ಸಹಿಸುತ್ತ ಸ್ವಂತ ವರ್ಣಾಶ್ರಮಗಳಿಗೆ ವಿಹಿತವಾದ ಕರ್ಮಗಳನ್ನಾಚರಿಸಿ ಅವುಗಳಿಗೆ ಕೇವಲ ಪರಮಾತ್ಮನೇ ಕರ್ತನೆಂತಲೂ ತಾನು ಪರಾಧೀನನಾದುದರಿಂದ ಅವನ ಸಂಕಲ್ಪಕ್ಕನುಸರಿಸಿಯೇ ಕರ್ಮಮಾಡುವನೆಂತಲೂ ಅವು ಪರಮಾತ್ಮನ ಆರಾಧನೆಗಾಗಿಯೇ ಇರುವವೆಂತಲೂ ಅನುಸಂಧಾನದಿಂದ ತನಗೆ ಪರಮಾತ್ಮನೇ ಸ್ವಾಮಿಯೂ ತಾನು ಅವನಿಗೆ ಸೇವಕನೂ ಎಂಬ ನಿಶ್ಚಯ ಬುದ್ಧಿಯಿಂದ ಮಾಡಿದ ಕರ್ಮಗಳನ್ನು ಪರಮಾತ್ಮನಿಗೆಯೇ ಅರ್ಪಿಸಿದರೆ ಅಪರೋಕ್ಷಜ್ಞಾನವನ್ನು ಹೊಂದಿ ಮೋಕ್ಷವನ್ನೈದಲು ಯೋಗ್ಯನಾಗುವನು."

ಸಂಸ್ಕೃತ ಟೀಕಾಟಿಪ್ಪಣಿಗಳಿಂದಲೇ ನಮ್ಮ ಧರ್ಮ ಗ್ರಂಥಗಳನ್ನು ತಿಳುಕೊಳ್ಳುವದು ಎಲ್ಲರಿಗೂ ಸಾಧ್ಯವಲ್ಲ. ಅದಕ್ಕಾಗಿ ನಮ್ಮ ಶಾಸ್ತ್ರದ ಪ್ರಮೇಯಗಳನ್ನು ಶುದ್ಧವಾದ ಮತ್ತು ಹೃದಯಂಗಮವಾದ ಕನ್ನಡ ಶೈಲಿಯಲ್ಲಿ ಬರೆದು ಎಲ್ಲರಿಗೂ ಒಂದು ದೊಡ್ಡ ಹಬ್ಬವನ್ನೇ ಮಾಡಿಸಿರುವರೆಂದು ಸವಣೂರ ಗೋವಿಂದರಾಯರನ್ನು ನಾವು ಮನಃಪೂರ್ವಕವಾಗಿ ಅಭಿನಂದಿಸದೆ ಇರಲಾರೆವು. ಇನ್ನೂ ಮಾಡಬೇಕೆಂದಿದ್ದ ಕಾರ್ಯಗಳು ಅವರಿಂದ ಹೀಗೆಯೇ ನೆರವೇರುವಂತೆ ಅನುಗ್ರಹಿಸಲೆಂದು ಯೋಗೇಶ್ವರನಾದ ಶ್ರೀಕೃಷ್ಣನನ್ನು ಅನನ್ಯಭಾವದಿಂದ ಪ್ರಾರ್ಥಿಸಿ ಈ ಮುನ್ನುಡಿಯನ್ನು ಮುಗಿಸುವೆನು.

ಧಾರವಾಡ
೨೫ ಮೇ ೧೯೩೨

ತಟ್ಟಿ ಶಾಮರಾಯ, ಬಿ. ಎ.
ಅಸಿಸ್ಟಂಟ ಮಾಸ್ತರ, ಹೆಣ್ಣುಮಕ್ಕಳ ಟ್ರೇನಿಂಗ ಕಾಲೇಜು, ಧಾರವಾಡ

# ಪ್ರಸ್ತಾವನೆಯು



ಪ್ರಿಯ ವಾಚಕರೇ, ಕನ್ನಡ ಗೀತಾರ್ಥಬೋಧಿನಿಯ ೧ನೆಯ ಭಾಗವು ಪ್ರಸಿದ್ಧವಾಗಿ ೩-೪ ವರ್ಷಗಳಾದವು ಈಗ ೨ನೆಯ ಭಾಗವು ವಾಚಕರೆಡೆಗೆ ಬರುತ್ತಲಿವೆ. ಅದರಲ್ಲಿ ೭ನೆಯ ಅಧ್ಯಾಯದಿಂದ ೧೮ನೆಯ ಅಧ್ಯಾಯದವರೆಗೆ ವಿವರಣೆಯಿದ್ದು, ಇಲ್ಲಿಗೆ ಗ್ರಂಥವು **ಪೂರ್ಣವಾಯಿತೆಂದು** ಹೇಳಲು ತುಂಬಾ ಆನಂದಪಡುವೆವು.

೨. ಇನ್ನು, ಪ್ರಕೃತ ಭಾಗವು ಸಿದ್ಧವಾಗಲು ಇಷ್ಟು ತಡವೇಕೆ ? ಎಂದು ಪ್ರಶ್ನೆ ಕೇಳಬಹುದು. ಆದರೆ, ಅದಕ್ಕೆ ಹಲವು ಕಾರಣಗಳುಂಟು. ಅವುಗಳಲ್ಲಿ ಮುಖ್ಯವಾದವುಗಳೆಂದರೆ, ( ೧ ) ಅದಕ್ಕೆ ಬೇಕಾದ ಸಹಾಯಭೂತ ಪುಸ್ತಕಗಳಲ್ಲಿ ಬಾಳೆಗಡ್ಡಿ ಶ್ರೀ ಲಕ್ಷ್ಮಣಾಚಾರ್ಯರು ಬರೆದ "ಗೀತೋಪನ್ಯಾಸ" ಎಂಬ ಪುಸ್ತಕದ ನಡುವಿನ ಭಾಗ ಎಂದರೆ ೭ರಿಂದ ೧೨ರ ವರೆಗೆ ಇರುವ ಅಧ್ಯಾಯಗಳ ಮಿಕ್ಕ ಭಾಗವು ಇಂದು ನಾಳೆ ಹೊರಬಿದ್ದೀತೆಂದು ದಾರಿ ನೋಡಬೇಕಾಯಿತು. ಕಡೆಯ ೬ ಅಧ್ಯಾಯಗಳ ಭಾಗವನ್ನು ಈ ಮೊದಲೇ ಅವರು ಮುದ್ರಿಸಿರುವರು ಆದರೆ, ನಡುವಿನ ೬ ಅಧ್ಯಾಯಗಳ ಭಾಗವು ಇದುವರೆಗೂ ಪ್ರಕಾಶಿತವಾಗಲಿಲ್ಲ. ಹೀಗೆ ನಮ್ಮ ಮನೋರಥವು ಕೈಗೂಡದೆ ವೇಚಾಡುತ್ತಿರಲು, ಮುಂದಿನ ಭಾಗದ ದೆಸೆಯಿಂದ ನಮ್ಮ ಅನೇಕ ಗ್ರಾಹಕರು ಒತ್ತಾಯಪಡಿಸಿದ್ದರಿಂದ, ಪ್ರಕೃತ ಭಾಗವನ್ನು ಕೈಕೊಳ್ಳಬೇಕೆಂದು ನಿಶ್ಚಯಿಸಿದೆವು. ಅದಕ್ಕನುಸರಿಸಿ ಹೋದ ವರುಷ ಇದನ್ನು ಪ್ರಾರಂಭಿಸಿ, ಕಡೆಯ ೬ ಅಧ್ಯಾಯಗಳನ್ನು ಮುಗಿಸಿದೆವು. ಆದರೆ, "**श्रेयांसि बहुविघ्नानि**" ಎಂಬ ಉಕ್ತಿಗನುಸರಿಸಿ ಸಿದ್ಧಪಡಿಸಿದ ಮೊದಲನೇ ಪ್ರತಿಯು ಶ್ರೀಮನ್ನಾರಾಯಣನ ದಯದಿಂದ ಕೈಗೆ ಬಂದ ತುತ್ತು ಬಾಯಿಗೆ ಬರದೇ ಹೋಯಿತು. ಹೀಗೆ ಮಾಡಿದ ಪರಿಶ್ರಮವು ವ್ಯರ್ಥವಾದುದನ್ನು ಕಂಡು, ಇದೊಂದು ಬಗೆಯ ಭಗವದನುಗ್ರಹವು ಎಂದು ಭಾವಿಸಿ, ಗೀತೆಯ ( ೨-೪೭ ) ನೆಯ ಶ್ಲೋಕದಲ್ಲಿ ಹೇಳಿದ ಶ್ರೀಕೃಷ್ಣನ ಉಪದೇಶವನ್ನು ಸ್ಮರಿಸಿ, ಒಮ್ಮೆ ಆಗಿಹೋದ ಕಡೆಯ ಆರು ಅಧ್ಯಾಯಗಳನ್ನೂ, ಹಿಂದಿನಿಂದ ನಡುವಿನ ಆರು ಅಧ್ಯಾಯಗಳನ್ನೂ, ಬರೆದು ಮುದ್ರಿಸಬೇಕಾಯಿತು. "**श्रीनिवासे प्रसन्ने किं दुर्लभम्** !" ಎಂದರೆ, "ಶ್ರೀ ಶ್ರೀನಿವಾಸನ ಅನುಗ್ರಹವಿದ್ದರೆ ಯಾವುದು ತಾನೇ ದುಷ್ಕರವು!" ಎಂಬ ಉಕ್ತಿಗನುಸರಿಸಿ, ಅವನ ಸಂಕಲ್ಪಕ್ಕೆ ವಿರೋಧವಾಗುವಂತೆ ವಿಘ್ನತರುವ ನಮ್ಮಂಥ ಪಾಮರರ ಪಾಡೇನು ! ಸಾರಾಂಶ, ಶ್ರೀಕೃಷ್ಣರೂಪೀ ಪರಮಾತ್ಮನು ಈ ಕಾರ್ಯಕ್ಕೆ ತಟ್ಟಿದ ವಿವಿಧ ವಿಘ್ನಗಳನ್ನು ದೂರಮಾಡಿ, ನಮ್ಮ ಅಲ್ಪ ಸೇವಾರೂಪವಾದ ಈ ಗ್ರಂಥವನ್ನು ಸ್ವೀಕರಿಸಿದ್ದಕ್ಕೆ ಅವನಿಗೆ ನಾವು ಅನನ್ಯಭಾವದಿಂದ ಶರಣಾಗತರಾಗಿ ಅದನ್ನು ವಾಚಕರ ಮುಂದೆ ಇಡಲು ಈಗ ಅನುಕೂಲವಾದದ್ದಕ್ಕೆ ಅತಿ ಹರುಷಪಡುವೆವು.

೩. ಈ ಭಾಗದಲ್ಲಿಯ ಬರೆವಣಿಗೆಯ ವ್ಯವಸ್ಥೆಯು ಹಿಂದಿನ ಭಾಗದಂತೆ ಇರುವದು. ಅದರಂತೆಯೇ ಅದಕ್ಕೆ ಸಹಾಯಭೂತ ಪುಸ್ತಕಗಳು ಕೂಡ ಮೊದಲಿನವೇ ಇದ್ದು, ನಡುವಿನ ಆರು ಅಧ್ಯಾಯಗಳಲ್ಲಿ ಮಾತ್ರ ಬಾಳೇಗಡ್ಡಿಯವರ ಉಪನ್ಯಾಸ ಬಂದಿಲ್ಲ. ಉಳಿದ ಪುಸ್ತಕಗಳ ಸಾರಾಂಶವು ಬಂದಿದೆ.

೪. ಈ ಗ್ರಂಥವು ಸಿದ್ಧವಾಗುವದಕ್ಕೆ ಶ್ರೀಂ ಪೂಂ ಪಾಂಡುರಂಗೀ ಶ್ರೀನಿವಾಸಾಚಾರ್ಯರು ಸಹಾಯಮಾಡಿರುವದಲ್ಲದೆ, ಭಾಷಾವಿಷಯಕ್ಕೆ ಮುಖ್ಯ ಸಹಾಯವು ಶ್ರೀಯುತ ನಾರಾಯಣ

## ಪ್ರಸ್ತಾವನೆಯು

ಶರ್ಮಾ ಇವರಿಂದಾಗಿದೆ. ಪ್ರೂಫ ತಿದ್ದುವ ಕಾರ್ಯದಲ್ಲಿ ಕೂಡ ಅವರ ಸಹಾಯವಿರುವದಲ್ಲದೆ, ಬೇರೆ ಒಬ್ಬಿಬ್ಬರ ಸಹಾಯವೂ ಉಂಟು. ಈ ಮೇರೆಗೆ, ಇವರೆಲ್ಲರು ನಿರಪೇಕ್ಷಬುದ್ಧಿಯಿಂದ ಅನುಕೂಲರಾದುದರಿಂದ ಅವರು ಮಾಡಿದ ಉಪಕಾರಕ್ಕೆ ಎಣೆಯಿಲ್ಲ. ಇದಲ್ಲದೆ, ಪರಮ ಕಾರುಣಿಕ ಪರಮಾತ್ಮನ ಸಾಮ್ರಾಜ್ಯದಲ್ಲಿ ಅವರಿಗೆ ಮಹಾಫಲ ದೊರೆಯದೆ ಇರದು ಎಂದು ನಮ್ಮ ಪೂರ್ಣ ನಂಬಿಗೆ ಇದೆ.

೫. ಇದಲ್ಲದೆ, ಅಚ್ಚುಕೂಟದ ಒಡೆಯರಾದ ಶ್ರೀಯುತ ಜರಾರ ಬಳವಂತರಾಯರೂ, ಅವರ ಕೈಕೆಳಗಿನ ಜನರೂ, ಅತಿ ಜಾಗ್ರತೆಯಿಂದ ತಪ್ಪುತಡೆಗಳಿಲ್ಲದೆ ಅಂದವಾಗಿ ಇದನ್ನು ಮುದ್ರಿಸಿ ಸಹಾಯಮಾಡಿದ್ದರಿಂದ ಅವರ ಉಪಕಾರವನ್ನೂ ಸ್ಮರಿಸದೆ ಇರಲಾರೆವು.

೬. ಈ ನಮ್ಮ ಅಲ್ಪ ಸೇವೆಯನ್ನು ಹಿಂದಿನಂತೆ ವಾಚಕರು ಸ್ವೀಕರಿಸಿ, ಅದರಲ್ಲಿಯ ದೋಷಗಳನ್ನೆಣಿಸದೆ ಯೋಗ್ಯ ಆಶ್ರಯವನ್ನು ಕೊಡುವರೆಂದು ಸವಿನಯ ಪ್ರಾರ್ಥಿಸುವೆವು. ನಮ್ಮ ಮೇಲೆ ಅನುಗ್ರಹವಿಟ್ಟು ಅವರು ಅದರಲ್ಲಿ ತೋರಿಸುವ ನ್ಯೂನತೆಗಳನ್ನು ಮುಂದಿನ ಆವೃತ್ತಿಯಲ್ಲಿ ದೂರ ಮಾಡುವೆವೆಂದು ಸಾರಿ ಹೇಳುವೆವು.

೭. ಈ ಭಾಗದ ಕ್ರಯವನ್ನು ೩ ರೂ. ಇಟ್ಟಿರುವೆವು. ಆದಾಗ್ಯೂ, ಈ ಮೊದಲು ೧ನೆಯ ಭಾಗವನ್ನು ತೆಗೆದುಕೊಂಡು ನಮಗೆ ಆಶ್ರಯಕೊಟ್ಟವರಿಗೆ ೨।೮ ರೂ. ಮತ್ತು ಈಗ ಒಮ್ಮೇಲೆ ಎರಡೂ ಭಾಗಗಳನ್ನು ತಗೊಳ್ಳುವವರಿಗೆ ೫।೮ ರೂ. ಮತ್ತು ಬರಿಯ ೨ನೆಯ ಭಾಗವನ್ನು ತಗೊಳ್ಳುವವರಿಗೆ ೩ ರೂ. ಹೀಗೆ ಕ್ರಯ ಬೀಳುವದು.

೮. ಕಡೆಗೆ ಸೃಷ್ಟಿ ಮುಂತಾದ ೮ ವಿಧದ ಕಾರ್ಯಗಳನ್ನು ಜರಗಿಸುತ್ತ ವಿವಿಧ ಅವತಾರಗಳಿಂದ ಕ್ರೀಡಿಸುವ ಮತ್ತು ಸಜ್ಜನರ ರಕ್ಷಣೆ ದುರ್ಜನರ ಶಾಸನಮಾಡುವ ಯಾವ ಪರಮಾತ್ಮನ ಕೃಪಾಕಟಾಕ್ಷದಿಂದ ಈ ಗ್ರಂಥವು ಮುಗಿದಿರುವದೋ, ಅವನಿಗೆ ಭಕ್ತಿಪೂರ್ವಕವಾಗಿ ನಮಸ್ಕರಿಸಿ, ಇಂತಹ ಸೇವೆಯನ್ನೇ ನಮ್ಮಿಂದ ಮುಂದೆ ಆದರೂ ಮಾಡಿಸಿ ಅದನ್ನು ಸ್ವೀಕರಿಸಲೆಂದು ಬೇಡಿಕೊಂಡು, ಈ ಪ್ರಸ್ತಾವನೆಯನ್ನು ಮುಗಿಸುವೆವು.

ಧಾರವಾಡ, ಅಂಕಲಿಗಿ ಬ್ಯಾಂಕ
ವೈಶಾಖ ಶುಂ ೩, ಶಕೆ ೧೮೫೪ } **ಸವಣೂರ ಗೋವಿಂದರಾಯರು**

# ಅನುಕ್ರಮಣಿಕೆಯು

**೭ನೆಯ ಅಧ್ಯಾಯವು** (ಹೆಸರು :—**ಜ್ಞಾನವಿಜ್ಞಾನಯೋಗವು.** ವಿಷಯ:— ಮುಖ್ಯವಾಗಿ ಪರಮಾತ್ಮನ ಮಹಿಮೆಯ ವರ್ಣನೆ )

೧. ಪರಮಾತ್ಮನು ತನ್ನ ಮಹಿಮೆಯನ್ನು ಕೇಳೆಂದು ಅರ್ಜುನನಿಗೆ ಹೇಳಿದ್ದು. ೨ ಸಾಮಾನ್ಯವಿಶೇಷ ಮಹಿಮೆಯನ್ನು ವರ್ಣಿಸುವೆನೆಂದು ಹೇಳಿದ್ದು. ೩ ಜ್ಞಾನವು ದುರ್ಲಭವೆಂದು ಹೇಳಿದ್ದು. ೪—೭ ತಿಳಿದುಕೊಳ್ಳತಕ್ಕದ್ದರ ವರ್ಣನೆ. ೮—೧೨ ವಿಶೇಷವಾಗಿ ತಿಳಿದುಕೊಳ್ಳುವ ಅಲೌಕಿಕ ಮಹಿಮೆಯ ವಿವರಣೆ. ೧೩ ತ್ರಿಗುಣಕಾರ್ಯದಿಂದ ಮೋಹಪಟ್ಟ ಜಗತ್ತಿಗೆ ಪರಮಾತ್ಮನನ್ನು ಯಥಾರ್ಥವಾಗಿ ತಿಳಿಯದಿರುವದು. ೧೪ ಅದಕ್ಕೆ ದುರ್ಗಾದೇವಿಯೇ ಕಾರಣಳು. ೧೫ ಅಸುರಸ್ವಭಾವದವರು ಮಾಯೆಯನ್ನು ಮಿಕ್ಕದ್ದರಿಂದ ಪರಮಾತ್ಮನನ್ನು ಹೊಂದರು. ೧೬ ಸತ್ಕರ್ಮಮಾಡಿ ಅವನನ್ನು ಹೊಂದುವವರಲ್ಲಿ ನಾಲ್ಕು ವಿಧವು. ೧೭—೧೮ ಈ ನಾಲ್ಕು ವಿಧದ ಅಧಿಕಾರಿಗಳು ಅತಿಭಕ್ತಿಯಿಂದ ಪರಮಾತ್ಮನನ್ನು ಹೊಂದುವರು. ೧೯ ಇಂಥ ಜ್ಞಾನಿಗಳು ದುರ್ಲಭರು. ೨೦ ಅನ್ಯ ದೇವತೆಗಳನ್ನು ಆರಾಧಿಸುವವರಿಗೆ ಆ ದೇವತೆಗಳ ಪ್ರಾಪ್ತಿ. ೨೧—೨೨ ಭಾಗವತರಿಗೆ ಪರಮಾತ್ಮನ ಪ್ರಾಪ್ತಿ ಮತ್ತು ಅನ್ಯರಿಗೆ ಅವರು ಅಪೇಕ್ಷಿಸಿದ ಫಲಪ್ರಾಪ್ತಿ ಪರಮಾತ್ಮನಿಂದಲೇ ಆಗುವದು. ೨೩ ಅನ್ಯ ದೇವತೆಗಳ ಆರಾಧನೆಯಿಂದ ದೊರೆತ ಫಲವು ನಶ್ವರ. ೨೪ ಪರಮಾತ್ಮನ ದ್ವೇಷಿಗಳ ವರ್ಣನೆ. ೨೫ ಮೂಢರೂ, ಅವರ ಅಜ್ಞಾನವೂ, ಪರಮಾತ್ಮನಿಗೆ ಆಧೀನ. ೨೬ ಪರಮಾತ್ಮನಿಗೆ ಮಾಯೆಯ ಬಂಧನವಿಲ್ಲ. ೨೭ ದ್ವಂದ್ವಗಳ ಮೋಹವು ಜೀವೇಶ್ವರರ ಅಭೇದಜ್ಞಾನಕ್ಕೆ ಕಾರಣ. ೨೮ ದ್ವಂದ್ವಮೋಹಕ್ಕೆ ಒಳಪಡದೆ ಇರುವ ಅಧಿಕಾರಿಗಳು. ೨೯ ಭಗವದ್ಭಜನಕ್ಕೆ ಪರಮಾತ್ಮನ ಜ್ಞಾನವೇ ಫಲ. ೩೦ ಪರಬ್ರಹ್ಮವಸ್ತುವು ಪರಮಾತ್ಮನಿಂದ ಭಿನ್ನ ಎಂಬ ಸಂದೇಹದ ನಿರಾಕರಣೆಯು. ಪುಟ ೧—೧೪

**೮ನೆಯ ಅಧ್ಯಾಯವು** (ಹೆಸರು:—**ಅಕ್ಷರಬ್ರಹ್ಮಯೋಗವು.** ವಿಷಯ :—ಮರಣ ಕಾಲಕ್ಕೆ ಕರ್ತವ್ಯವು).

೧—೨ ಬ್ರಹ್ಮನ್ಯಾರು ಎಂದು ಮುಂತಾದ ೮ ಪ್ರಶ್ನಗಳನ್ನು ಅರ್ಜುನನು ಕೇಳಿದ್ದು. ೩-೪ ಈ ಎಂಟು ಪ್ರಶ್ನಗಳಿಗೆ ಉತ್ತರ. ೫ ಅಂತಕಾಲದಲ್ಲಿ ಪರಮಾತ್ಮನ ಸ್ಮರಣೆಯ ಅವಶ್ಯಕತೆ. ೬ ಅಂತಕಾಲದಲ್ಲಿ ಸ್ಮರಣೋಪಾಯವು. ೭ ಅಂತಹ ಸ್ಮರಣೆಯ ಪ್ರಯೋಜನವು. ೮ ಅಭ್ಯಾಸಯೋಗದಿಂದ ಪರಮಾತ್ಮನ ಪ್ರಾಪ್ತಿ. ೯—೧೦ ಅಂತಕಾಲದಲ್ಲಿ ಪರಮಾತ್ಮನ ಸ್ಮರಣೆಯ ಪ್ರಕಾರ. ೧೧—೧೩ ವಾಯುಜಯವುಳ್ಳವರು ಅಂತಕಾಲದಲ್ಲಿ ಮಾಡುವ ಸ್ಮರಣೆಯ ಸರಣಿಯು. ೧೪ ಅಂತಹ ಸ್ಮರಣೆಯು ನಿತ್ಯ ಅಭ್ಯಾಸಿಗಳಿಗೆಯೇ ಎಂದು ಸ್ಪಷ್ಟೀಕರಿಸಿದ್ದು. ೧೫ ಅಭ್ಯಾಸಿಗಳಿಗೆ ಪರಮಾತ್ಮನ ಪ್ರಾಪ್ತಿಯೇ ಫಲ. ೧೬ ಪರಮಾತ್ಮನನ್ನು ಹೊಂದಿದವರಿಗೆ ಪುನರಾವೃತ್ತಿ ಇಲ್ಲ. ೧೭—೧೯ ಪರಮಾತ್ಮನು ಸೃಷ್ಟಿ-ಪ್ರಲಯಕರ್ತನೂ, ಅವುಗಳ ವಿಚ್ಛೇದವಾಗದಂತೆ ಪ್ರವರ್ತನೆಯೂ. ೨೦—೨೧ ಜಗತ್ತಿ

## ಅನುಕ್ರಮಣಿಕೆಯು

# ಅನುಕ್ರಮಣಿಕೆಯು

# ಅನುಕ್ರಮಣಿಕೆಯು

# ಅನುಕ್ರಮಣಿಕೆಯು





# ಉಪೋದ್ಘಾತವು

ಮಹನೀಯರೇ, ಹಿಂದಿನ ಭಾಗದಲ್ಲಿ ಗೀತೆಯ ಮಹಿಮೆಯೂ, ಅದರಿಂದ ಲಭಿಸುವ ಮಹಾಫಲವೂ, ತಕ್ಕಮಟ್ಟಿಗೆ ವರ್ಣಿಸಲ್ಪಟ್ಟಿವೆ. ಆದಾಗ್ಯೂ, ಈ ಭಾಗವು ಉಪಸಂಹಾರರೂಪವಾದ್ದರಿಂದ ಇಲ್ಲಿ ಮತ್ತೆ ಅಲ್ಪ ಸಾಮಾನ್ಯವಾಗಿ ಹೇಳಿದರೆ ಅಪ್ರಾಸಂಗಿಕವಾಗಲಾರದು.

೨. ಭವಸಾಗರದಲ್ಲಿ ವಿಷಯಲೋಲುಪರಾಗಿ ಸಂಚರಿಸುವ ಮಾನವ ಪ್ರಾಣಿಗಳು ಸ್ವಲ್ಪ ಆಲೋಚಿಸಿ ನೋಡಲು, ಅವರಿಗೆ ತಿಳಿದುಬರುವದೇನಂದರೆ, ಪ್ರತಿಯೊಬ್ಬನು ತನಗೆ ಯಾವಾಗಲೂ ಸುಖವಾಗಲೆಂತಲೂ, ದುಃಖಲೇಶವು ತಟ್ಟಕೂಡದೆಂತಲೂ ಬಯಸುವದು ಅನುಭವದ ಸಂಗತಿಯು. ಆದರೆ, ಅಂತಹ ಸ್ಥಿತಿಯು ಏತರಿಂದ ಉಂಟಾಗುವದು ? ಅದಕ್ಕೆ ಉಪಾಯವೇನು ? ಈ ಮುಂತಾದವುಗಳನ್ನು ಅರಿತವರ ಸಂಖ್ಯೆ ಅತಿ ಕಡಿಮೆ. ಮೋಕ್ಷಫಲವೆಂದರೆ ತನ್ನ ಮತ್ತು ಪರಮಾತ್ಮನ ಸ್ವರೂಪಸಾಕ್ಷಾತ್ಕಾರದಿಂದ ಹುಟ್ಟುವ ಆನಂದವು. ಇದೇ ನಿತ್ಯಸುಖಕ್ಕೆ ಕಾರಣವು. ಇಂತಹ ಫಲದ ಪ್ರಾಪ್ತಿಗೆ ಬೇಕಾದ ಉಪಾಯವನ್ನರಿಯದೆ ಸಂಸಾರದ ಅಸಾರವಾದ ವಿಷಯಸುಖದಲ್ಲಿ ಮಗ್ನರಾಗಿ ಪ್ರಾಣಿಗಳು ತಿರುತಿರುಗಿ ಒದಗುವ ಭವಜನ್ಮಗಳಲ್ಲಿ ತಿರುಗುವರಲ್ಲ! ಮೊಟ್ಟಮೊದಲು ಪಶು-ಪಕ್ಷಿ, ಕ್ರಿಮಿ-ಕೀಟ, ನಾಯಿ-ನರಿ ಮುಂತಾದ ತಿರ್ಯಗ್ಯೋನಿಗಳನ್ನು ಮಿಕ್ಕಿ ಮನುಷ್ಯ-ಜನ್ಮ ಬರುವದೇ ಕಷ್ಟ. ಭರತಖಂಡದ ಭೂಮಿಯು ಸಾಧನಭೂಮಿ ಎಂದು ಪ್ರಸಿದ್ಧ. ಅಲ್ಲಿ ಮನುಷ್ಯದೇಹ ಬರುವದು ಕಷ್ಟ, ಅಲ್ಲಿ ಕೂಡ ಸತ್ಕುಲ ವೈಷ್ಣವ-ಜನ್ಮವು ಅದಕ್ಕೂ ಮೀರಿದ್ದು; ಅಂತಹ ಜನ್ಮವು ಪೂರ್ವಜನ್ಮದ ಸುಕೃತಿಗನುಸರಿಸಿ ಒಂದುವೇಳೆ ಬಂದರೂ, ಶಾಸ್ತ್ರಗಳಲ್ಲಿ ಹೇಳಿದ ಉಪಾಯದಿಂದ ಅದನ್ನು ನೀಗುವದು ಎಲ್ಲಕ್ಕೂ ಕಷ್ಟಸಾಧ್ಯ. ಪುಣ್ಯಕರ ಈ ಭರತಖಂಡದ ಭೂಮಿಯಲ್ಲಿ ಜನ್ಮಹೊಂದಿ ಪರಮಾತ್ಮನ ಆರಾಧನೆಯಲ್ಲಿಯೇ ತತ್ಪರರಾಗಿರಬೇಕೆಂದು ದೇವತೆಗಳು ಕೂಡ ಬಯಸುವರು. ಏಕೆಂದರೆ, ಅಲ್ಲಿ ಸಾಧನಭೂತ ಮನುಷ್ಯದೇಹದಿಂದ ಪರಮಾತ್ಮನ ಉಪಾಸನೆಗೈದು ಅಕ್ಷಯ ಸುಖವಾದ ಮೋಕ್ಷವನ್ನು ಹೊಂದಲು ಯತ್ನಿಸಬಹುದು.

ಇನ್ನು, ಕಲಿಕಾಲದ ಮಹಿಮೆಗೂ, ಗೌತಮಋಷಿಯ ಶಾಪಕ್ಕೂ, ಅನುಸರಿಸಿ ಧರ್ಮವೂ, ಜ್ಞಾನವೂ, ನಷ್ಟವಾಗಿ ಸಜ್ಜನರು ಭವಸಾಗರದಲ್ಲಿ ಮುಳುಮುಳುಗೇಳುವದನ್ನು ಕಂಡು ಕೃಪಾಸಾಗರನೂ, ಜಗತ್ತಿಗೆ ಒಡೆಯನೂ, ಆದ ಶ್ರೀಮನ್ನಾರಾಯಣನು ಶ್ರೀ ವ್ಯಾಸರೂಪದಿಂದ ಅವತರಿಸಿ, ಬ್ರಹ್ಮಸೂತ್ರ, ಭಾರತ, ಭಾಗವತ ಮುಂತಾದವುಗಳನ್ನು ರಚಿಸಿದನು. ಅವುಗಳಲ್ಲಿ ವೇದಾಂತವಿಚಾರಕ್ಕೆ ( ಪರಬ್ರಹ್ಮವಸ್ತುವಿನ ವಿಷಯಕ್ಕೆ ) ಪ್ರಸ್ಥಾನತ್ರಯಗಳೆಂದರೆ ಸೂತ್ರಭಾಷ್ಯ, ಗೀತಾಭಾಷ್ಯ ಉಪನಿಷದ್ಭಾಷ್ಯ, ಇವುಗಳಾಗಿವೆ. ಹೀಗೆ ಗಂಗೋದಕಕ್ಕೆ ಸಮಾನವಾದ ಈ ಗೀತೆಯನ್ನು ಮಹಾಭಾರತದಲ್ಲಿ ಸೇರಿಸಿದ್ದರಿಂದ ಅದು ಕೂಡ ಐನೆಯ ವೇದವೆಂದು ನಿಶ್ಚಿತವಾಗಿರುವದು. ಅದರಲ್ಲಿ ಆರಾರು ಅಧ್ಯಾಯಗಳಂತೆ ಮೂರು ಭಾಗಗಳುಂಟು. ಮೊದಲಿನ ಭಾಗದಲ್ಲಿ ಕರ್ಮಯೋಗವೂ, ಎರಡನೆಯದರಲ್ಲಿ ಭಕ್ತಿಯೋಗವೂ, ಕಡೆಯಭಾಗದಲ್ಲಿ ಜ್ಞಾನಯೋಗವೂ ಪ್ರತಿಪಾದಿಸಲ್ಪಟ್ಟಿವೆ. ಗೀತೋಪದೇಶವು ಅತಿಗಹನವಾದುದರಿಂದಲೂ, ಗೀರ್ವಾಣಭಾಷೆಯ ಸ್ಮರಣೆಯು ಅತಿ ವಿಚಿತ್ರವಾದ್ದರಿಂದಲೂ, ಅದರಮೇಲೆ ಅನೇಕ ಪುಸ್ತಕಗಳೂ, ಪ್ರವಚನಗಳೂ, ದಿನಾಲು ನಡಿಯುತ್ತಲಿವೆ. ಆದರೆ, ಮಧ್ವಮತಕ್ಕನುಸರಿಸಿದ ಪ್ರಮೇಯಗಳು ಗೀರ್ವಾಣಭಾಷೆಯ ಪರಿಚಯವಿಲ್ಲದವರಿಗೆ ಲಾಭವಾಗಬೇಕೆಂದು ಕೈಲಾದಮಟ್ಟಿಗೆ ಈ ನಮ್ಮ ಸಾಹಸವು.

# ಉಪೋದ್ಘಾತವು

೩. ಇನ್ನು ಗೀತೆಯು ಮೊದಲಿನ ಆರು ಅಧ್ಯಾಯುಗಳಲ್ಲಿ ಮೊದಲು ಕರ್ಮಯೋಗವನ್ನು ಪ್ರತಿಪಾದಿಸಿದ್ದೇಕೆಂದು ಕೇಳಿದರೆ, ಅದಕ್ಕೆ ' ಅಂತಃಕರಣಶುದ್ಧಿಯೇ ' ಫಲ ಎಂದು ಉತ್ತರ. ಮನೆಗೆ ತಳಹದಿಯೂ, ವೃಕ್ಷಕ್ಕೆ ಭೂಮಿಯೂ ಹೇಗೆ ಆಧಾರವೋ ಹಾಗೆ ಅಂತಃಕರಣಶುದ್ಧಿಯು ಮುಖ್ಯ ಆಧಾರವು. ಅದು ದೃಢವಾಗಿದ್ದರೆ ಮೇಲಿನ ಕಟ್ಟಡಕ್ಕೆ ಧಕ್ಕೆಯಾಗದು. ಇದರ ಸಾಧನೆಗೆ ಕರ್ಮ ಯೋಗವು ಅತ್ಯವಶ್ಯ: ಏಕೆಂದರೆ, ಕರ್ಮಮಾಡದೆ ಪ್ರಾಣಿಯು ಒಂದು ಅರಕ್ಷಣವಾದರೂ ಇರನು. ಆ ಕರ್ಮವು ಪರಮಾತ್ಮನ ಆಜ್ಞಾರೂಪವಾದ ವಿಧಿಗನುಸರಿಸಿ ಇದ್ದು, ವರ್ಣಾಶ್ರಮಗಳಿಗೆ ಉಚಿತ ವಾಗಿರಬೇಕು. ಇನ್ನು, ಸಂಸಾರದಲ್ಲಿಯಂತು ದುಃಖಪ್ರವಾಹವು ಸಮುದ್ರದ ನೀರಿನಂತೆ ಹರಿಗಡಿಯದೆ ತೆರೆಗಳು ದಂಡೆಗೆ ಬಡಿಯುತ್ತಿರುವಂತೆ ಪ್ರಾಣಿಗಳಿಗೆ ಸಾಯುವವರೆಗೆ ಅದು ಬೆನ್ನುಬಿಡದು. ಸಮುದ್ರ ದಲ್ಲಿಯ ಮತ್ಸ್ಯತಿಮಿಂಗಿಲೋಪಾದಿಯಲ್ಲಿ ಅರಿಷಡ್ವರ್ಗಗಳು ದೇಹದಲ್ಲಿ ಹುದುಗಿಕೊಂಡಿರುವವು. ಅವುಗಳಲ್ಲಿ ಕಾಮವು ಎಲ್ಲಕ್ಕೂ ಹಿರಿದು. ಅದರ ಬಯಕೆಗಳನ್ನು ಪೂರೈಸಿದಂತೆ ಅಗ್ನಿಯಲ್ಲಿ ಹಾಕಿದ ಆಹುತಿಯಂತೆ ಅದು ಬೆಳೆದು, ಅಗ್ನಿಯು ಹೆಚ್ಚೆಚ್ಚು ಪ್ರಜ್ವಲಿಸುವಂತೆ ಕಾಮವು ಕೂಡ ಬೆಳೆಯುವದು. ಆದ್ದರಿಂದ ಅದರ ನಿಗ್ರಹವು ಬಹುಕಷ್ಟಸಾಧ್ಯವೆಂದು ಶಾಸ್ತ್ರದ ಆಜ್ಞೆಯು. ಅದನ್ನು ಹಿಮ್ಮೆಟ್ಟಿಸಿದರೆ, ಅನ್ಯ ಶತ್ರುಗಳು ತಾವಾಗಿಯೇ ಹಿಮ್ಮುಖವಾಗುವವು. ಅದರಿಂದಲೇ ಇಂದ್ರಿಯನಿಗ್ರಹ ಸುಲಭ. ಇಲ್ಲಿ ಕೂಡ ಅನ್ಯ ಇಂದ್ರಿಯನಿಗ್ರಹಕ್ಕಿಂತ जिव्हालौल्यम् , गुह्येन्द्रियलौल्यम् ( ನಾಲಿಗೆಯ ರುಚಿ ವಿಷಯೇಂದ್ರಿಯ ಆಸೆ, ಇವುಗಳ ನಿಯಮನ ) ಹೀಗೆ ಎರಡನ್ನು ಬಿಗಿಹಿಡಿಯುವದು ಅತಿಕಷ್ಟ. ಅವು ವಶವಾದರೆ ಉಳಿದ ಇಂದ್ರಿಯಗಳು ತಾವಾಗಿಯೇ ಆಧೀನವಾಗುವವು. ಇದಕ್ಕೆ ಕರ್ಮಯೋಗವೇ ಸಿದ್ಧೋಪಾಯ. ಹೀಗೆ ಅಂತಃಕರಣವು ಕರ್ಮಯೋಗದಿಂದ ಶುದ್ಧವಾದಬಳಿಕ ಪರಮಾತ್ಮನಲ್ಲಿ ಶ್ರದ್ಧೆಯು ಹುಟ್ಟುವದು; ಆ ಶ್ರದ್ಧೆಯು ಕೂಡ ಸಾತ್ವಿಕವಾಗಿ ಇರಬೇಕೇ ಹೊರ್ತು ರಾಜಸ–ತಾಮ ಸವಲ್ಲ. ಸಾತ್ವಿಕಶ್ರದ್ಧೆಗೆ ಸಾತ್ವಿಕ ಆಹಾರ, ಯಜ್ಞ, ದಾನ, ತಪಸ್ಸು ಮುಂತಾದವುಗಳು ಅವಶ್ಯ. ಭಕ್ತಿಯು ವೈರಾಗ್ಯಕ್ಕೆ ಉಗಮಸ್ಥಾನವಾದುದರಿಂದ ಅದರಿಂದ ವೈರಾಗ್ಯವು ಹುಟ್ಟುವದು. ವಿರಕ್ತಿಯು ದೃಢವಾದರೆ ಇಂದ್ರಿಯಗಳು ತಮ್ಮ ತಮ್ಮ ವಿಷಯಗಳ ಕಡೆಗೆ ಹರಿಯದೆ, ಕೇವಲ ಪರಮಾತ್ಮನಲ್ಲಿಯೇ ಮನಸು ದೃಢವಾಗುವದು. ಇದೇ ನಡುವಿನ ಆರು ಅಧ್ಯಾಯಗಳ ಸಾರಾಂಶವು. ಹೀಗೆ ಭಕ್ತಿ ವಿರಕ್ತಿಗಳು ದೃಢವಾಗಲು, ತಾನಾರು? ಮನುಷ್ಯದೇಹಕ್ಕೆಬಂದ ತನ್ನ ಕರ್ತವ್ಯ ವೇನು ? ತನ್ನನ್ನು ಜನ್ಮಕ್ಕೆ ತಂದ ಪರಮಾತ್ಮನು ಎಂಥವನು ? ಅವನ ಸ್ವರೂಪವು ಎಂಥದು ? ಅವನ ಗುಣಗಳು ಎಂಥವು ? ಇವೇ ಮೊದಲಾದ ಆಲೋಚನೆಗಳು ಮುಂದರಿಯುವವು. ಮುಂದೆ ಅವುಗಳ ನ್ನೆಲ್ಲ ತಿಳಿದುಕೊಳ್ಳುವದಕ್ಕೆ ಪ್ರಾಣಿಯು ಶಾಸ್ತ್ರಾಲೋಚನೆ ಮೊದಲು ಮಾಡುವನು. ಹೀಗೆ ಶಾಸ್ತ್ರ ದಲ್ಲಿ ವಿಧಿಸಿದಂತೆ ಶ್ರವಣ, ಮನನ, ಧ್ಯಾನಾದಿಗಳಲ್ಲಿ ತತ್ಪರನಾದರೆ, ಪರಮಾತ್ಮವಿಷಯಕ ಪರೋಕ್ಷ ಜ್ಞಾನವೂ, ಅದರಿಂದ ಅಪರೋಕ್ಷಜ್ಞಾನವೂ ಆಗುವವು. ಅದರಿಂದ ಪರಮಾತ್ಮನು ಸಂತುಷ್ಟನಾಗಿ ತನ್ನ ಸಾಕ್ಷಾತ್ಕಾರ ಮಾಡಿಸಿ ಅಕ್ಷಯಸುಖವಾದ ಮೋಕ್ಷ ಎಂದರೆ ತಿರುತಿರುಗಿ ಜನ್ಮಬಾರದ ತನ್ನ ಲೋಕವಾದ ವೈಕುಂಠದಲ್ಲಿ ಅವನಿಗೆ ಸ್ಥಾನಕೊಡುವನು. ಇನ್ನು ಪ್ರಾಣಿಯು ರಾಜಸಸ್ವಭಾವದವ ನಾದರೆ, ಅವನಿಗೆ ಸಾಂತಾನಿಕ ಲೋಕದಲ್ಲಿ ವಾಸವಿದ್ದು, ಅವನು ಭೂಲೋಕ ಮುಂತಾದವುಗಳಲ್ಲಿ ಯಾವಾಗಲೂ ಜನಿಸುತ್ತ ಇರುವನು. ಅವನು ತಾಮಸ ಸ್ವಭಾವದವನಾದರೆ, ಪಶ್ವಾದಿ ಕೀಳಯೋನಿ ಗಳಲ್ಲಿ ಜನ್ಮಹೊಂದಿ ಹಿಂದೆ ಮಾಡಿದ ಪುಣ್ಯವೆಲ್ಲ ನಷ್ಟವಾಗಿ ಪಾಪವು ಪೂರ್ಣವಾದಬಳಿಕ ಅವನ ಸ್ವರೂಪಕ್ಕೆ ವಿಧಿಸಿದ ಅಂಧಂತಮಸ್ಸಿಗೆ ಹೋಗುವನು. ಇದುವೇ ಕಡೆಯ ಆರು ಅಧ್ಯಾಯಗಳ ಸಾರಾಂಶ ಎಂದು ತಿಳಿದುಬರುವದು. ಒಟ್ಟಾರೆ, ಶಾಸ್ತ್ರದ ಉಪಸಂಹಾರವೇನಂದರೆ, ಶ್ರೀವಿಷ್ಣುವೇ

## ಉಪೋದ್ಘಾತವು

ಸರ್ವೋತ್ತಮನು. ಅವನಿಗೆ ಅನ್ಯ ಸಮಾನರಿಲ್ಲ. ಪ್ರಮಾಣದಿಂದ ಪ್ರಸಿದ್ಧವಾಗಿ ಕಣ್ಣಿಗೆ ತೋರುವ ಈ ಜಗತ್ತು ಸತ್ಯ, ಹೊರತು ಮಿಥ್ಯೆಯಲ್ಲ, ಪಂಚಭೇದಗಳೂ, ತಾರತಮ್ಯವೂ ಸತ್ಯ, ಅದರಿಂದಲೇ ಮುಕ್ತಿಯ ಆಸೆ, ಇತ್ಯಾದಿ.

೪. ಭಾರತಯುದ್ಧದ ಕಾಲಕ್ಕೆ ಅರ್ಜುನನನ್ನು ನೆವಮಾಡಿ ಸಕಲ ಲೋಕೋದ್ಧಾರಕ್ಕಾಗಿ ಶ್ರೀಕೃಷ್ಣನು ಅವನಿಗೆ ಅತಿಗೌಪ್ಯವಾದ ಈ ಗೀತಾಶಾಸ್ತ್ರವನ್ನು ಉಪದೇಶಿಸಿರುವನು. ಆದುದರಿಂದ ಎಲ್ಲರೂ ಈ ಶಾಸ್ತ್ರದ ರಹಸ್ಯವನ್ನು ತಿಳಿದು, ಅದನ್ನು ಅನ್ಯರಿಗೆ ಬೋಧಿಸುತ್ತ ಸದ್ಗತಿಯನ್ನು ಹೊಂದಬೇಕು. ಈ ಶಾಸ್ತ್ರದ ವಿಷಯವನ್ನು ಎಷ್ಟು ವರ್ಣಿಸಿದರೂ ಪ್ರಾಣಿಮಾತ್ರದ ಆಯುಷ್ಯವು ಸಾಲದು. ಆದ್ದರಿಂದ ನಮ್ಮ ಮಂದಮತಿಗೆ ತೋಚಿದಷ್ಟು ದಿಗ್ದರ್ಶನಮಾಡಿ ಈ ಉಪೋದ್ಘಾತವನ್ನು ಇಲ್ಲಿಯೇ ಮುಗಿಸುವೆವು.

೫. ಇನ್ನು ವಿದ್ವಾಂಸರ ಪ್ರೋತ್ಸಾಹನೆಗನುಸರಿಸಿ ನಾವು ಪ್ರಕಾಶನಕಾರ್ಯವನ್ನು ವಹಿಸಿ ಇಂದಿಗೆ ೬ ವರ್ಷಗಳಾದವು. ಆ ಅವಧಿಯಲ್ಲಿ ಎಷ್ಟು ಗ್ರಂಥಗಳು ಪ್ರಕಾಶಿತವಾದವೆಂಬುದು ಈ ಪುಸ್ತಕದ ಕೊನೆಗೆ ಸೇರಿಸಿದ ಪಟ್ಟಿಯಿಂದ ತಿಳಿದುಬರುವದು. ಅವುಗಳಲ್ಲಿ ಶ್ರೀಮದ್ಭಾಗವತದ ಕಡೆಯ ಟಿಪ್ಪಣಿಯಾದ ಶ್ರೀಸತ್ಯಧರ್ಮ ವ್ಯಾಖ್ಯಾನವೂ, ಶ್ರೀಮನ್ನ್ಯಾಯಸುಧೆಯ ೨।೩ ಅಧ್ಯಾಯಗಳೂ, ಇಷ್ಟೇ ಉಳಿದವೆ. ಪರಮಾತ್ಮನ ಅನುಗ್ರಹದಿಂದ ಅವು ಕೂಡ ಮುಗಿಯುವವೆಂದು ಪೂರ್ಣನಂಬಿಗೆ ಇದೆ.

೬. ಕಡೆಗೆ, ಮಹಾಸಮರ್ಥನಾದ ಶ್ರೀಮನ್ನಾರಾಯಣನು ನಮಗೂ, ನಮ್ಮ ವಾಚಕರಿಗೂ, ಸಕಲ ಸದ್ವೈಷ್ಣವರಿಗೂ, ಸದ್ಭಕ್ತಿ-ಸದ್ಗತಿಗಳನ್ನು ಕೊಟ್ಟು ಸಂತೈಸಲೆಂದು ನಮ್ರಭಾವದಿಂದ ಶರಣಾಗತರಾಗಿ ಬೇಡಿಕೊಂಡು ಕೈಯೊಳ್ಳಗಿದ್ದ ಈ ಗ್ರಂಥವನ್ನು ವಾಚಕರಿಗೆ ಒಪ್ಪಿಸುವೆವು.

ಅಂಕಲಿಗಿ ಬ್ಯಾಂಕ, ಧಾರವಾಡ
ವೈಶಾಖ ಶುಂ ೩, ಶಕೆ ೧೮೫೪

**ಸವಣೂರ ಗೋವಿಂದರಾಯರು**
ಗ್ರಂಥಕರ್ತ





ಎಲೆ ಧನಂಜಯ ಕೇಳು ಶೋಕಕೆ । ಕೊಲೆಗರುಹರಲ್ಲದೆ ನಿಜಾನ್ವಯ । ತಿಲಕ ಭೀಷ್ಮ ದ್ರೋಣ ಮೊದಲಾದವರ ನೀ ಕುರಿತು ॥
ಅಳಲುತಿಹೆ ಬಲ್ಲವರೊಲು ನೀ । ಹಲವ ವಾದಿಸುತಿಹೆ ಮೃತರಿಗಂ । ತುಳಿದಿಹರಿಗಂ ತತ್ವವಿದರಳರೆಂದನಸುರಾರಿ ॥

— ನಾಗರಸ ಕವಿ

# ಗೀತಾರ್ಥ ಬೋಧಿನಿ



## ೭ನೆಯ ಅಧ್ಯಾಯವು

೧. ಹಿಂದೆ (೨–೩೯)ನೆಯ ಶ್ಲೋಕದಲ್ಲಿ 'ಪರಮಾತ್ಮನ ಜ್ಞಾನದ ಉಪಾಯವನ್ನು ಹೇಳುವೆ' ಎಂದು ಪ್ರತಿಜ್ಞೆಮಾಡಿ, 'ಫಲಾಸಕ್ತಿಯನ್ನು ತೊರೆದ ನಿಷ್ಕಾಮ ಕರ್ಮಾನುಷ್ಠಾನವೆಂಬ ಕರ್ಮಯೋಗವು ಜ್ಞಾನಕ್ಕೆ ಬಹಿರಂಗೋಪಾಯವಾಗಿದೆ' ಎಂದು ೫ನೆಯ ಅಧ್ಯಾಯ ಮುಗಿಯುವವರೆಗೆ ಹೇಳಿ, ೬ನೆಯ ಅಧ್ಯಾಯದಲ್ಲಿ 'ಜ್ಞಾನಕ್ಕೆ ಧ್ಯಾನರೂಪಯೋಗವು ಅಂತರಂಗಸಾಧನ' ಎಂದು ಹೇಳಿ, ಈಗ ಹಿಂದೆ ಹೇಳಿದ ಧ್ಯಾನವನ್ನು ಭಕ್ತಿಪೂರ್ವಕವಾಗಿ ಆಚರಿಸಿದರೇನೇ ಜ್ಞಾನಕ್ಕೆ ಅದೊಂದು ಮೆಟ್ಟಿಲಾಗುವದೇ ಹೊರತು ಚೈದ್ಯಾದಿಗಳಂತೆ ದ್ವೇಷಮೂಲಕ ಆಚರಿಸದರೆ ಅಲ್ಲ, ಆದ್ದರಿಂದ, ಭಕ್ತಿಗಾಗಿ ಪರಮಾತ್ಮನ ಮಹಿಮೆಯು ಈ ಅಧ್ಯಾಯ ಮೊದಲ್ಗೊಂಡು ಮುಂದೆ ೬ ಅಧ್ಯಾಯಗಳು ಮುಗಿಯುವವರೆಗೆ ವಿವರಿಸಲ್ಪಡುವದು. ಇನ್ನು, (೨–೧೨) ನೆಯ ಶ್ಲೋಕದಿಂದ ಮೊದಲಿನ ಆರು ಅಧ್ಯಾಯಗಳಲ್ಲಿ ಪರಮಾತ್ಮನ ಮಹಿಮೆಯು ವರ್ಣಿಸಲ್ಪಟ್ಟಿದ್ದರೂ, ಅಲ್ಲಿ ಸಾಧನವೇ ಮುಖ್ಯವಾಗಿ ಹೇಳಲಾಗಿದೆ. ಪ್ರಕೃತ, ಮುಂದಿನ ೬ ಅಧ್ಯಾಯಗಳಲ್ಲಿ ಅಲ್ಲಲ್ಲಿ ಸಾಧನವು ನಿರೂಪಿಸಲ್ಪಟ್ಟಾಗ್ಯೂ, ಪರಮಾತ್ಮನ ಮೈಮೆಯೇ ಮುಖ್ಯತಃ ಹೇಳಲ್ಪಟ್ಟಿದ್ದರಿಂದ ಹಿಂದಿನ–ಮುಂದಿನ ೬ ಅಧ್ಯಾಯಗಳಲ್ಲಿದ್ದ ಭೇದವು ಸಿದ್ಧವಾಯಿತು. ಯಾವುದರ ಉದ್ದೇಶವಾಗಿ ಸಾಧನವು ಹೇಳಲ್ಪಟ್ಟಿತೋ ಅದರ ಜ್ಞಾನಕ್ಕಾಗಿ ತಿಳಿಯತಕ್ಕ ವಸ್ತುವಿನ ಮಹಿಮೆಯ ನಿರೂಪಣೆಯೇ ಈ ಎರಡು ವಿಧದ ಆರು ಅಧ್ಯಾಯಗಳಿಗೆ ಇರುವ ಕಾರ್ಯ–ಕಾರಣ ಸಂಬಂಧವೆಂದು ತಿಳಿಯಬೇಕು. ಶ್ರೀಕೃಷ್ಣನು ಅರ್ಜುನನಿಗೆ ಪರಮಾತ್ಮನ ಮಹಿಮೆಯನ್ನು ವರ್ಣಿಸಲು ಪ್ರಾರಂಭಿಸಿದ್ದು:—

**श्रीभगवानुवाच ।**

**मय्यासक्तमनाः पार्थ योगं युंजन्मदाश्रयः ।**
**असंशयं समग्रं मां यथा ज्ञास्यसि तच्छृणु ॥ १ ॥**

ಅಂ—ಪಾರ್ಥ, ನನ್ನಲ್ಲಿ ಅತಿ ಸ್ನೇಹಯುಕ್ತನಾದವನು ಎರಡು ವಿಧದ ಯೋಗ ಅಂದರೆ ಜ್ಞಾನ ಮತ್ತು ಸಾಧನಗಳನ್ನು ಆಚರಿಸುತ್ತ ನನ್ನಲ್ಲಿಯೇ ಮನತೊಡಗಿಸಿ ಅಂದರೆ, 'ಪರಮಾತ್ಮನೇ ಎಲ್ಲವನ್ನು [illegible] ಮಾಡಿಸುವವನು, ಅವನೇ ನನ್ನ ರಕ್ಷಕನು, ಆಶ್ರಯನು' ಎಂದು ತಿಳಿಯುವವನು. ಯಾವ ಸಂದೇಹವನ್ನು ಸಿಲುಕದೆ, [illegible] ವಿಷಯಕ ಜ್ಞಾನವು ನಿನಗೆ [illegible]ಗಾಗುವದೋ ಅದನ್ನು ಕೇಳು. ನಾನು [illegible] ಜ್ಞಾನವನ್ನು [illegible] ಅದನ್ನು ಕೇಳ [illegible] ಸಂದಿಗ್ಧಿಯಾಯಿತು.

೨. ಶ್ರವಣವು ವಚನಕ್ಕೆ ಅಧೀನವೆಂದು ಹೇಳಿದ್ದು:—

**ज्ञानं तेऽहं सविज्ञानमिदं वक्ष्याम्यशेषतः ।**
**यज्ज्ञात्वा नेह भूयोऽन्यज्ज्ञातव्यमवशिष्यते ॥ २ ॥**

**ಅಂ**—ಅರ್ಜುನಾ, ನನ್ನ ವಿಷಯಕ್ಕೆ ವಿಶೇಷಜ್ಞಾನಸಹಿತ ಜ್ಞಾನವನ್ನು ಅಂದರೆ, ತಿಳಿದು ಕೊಳ್ಳುವ ಸಾಮಾನ್ಯ–ವಿಶೇಷ ಮಹಿಮೆಯನ್ನು ನಿನ್ನ ಯೋಗ್ಯತೆಗನುಸರಿಸಿ ಏನೂ ಬಿಡದೆ ಹೇಳುವೆ. ತಾನು ಹೇಳತಕ್ಕದ್ದನ್ನು ಸ್ತುತಿಸಿದ್ದು:— ನನ್ನ ಮಹಿಮೆಯನ್ನರಿತಬಳಿಕ ಮತ್ತೆ ತಿಳಿಯತಕ್ಕದ್ದೇನೂ ಉಳಿಯದು.

೩. ಪರಮಾತ್ಮನ ಮಹಿಮೆಯನ್ನರಿತಬಳಿಕ ಬೇರೆ ತಿಳಿಯತಕ್ಕದ್ದೇನೂ ಉಳಿಯಲಿಲ್ಲೆಂದೂ, ಹೇಳಿದ ಜ್ಞಾನದಲ್ಲಿ ಆದರ ಹುಟ್ಟಬೇಕೆಂದೂ, ಅಂಥ ಜ್ಞಾನಿಗಳು ದುರ್ಲಭರೆಂದು ಹೇಳಿದ್ದು:—

**मनुष्याणां सहस्रेषु कश्चिद्यतति सिद्धये ।**
**यततामपि सिद्धानां कश्चिन्मां वेत्ति तत्त्वतः ॥ ३ ॥**

**ಅಂ**—ಸಾವಿರಕ್ಕೊಬ್ಬ ಪುಣ್ಯವಂತನೇ ನನ್ನ ಜ್ಞಾನಕ್ಕಾಗಿ ಹೆಣಗುವವನು. ಅಂಥ ಜ್ಞಾನಕ್ಕಾಗಿ ಯತ್ನಿಸುವವರಲ್ಲಿ ಕೂಡ ಯಾವನೊಬ್ಬ ಪುಣ್ಯಾತ್ಮನಿಗೆ ಆ ಜ್ಞಾನವಾಗುವದು. ಅಂತಹ ಜ್ಞಾನವುಳ್ಳವರಲ್ಲಿ ಕೂಡ ಯಾವನೊಬ್ಬನೇ ನನ್ನನ್ನು ಯಥಾರ್ಥವಾಗಿ ತಿಳಿಯುವನು.

೪. ಹೀಗೆ ಮುನ್ನುಡಿ ಆಡಿ, ಮೊದಲಿನ ಪ್ರತಿಜ್ಞೆಯಂತೆ ‘ ಜ್ಞಾನ ’ ಪದದಿಂದ ತಿಳಿಯತಕ್ಕದ್ದನ್ನು ನಾಲ್ಕು ಶ್ಲೋಕಗಳಿಂದ ನಿರೂಪಿಸಿದ್ದು:—

**भूमिरापोऽनलो वायुः खं मनो बुद्धिरेव च ।**
**अहंकार इतीयं मे भिन्ना प्रकृतिरष्टधा ॥ ४ ॥**

**ಅಂ—ಭೂಮಿ, ನೀರು, ಬೆಂಕಿ, ಗಾಳಿ, ಆಕಾಶ,** ಹೀಗೆ ಐದು ಮಹಾಭೂತಗಳು, ಮನಸ್ತತ್ವ, ಬುದ್ಧಿತತ್ವ, ಅಹಂಕಾರತತ್ವ, ( ಉಪಲಕ್ಷಣದಿಂದ ಮಹತ್ತತ್ವ ) ಹೀಗೆ ನನಗೆ ಅಧೀನವಾದ ಪ್ರಕೃತಿಯು ಎಂಟು ವಿಧದಿಂದ ಭಿನ್ನಳು. ಉದ್ದೇಶಾಪೇಕ್ಷೆಯಿಂದ ಎಂಟು ವಿಧಳೆಂದೂ, ಉಪಲಕ್ಷಣದಿಂದ ಒಂಭತ್ತು ವಿಧಳೆಂದೂ, ತಿಳಿಯಬೇಕು. ನನ್ನಿಂದ ಪ್ರೇರಿಸಲ್ಪಟ್ಟ ಪ್ರಕೃತಿಯು ಪೃಥ್ವಿ ಮುಂತಾದ ಕಾರ್ಯರೂಪದಿಂದಲೇ ಭಿನ್ನಳು.

೫. ಜಡಪ್ರಕೃತಿಯಷ್ಟೇ ತನ್ನ ಕಾರ್ಯಸಹಿತ ನನ್ನ ವಶಳೆಂತಲ್ಲ; ಆದರೆ, ಚತುರ್ಮುಖಾದಿ ಜಗತ್ತಿಗೆ ತಾಯಿಯಂತಿರುವ ಚಿತ್‌ಪ್ರಕೃತಿಯು ಕೂಡ ನನಗೆ ಅಧೀನಳೆಂದು ಹೇಳಿದ್ದು, ಅಥವಾ ಪರಮಾತ್ಮನು ಸರ್ವೋತ್ತಮನೆಂದು ಹೇಳಲು, ಅದಕ್ಕೆ ಬೇಕಾದ ಮೇಲು–ಕೀಳು ವಸ್ತುಗಳನ್ನು ಹೇಳುವನು —

**अपरेयमितस्त्वन्यां प्रकृतिं विद्धि मे पराम् ।**
**जीवभूतां महाबाहो ययेदं धार्यते जगत् ॥ ५ ॥**

ಅಂ—ಮಹಾಬಾಹುವೇ, ಹಿಂದೆ ಹೇಳಿದ ಜಡಪ್ರಕೃತಿಯೂ, ಉಪಲಕ್ಷಣದಿಂದ ಜೀವರಾಶಿಗಳೂ, ಅಧಮರು. ಇವರಿಂದ ಭಿನ್ನಳೂ, ಸರ್ವ ಜೀವರಾಸಿಗಳ ದೇಹದಲ್ಲಿದ್ದು ಆ ದೇಹಗಳಲ್ಲಿರುವ ಜೀವಸಮುದಾಯವನ್ನು ಧರಿಸುವದರಿಂದ 'ಜೀವ' ಶಬ್ದವಾಚ್ಯಳೂ, ಯಾವಾಗಲೂ ಇದ್ದು ನನಗೆ ಅಧೀನಳೂ, ಆದ ಚಿತ್‌ಪ್ರಕೃತಿಯೂ, ಉಪಲಕ್ಷಣದಿಂದ ಮುಕ್ತರೂ, ಇವರೆಲ್ಲ ಜಡಪ್ರಕೃತಿ ಮುಂತಾದವರಿಗಿಂತ ಉತ್ತಮರೆಂದು ತಿಳಿ; ಏಂಕೆದರೆ, ಚಿತ್‌ಪ್ರಕೃತಿಯು ಚತುರ್ಮುಖಾದಿ ಜಗವನ್ನು ಧರಿಸುವಳು. ಇಲ್ಲಿ ವಿವೇಕವೇನಂದರೆ, ಮುಕ್ತರಿಗೆ ಮುಕ್ತಿಯಲ್ಲಿ ಜಗತ್ತಿಗೆ ಸಂಬಂಧಪಟ್ಟ ವ್ಯಾಪಾರಗಳಿಲ್ಲದ್ದರಿಂದ ಇಲ್ಲಿ ಚಿತ್‌ಪ್ರಕೃತಿಯನ್ನೇ ಹೇಳಲಾಗಿದೆ.

೬. ಹಾಗಾದರೆ, ದೇಹೇಂದ್ರಿಯಗಳು ಕೂಡ ಇರುವದರಿಂದ, ಎರಡು ವಿಧದ ಪ್ರಕೃತಿಗಳು ಮಾತ್ರ ಪರಮಾತ್ಮನಿಗೆ ಅಧೀನರೆಂದು ಅವನ ಮಹಿಮೆ ಹೇಳಿದ್ದು ಸರಿಯೇ ? ಎಂದು ಕೇಳಿದರೆ, ದೇಹ ಮುಂತಾದ ಎಲ್ಲ ಕಾರ್ಯಸಮೂಹವು ಅವರಿಬ್ಬರಲ್ಲಿಯೇ ಸೇರುವದೆಂದು ಹೇಳಿದ್ದು:—

**एतद्योनीनि भूतानि सर्वाणीत्युपधारय ।**
**अहं कृत्स्नस्य जगतः प्रभवः प्रलयस्तथा ॥ ६ ॥**

ಅಂ—ಶರೀರ, ಇಂದ್ರಿಯ, ವಿಷಯಗಳೆಂಬ ಕಾರ್ಯಸಹಿತ ಜೀವಸಮುದಾಯವೆಲ್ಲ ಜಡಾಜಡ ಪ್ರಕೃತಿಗಳು ಕಾರಣವಾಗಿ ಉಳ್ಳವುಗಳೇ; ಅಂದರೆ, ಇವೆಲ್ಲ ಅವರಿಬ್ಬರಿಂದಲೇ ಹುಟ್ಟಿರುವವೆಂದು ತಿಳಿ. ಇನ್ನು, ಮೇಲೆ ಪ್ರಕೃತಿಗಳಲ್ಲಿ ಉತ್ತಮ ಅಧಮರು ಯಾರೆಂಬುದನ್ನೂ, ಅವರು ತನಗೆ ವಶರೆಂದೂ, ಜಗತ್ತಿನ ಧಾರಕರೆಂದೂ, ಹೇಳಿ, ಪ್ರಕೃತಿಗಳಷ್ಟೇ ಪರಮಾತ್ಮನಿಗೆ ಅಧೀನರೆಂದು ಹೇಳಿದ್ದರಿಂದ, ಜಗತ್ತಿಗೆ ಉಂಟಾಗುವ ಜನ್ಮ–ಸ್ಥಿತಿ–ಲಯಗಳು ಆ ಪ್ರಕೃತಿಗಳ ಅಧೀನವೇ ವಿನಾ ಪರಮಾತ್ಮನಿಗಲ್ಲವೆಂದು ಬರುವ ಸಂದೇಹವನ್ನು ದೂರಮಾಡಿದ್ದು.— ಹೇಗಂದರೆ, ನಾನೇ ಎಲ್ಲಜಗದ ಸೃಷ್ಟಿಲಯಗಳನ್ನು ಮಾಡುವದರಿಂದ ಆ ಶಬ್ದಗಳಿಂದ ವಾಚ್ಯನು; ಅಂದರೆ, ಉತ್ಪತ್ತಿಲಯಗಳಲ್ಲಿರುವ ಸಾಮರ್ಥ್ಯಕ್ಕೆ ನಾನೇ ಕಾರಣನು; ಅಥವಾ ಸೃಷ್ಟಿಲಯಗಳಿಗೆ ನಾನೇ ಭೋಕ್ತೃ. ಹೇಗಂದರೆ, ಮಗನ ಜನ್ಮವೂ, ಶತ್ರುಸಂಹಾರವೂ, ಸುಖಕ್ಕೆ ಕಾರಣವಾದ್ದರಿಂದ ತಂದೆಗೆ ಅವುಗಳ ಭೋಗವು ಹೇಗೋ ಹಾಗೆ ಪರಮಾತ್ಮನಿಗೆ ಜಗದ ಉತ್ಪತ್ತಿಲಯಗಳ ಭೋಗವೆಂದು ತಿಳಿಯಬೇಕು. ಇನ್ನು, ಜಗದ ಸೃಷ್ಟಿಲಯಗಳು ಪರಮಾತ್ಮನ ಸುಖಕ್ಕೆ ಅದಂತು ಕಾರಣಗಳೆಂದು ಕೇಳಿದರೆ, ನಾರದವಚನಾನುಸಾರವಾಗಿ 'ಪರಮಾತ್ಮನಲ್ಲಿ ಮುಂದೆ ಆಗುವ ಸುಖವು ಕೂಡ ಯಾವಾಗಲೂ ಇದ್ದರೂ, ಅಚಿಂತ್ಯ ಸಾಮರ್ಥ್ಯವುಳ್ಳವನಾದ್ದರಿಂದ ಅವನಿಗೆ ಅತಿಸುಖವಾಯಿತು' ಎಂದು ಹೇಳಿಯಿದೆ. ಇಲ್ಲಿ ಪ್ರಕೃತಿದ್ವಾರದಿಂದ ಎಲ್ಲ ಜಗಕ್ಕೆ 'ನಾನೇ ಕರ್ತ'ನೆಂಬ ಅಭಿಪ್ರಾಯ.

೭. ಹಾಗಾದರೆ, ಜಡಾಜಡಪ್ರಕೃತಿಗಳು ನಿನಗೆ ಅಧೀನವೆಂದು ಹೇಳಿದ್ದರಿಂದಲೇ, ನೀನು ಅಧಮನೆಂದೂ, ಸರ್ವೋತ್ತಮನೆಂದೂ, ಸಿದ್ಧವಾಗುವದು; ಆದರೆ, 'ತರ' ಈ ಪ್ರತ್ಯಯವನ್ನು ಸೇರಿಸಿ, 'ಪರತರತ್ವ' ಶಬ್ದದಿಂದ ಸರ್ವೋತ್ತಮನಾದ್ದರಿಂದ ಜಗತ್ತಿಗೆ ನೀನು ತಂದೆ ಎಂದು ಹೇಳಿದಂತಾಯಿತಲ್ಲ ? ಅದರಂತೆಯೇ, ಅಂಥ ಸರ್ವೋತ್ತಮರಾದವರು ಅನ್ಯರು ಕೂಡ ಇರುವದರಿಂದ ಅವರೂ ಜಗದ ತಂದೆಯಂತಿರುವರೆಂದು ಹೇಳಬಹುದು, ಹೀಗಿರಲು, ನೀನು 'ನಾನೇ ಸಕಲ ಜಗಕ್ಕೆ ಕಾರಣ'ನೆಂದು ಹೇಳಿದ್ದು ಸರಿಯೇ ? ಎಂದು ಕೇಳಿದ್ದಕ್ಕೆ ಸಮಾಧಾನ ಹೇಳಿದ್ದು:—

**मत्तः परतरं नान्यत्किंचिदस्ति धनंजय ।**
**मयि सर्वमिदं प्रोतं सूत्रे मणिगणा इव ॥ ॥ ७ ॥**

ಅಂ—ಧನಂಜಯಾ! 'ಪರತರತ್ವ' ಶಬ್ದದಿಂದ ಹೇಳಿದ ಸರ್ವೋತ್ತಮರು ನನ್ನ ಹೊರ್ತು ಯಾರೂ ಇಲ್ಲೆಂದು ತಿಳಿ. ಅಂಥವರು ಇದ್ದರೆ, 'ನಾನೇ ಕಾರಣ' ಎಂದು ಹೇಳಿದ್ದು ಅಯೋಗ್ಯವಾಗಬಹುದು; ಅಥವಾ, 'ಪರತರತ್ವ' ಶಬ್ದದಿಂದ ಹೇಳಿದ ಸರ್ವೋತ್ತಮರಾದವರು ಅನ್ಯರಿಲ್ಲೆಂದು ಹೇಳುವದರಿಂದಲೇ, 'ನಾನೇ ಸರ್ವೋತ್ತಮ'ನೆಂದು ವಾಕ್ಯಯೋಜನೆ; ಬಳಿಕ ನನ್ನ ಹೊರ್ತು ಅನ್ಯ ಸರ್ವೋತ್ತಮರಿಲ್ಲೆಂದು ಅರ್ಥಹೇಳಬಹುದು. ಏಕೆಂದರೆ, ಮೇಲಿನ ಅವತರಣಿಕೆಯನ್ನನುಸರಿಸಿ, ಇಲ್ಲಿ ಪರತರತ್ವ ಎಂದು ಹೇಳಲಾಗಿದೆ. ಕಾರಣವೇನಂದರೆ, ಭೂಮಿ ಮುಂತಾದ ಭೇದದಿಂದ ಅಪರ ತತ್ವವು ಹೇಗೆ ವಿವಿಧವೋ ಮತ್ತು ಅಪರತತ್ವ ಮತ್ತು ಶ್ರೀದೇವಿ, ಮುಕ್ತರ ಭೇದದಿಂದ ಅನೇಕ ವಿಧವೋ ಹಾಗೆಯೇ 'ಪರತರತ್ವ' ಶಬ್ದದಿಂದ ಹೇಳಿದ ಸರ್ವೋತ್ತಮತ್ವವು ಒಂದೋ, ಅನೇಕ ವಿಧವೋ, ಎಂದು ಬರುವ ಸಂದೇಹನಿವಾರಣೆಗಾಗಿ "ನಾನೊಬ್ಬನೇ ಕಾರಣನು" ಎಂದು ಸೂಚಿಸುವದಕ್ಕಾಗಿ ಹಾಗೆ ಹೇಳಲ್ಪಟ್ಟಿದೆ. ಇನ್ನು, ಜಗದ ಉತ್ಪತ್ತಿಲಯಗಳಷ್ಟೇ ನನಗೆ ಅಧೀನವಲ್ಲ; ಆದರೆ, ಅದರ ಸ್ಥಿತಿಯು ಕೂಡ ನನಗೆ ಅಧೀನವೆಂದು ಹೇಳಿದ್ದು:— ದಾರದಲ್ಲಿ ಮಣಿಗಳನ್ನು ಪೋಣಿಸಿರುವಂತೆ ಪ್ರಕೃತಿ ಮುಂತಾದ ಎಲ್ಲ ಜಗತ್ತು ನನ್ನಲ್ಲಿ ಸೇರಿಕೊಂಡಿದೆ.

೮. 'ಜ್ಞಾನ' ಪದದಿಂದ ಪ್ರತಿಜ್ಞೆಮಾಡಿ ತಿಳಿಯತಕ್ಕ ವಿಷಯವನ್ನು ೪ನೆಯ ಶ್ಲೋಕದಿಂದ ಇಲ್ಲಿಯವರೆಗೆ ನಿರೂಪಿಸಿ, 'ವಿಜ್ಞಾನ' ಪದದಿಂದ ಮಾತುಕೊಟ್ಟಂತೆ, ವಿಶೇಷವಾಗಿ ತಿಳಿದುಕೊಳ್ಳುವ ಪರಮಾತ್ಮನ ಅಲೌಕಿಕ ಮಹಾತ್ಮ್ಯವನ್ನು ಹೇಳಿದ್ದು:—

**रसोऽहमप्सु कौंतेय प्रभास्मि शशिसूर्ययोः ।**
**प्रणवः सर्ववेदेषु शब्दः खे पौरुषं नृषु ॥ ८ ॥**

ಅಂ—ಕುಂತಿಯ ಕಂದಾ, ನೀರಿನಲ್ಲಿಯ ಶ್ರೇಷ್ಠವಾದ ರಸವು ನಾನು; ನೀರಿನ ಸ್ವಾಭಾವಿಕ ಧರ್ಮದಲ್ಲಿರುವ ಹಿರಿದಾದ ರಸಕ್ಕೆ ಕಾರಣನೂ, ಭೋಕ್ತೃವೂ ಪರಮಾತ್ಮನೇ ಆದುದರಿಂದ 'ನಾನು ರಸ' ಎಂದು ಅಭೇದ ಉಕ್ತಿಯುಂಟು. ಮುಂದೆ ಹೇಳುವ ಅಭೇದ ವಚನವು ಕೂಡ ಹೀಗೆಯೇ ಎಂದು ತಿಳಿಯಬೇಕು. ಚಂದ್ರ—ಸೂರ್ಯರಲ್ಲಿ ಸ್ವಾಭಾವಿಕ ಧರ್ಮವಾದ ಪ್ರಕಾಶದ ಶ್ರೇಷ್ಠತ್ವಕ್ಕೆ ಕಾರಣನಾದುದರಿಂದ ನಾನು 'ಪ್ರಭಾ' ಎನಿಸುವೆ. ವೇದಗಳಲ್ಲಿ ಪ್ರಣವವು ಮಿಗಿಲಾದ್ದರಿಂದಲೂ, ಪ್ರಣವವು ನನಗೆ ಅಧೀನವಾದ್ದರಿಂದಲೂ, 'ಪ್ರಣವನು' ನಾನು. ಆಕಾಶದಲ್ಲಿರುವ ಧ್ವನ್ಯಾತ್ಮಕ ಶಬ್ದವು ಅದರ ಸ್ವಾಭಾವಿಕ ಧರ್ಮವು. ಆ ಶಬ್ದಭೋಗವು ನನಗೆ ಅಧೀನವಾದ್ದರಿಂದ ನಾನು ಆ ಶಬ್ದವಾಚ್ಯನು. ಪುರುಷರಲ್ಲಿ ಧೈರ್ಯ, ಚಾತುರ್ಯಾದಿಗಳಿಗೆ ನಾನೇ ಮುಖ್ಯ ಸೆಲೆಯಾದ್ದರಿಂದ ನನಗೆ 'ಪುರುಷ' ಎನ್ನುವರು.

**पुण्यो गंधः पृथिव्यां च तेजश्चास्मि विभावसौ ।**
**जीवनं सर्वभूतेषु तपश्चास्मि तपस्विषु ॥ ॥ ९ ॥**

ಅಂ—ಪೃಥ್ವಿಯಲ್ಲಿರುವ ಪುಣ್ಯಗಂಧವು ಅದರ ನೈಸರ್ಗಿಕ ಧರ್ಮವಾದ್ದರಿಂದ ಅದಕ್ಕೆ ಕಾರಣನೂ, ಭೋಕ್ತೃವೂ, ನಾನೇ; ಆದ್ದರಿಂದ ನನಗೆ 'ಗಂಧ' ಎಂದು ಹೆಸರು. ಅಗ್ನಿಯಲ್ಲಿರುವ ಸುಡುವ ಶಕ್ತಿಗೆ ನಾನೇ ಮೂಲನಾದ್ದರಿಂದ 'ತೇಜನು' ನಾನು. ಪ್ರಾಣಿಗಳಿಗೆಲ್ಲ ಸಾರವಾದ ಜೀವನಕ್ಕೆ ನಿಯಾಮಕನಾದ್ದರಿಂದ ನನಗೆ 'ಜೀವನ' ಎನ್ನುವರು. ತಪಸ್ವಿಗಳಲ್ಲಿಯ ಸಹಜಧರ್ಮವಾದ ಕೃಚ್ಛ್ರ, ಚಾಂದ್ರಾಯಣಾದಿ ತಪಸ್ಸುಗಳಿಗೆ ಪ್ರೇರಕನಾದ್ದರಿಂದ ನಾನೇ 'ತಪ' ಎನಿಸುವೆ.

बीजं मां सर्वभूतानां विद्धि पार्थ सनातनम् ।
बुद्धिर्बुद्धिमतामस्मि तेजस्तेजस्विनामहम् ॥ १० ॥

ಅಂ—ಪ್ರಾಣಿಗಳನ್ನೆಲ್ಲ ಯಾವಾಗಲೂ ವ್ಯಕ್ತರೂಪಕ್ಕೆ ತರುವದರಿಂದ ನಾನೇ ನಿಮಿತ್ತಕಾರಣನಾಗಿ 'ಬೀಜ' ಎನಿಸುವೆ; ಹೊರ್ತು ಪರಿಣಾಮನಲ್ಲ. ಜ್ಞಾನಿಗಳಲ್ಲಿರುವ ಬುದ್ಧಿಯನ್ನು ಬೆಳಗಿಸುವವನು ನಾನಾದ್ದರಿಂದ ಅಥವಾ ಬುದ್ಧಿವಂತರಲ್ಲಿಯು ಮೇಲಾದ ಬುದ್ಧಿವಂತಿಕೆಗೆ ನಾನೇ ಕಾರಣನಾದ್ದರಿಂದ 'ಬುದ್ಧಿ' ಎನಿಸುವೆ ನಾನು. ಅದರಂತೆಯೇ, ತೇಜಸ್ಸುಗಳಲ್ಲಿರುವ ತೇಜಸ್ಸಿನ ಮೇಲ್ಮೆಗೆ ಉಗಮಸ್ಥಾನವಾದ್ದರಿಂದ 'ತೇಜನು' ನಾನು.

ವಿಂ ಅಂ—ನೀರು, ಚಂದ್ರ, ಸೂರ್ಯ, ಇವರಲ್ಲಿರುವ ಶ್ರೇಷ್ಠತ್ವಕ್ಕೆ ಪರಮಾತ್ಮನು ಕಾರಣನೆಂದು ಹೇಳಿದಂತೆ, ರಸಾದಿಗಳಲ್ಲಿರುವ ಶ್ರೇಷ್ಠತ್ವಕ್ಕೆ ಅಂದರೆ, ಮಾಧುರ್ಯ ಮುಂತಾದವುಗಳಿಗೆ ಅವನೇ ಕಾರಣನೆಂದು ಸ್ಪಷ್ಟವಾಗುವದು; ಆದರೂ, ಇಲ್ಲಿ ಮತ್ತೆ 'ನಾನು ರಸವೆನಿಸುವೆ' ಎಂದು ಹೇಳಿದ್ದರ ಗುಟ್ಟೇನೆಂದು ಕೇಳಿದರೆ, ನೇಕಾರನು ಬಟ್ಟೆಗಳನ್ನಷ್ಟೇ ನೇಯಲು ಸಮರ್ಥನು, ಹೊರ್ತು ಅವುಗಳಲ್ಲಿಯ ಅಂದಗಾರಿಕೆ, ಕುಸುರಿನ ಕೆಲಸ, ಮುಂತಾದ್ದಕ್ಕೆ ಕಾರಣನಲ್ಲ, ಆದರೆ, ಪರಮಾತ್ಮನು ಹಾಗಲ್ಲ. ಅವನು ನೀರು ರಸ ಮುಂತಾದವುಗಳಿಗೂ, ಅವುಗಳ ಧರ್ಮಗಳಾದ ರಸತ್ವಾದಿಗಳಿಗೂ, ಕಾರಣನು. ಅದರಿಂದ ನೀರು ಮುಂತಾದವುಗಳ ಭೋಗಕ್ಕಿಂತ ರಸಾದಿಗಳ ಭೋಗವು ಹೆಚ್ಚು ಇರುವದೆಂದು ಸೂಚಿತವಾಯಿತು; ಇದಲ್ಲದೆ, ರಸಾದಿಗಳು ಪರಮಾತ್ಮನ ಪ್ರತಿಮೆಗಳೆಂದು ತಿಳಿದು, ಅವುಗಳಲ್ಲಿ ಪರಮಾತ್ಮನನ್ನು ಆರಾಧಿಸಬೇಕೆಂದು नाम ब्रह्मोपासीत (ಛಾಂ ೭–೧–೫) ಮಂತ್ರದಲ್ಲಿ ಹೇಳಿ ಇದೆ. ಅದರಿಂದ ನೀರು ಮುಂತಾದವುಗಳಲ್ಲಿ ಮಾಡಿದ ಪರಮಾತ್ಮನ ಆರಾಧನೆಗಿಂತ ರಸಾದಿಗಳಲ್ಲಿ ಮಾಡಿದ ಆರಾಧನೆಯು ಮೇಲ್ತರದ್ದಾದ್ದರಿಂದ ವಿಶೇಷವಾಗಿ ಹೇಳಲಾಗಿದೆ. ಇದಲ್ಲದೆ, ರಸಾದಿಗಳಿಗೆ ಅಭಿಮಾನಿಗಳಾದವರ ದೇಹದಲ್ಲಿ ಕೂಡ ಪರಮಾತ್ಮನು ಅಂತರ್ಗತನೆಂತಲೂ, ನೀರು ಮುಂತಾದವುಗಳಿಗೆ ಅಭಿಮಾನಿಗಳಾದವರು ಅವನ ಪಾರ್ಷದರೆಂತಲೂ, ಜ್ಞಾನಾರ್ಥಿಗಳು ಉಪಾಸನೆ ಗೈಯ್ಯುವರು. ಈ ಕಾರಣದಿಂದಲೂ ವಿಶೇಷವಾಗಿ ಹೇಳಲ್ಪಟ್ಟಿದೆ. ಅಥವಾ, "ವಿಷ್ಣುವಿನ ಉತ್ಕರ್ಷಜ್ಞಾನವೇ ಸರ್ವತ್ರ ಜ್ಞಾನವೆನಿಸುವದು; ಮತ್ತು ಅವನ ವಿಶೇಷ ಜ್ಞಾನವು ವಿಜ್ಞಾನವೆನಿಸುವದು." ಈ ಸ್ಮೃತಿವಚನಕ್ಕನುಗುಣವಾಗಿ ಇಲ್ಲಿ 'ಜ್ಞಾನ' ಪದದಿಂದ ವಿಷ್ಣುವಿನ ಉತ್ಕರ್ಷಜ್ಞಾನವು ಗ್ರಾಹ್ಯವು. ಹಿಂದಿನ ೫ನೆಯ ಶ್ಲೋಕದಲ್ಲಿ ಹೇಳಿದಮೇರೆಗೆ ಜಡಪ್ರಕೃತಿ, ಬ್ರಹ್ಮಾದಿ ಜೀವರಾಶಿಗಳು ಕಡಿಮೆಯವರು; ಅಸುರರು ಅವರಿಗಿಂತ ಕೀಳರು; ಶ್ರೀ ದೇವಿಯೂ, ಮುಕ್ತರೂ, ಉತ್ತಮರು, ಅವರಲ್ಲಿ ಕೂಡ ಶ್ರೀ ದೇವಿಯು ಹೆಚ್ಚು ಉತ್ತಮಳು, ಏಕೆಂದರೆ, ಅವಳಿಗೆ ದುಃಖದ ಸಂಬಂಧವೇ ಸೋಂಕದು; ಮತ್ತು ಮುಕ್ತರಿಗೆ ಕೆಲವು ಕಾಲದಲ್ಲಿ ದುಃಖದ ಸಂಬಂಧ ಉಂಟು; ಹೀಗೆ ಇವರೆಲ್ಲರು ಪರಮಾತ್ಮನಿಗೆ ಅಧೀನರಾದುದರಿಂದಲೂ, ಅವನಿಗಿಂತ ಅನ್ಯ ಉತ್ತಮರಿಲ್ಲದರಿಂದಲೂ, ಅವನು ಸರ್ವೋತ್ತಮನು (परतम). ಇನ್ನು, ಹಿಂದೆ ೨ನೆಯ ಶ್ಲೋಕದಿಂದ ಪ್ರತಿಜ್ಞೆಮಾಡಿದ ಜ್ಞಾನ—ವಿಜ್ಞಾನ ಇವೆರಡನ್ನು ೪ನೆಯ ಶ್ಲೋಕದಿಂದ ನಾಲ್ಕು ಶ್ಲೋಕಗಳಲ್ಲಿ ಹೇಳಿ, ಪರಮಾತ್ಮನ ವಿಜ್ಞಾನವು ಕೂಡ ಅವನಿಗೆ ಅಧೀನವೆಂದು ೮ನೆಯ ಶ್ಲೋಕದಿಂದ ಹೇಳಿದ್ದು, ಇಲ್ಲಿ ರಸಾದಿ ಶಬ್ದಗಳಿಗೆ ಪರಮಾತ್ಮನು ಭೋಕ್ತೃನಾದುದರಿಂದಲೂ, ಅವುಗಳನ್ನು ನಿಯಮನಮಾಡುವದರಿಂದಲೂ, ಪರಮಾತ್ಮನ ಅವು ನಾಮಗಳಾಗಿವೆ. ಹೇಗಂದರೆ, ನೀರಲ್ಲಿ ಇದ್ದು ರಸಕೊಡುವದರಿಂದಲೂ ಪ್ರೇರಿಸುವದರಿಂದಲೂ 'ರಸ' ನಾಮಕನು. ಚಂದ್ರ ಸೂರ್ಯರಲ್ಲಿ ನಿಂತು ಪ್ರಕಾಶಕಾರ್ಯಮಾಡುವದರಿಂದ 'ಪ್ರಭಾ' ಎನ್ನುವರು ನನಗೆ. ಸಕಲ ವೇದಗಳಲ್ಲಿದ್ದು ನನ್ನ ಸ್ತುತಿಸುವವರನ್ನು ಪ್ರೇರಿಸುವದರಿಂದ

'ಪ್ರಣವ' ಎನಿಸುವೆನು. ಆಕಾಶದಲ್ಲಿ ನಿಂತು ಶಬ್ದಕ್ಕೆ ಪ್ರೇರಕನಾಗುವದರಿಂದ ನನಗೆ 'ಶಬ್ದ' ನೆಂದು ಹೆಸರು. ಪೃಥ್ವಿಯಲ್ಲಿ ನಿಂತುಕೊಂಡು ಸುಗಂಧ–ದುರ್ಗಂಧಗಳಿಗೆ ಪ್ರೇರಕನಾದ್ದರಿಂದ 'ಗಂಧ' ಎನಿಸುವೆ. ಅಗ್ನಿಯಲ್ಲಿದ್ದು ತೇಜಸ್ಸನ್ನು ನಿಯಮನಮಾಡುವದರಿಂದ 'ತೇಜ' ನಾಮಕನು. ಭೂತಗಳಲ್ಲಿದ್ದು ಜೀವನಕೊಡುವದರಿಂದ 'ಜೀವನನು'. ತಪಸ್ವಿಗಳಲ್ಲಿ ನೆಲಿಸಿ ತಪವನ್ನು ಮಾಡಿ ಮಾಡಿಸುವದರಿಂದ 'ತಪ' ನಾಮಕನು. ಬುದ್ಧಿವಂತರು, ತೇಜಸ್ವಿಗಳು, ಮತ್ತು ಬೀಜ ಇವುಗಳಲ್ಲಿ ಅಡಗಿದ್ದು ಪ್ರೇರಿಸುವದರಿಂದ ನನಗೆ ಬುದ್ಧಿ, ತೇಜ, ಬೀಜಗಳೆಂಬ ಹೆಸರುಗಳು ಬಂದಿವೆ. ನೀರು ಮುಂತಾದ ಎಲ್ಲ ವಸ್ತುಗಳಿಗೆ ರಸ, ಗಂಧ, ಮುಂತಾದ ಧರ್ಮಗಳನ್ನು ವ್ಯವಸ್ಥಿತವಾಗಿ ಕೊಡುವದರಿಂದ ರಸಾದಿಗಳ ಹೆಸರುಗಳು ನನಗೆ ಬಂದಿವೆ.

बलं बलवतामास्मि कामरागविवर्जितम् ।
धर्माविरुद्धो भूतेषु कामोऽस्मि भरतर्षभ ॥ ११ ॥

**ಅ**ಂ—ಬಲವುಳ್ಳವರಲ್ಲಿದ್ದ ಕಾಮರಾಗಗಳಿಲ್ಲದ ಬಲವು ನಾನೇ. ವಿಷಯಭೋಗಾಪೇಕ್ಷೆ ಇಲ್ಲದೆ, ನಿತ್ಯಪೂರ್ಣಬಲವುಳ್ಳವನಾದ್ದರಿಂದ ಕಾಮವಿಲ್ಲದ ಬಲಸ್ವರೂಪಿಯು ನಾನು ಯೋಗ್ಯವಾಗದ ಸ್ಥಳದಲ್ಲಿ ಬಲವನ್ನು ಉಪಯೋಗಿಸದ ಬಲವು ನಾನು, ಏಕೆಂದರೆ, ರಾಗವುಳ್ಳವರು ಅಯೋಗ್ಯ ಸ್ಥಳದಲ್ಲಿ ಬಲವನ್ನು ಬಳಸುವರು. ಭರತಕುಲಶ್ರೇಷ್ಠನೇ, ಧರ್ಮಕ್ಕೆ ವಿರುದ್ಧವಾಗದ ಕಾಮವು ನಾನು. ಇಲ್ಲಿ, ಗಂಧಕ್ಕೆ 'ಪುಣ್ಯ' ಬಲಕ್ಕೆ 'ಕಾಮವಿಲ್ಲದ' ಎಂಬ ವಿಶೇಷಣಗಳನ್ನು ಹೇಳಿದ್ದರಿಂದ ಅವುಗಳಿಂದ ಯುಕ್ತವಾದ ಗಂಧ, ಬಲ, ಕಾಮಾದಿಗಳಲ್ಲಿಯೇ ಪರಮಾತ್ಮನನ್ನು ಆರಾಧಿಸಬೇಕು, ಹೊರ್ತು ಅಶುದ್ಧ ಮತ್ತು ಧರ್ಮವಿರುದ್ಧವಾದವುಗಳಲ್ಲಿ ಅಲ್ಲೆಂದು ಸೂಚಿತವಾಯಿತು.

೧೨. ಪರಮಾತ್ಮನು ರಸಾದಿ ಧರ್ಮಗಳಿಗಷ್ಟೇ ಪ್ರೇರಕನಲ್ಲ; ಆದರೆ, ನೀರು ಮುಂತಾದ ಸಕಲ ಪದಾರ್ಥಗಳಿಗೂ ಪ್ರೇರಕನೆಂದು ಹೇಳಿದ್ದು —

ये चैव सात्विका भावा राजसास्तामसाश्च ये ।
मत्त एवेति तान्विद्धि न त्वहं तेषु ते मयि ॥ १२ ॥

**ಅ**ಂ — ಅರ್ಜುನಾ, ಸತ್ವ, ರಜ, ತಮೋಗುಣಗಳಿಂದ ವಿಕಾರ ಹೊಂದಿದ ಎಲ್ಲ ಪದಾರ್ಥಗಳು ನನ್ನಿಂದಲೇ ಹುಟ್ಟಿರುವವೆಂದು ತಿಳಿ. ಅದರಂತೆ, ಹುಟ್ಟಿದ ಈ ಪದಾರ್ಥಗಳೆಲ್ಲ ನನ್ನ ಆಧಾರದಿಂದಲೇ ಇರುವವೆಂದು ತಿಳಿ. ಹಾಗಾದರೆ, ಕೃಷ್ಣಾ, ಜಗವು ನಿನಗೆ ಅಧೀನವಾದಂತೆ, ಜಗಕ್ಕೆ ನೀನು ಅಧೀನನೇ? ಎಂದು ಪ್ರಶ್ನೆ ಮಾಡಿದರೆ, ನಾನು ಅದರ ಆಧಾರದಿಂದ ಇಲ್ಲ. ಇಲ್ಲಿ ಪ್ರತ್ಯೆ 'ಯಾವ' 'ಯಾವ' ಎಂದು ಬೇರೆಯಾಗಿ ಹೇಳಿದ್ದರಿಂದ ಎಲ್ಲ ಪದಾರ್ಥಗಳು ಮೂರು ಗುಣಗಳ ವಿಕಾರಗಳಾದರೂ, ಅವುಗಳಲ್ಲಿ ಆಯಾ ಗುಣಗಳ ಹೆಚ್ಚಳದಿಂದ ಹಾಗೆ ಹೇಳಲಾಗಿದೆ.

೧೩. ಇನ್ನು, ಪರಮಾತ್ಮನ ಮಹಿಮೆಯ ಉಪಸಂಹಾರಪರವಾದ ಹಿಂದಿನ ಶ್ಲೋಕದಲ್ಲಿ ಸತ್ವಾದಿ ಗುಣಗಳಿಂದ ಹುಟ್ಟಿದ ಸಕಲ ಪದಾರ್ಥಗಳಿಗೆ ಪರಮಾತ್ಮನೇ ಕಾರಣನೂ, ಆಶ್ರಯನೂ, ಎಂದು ಹೇಳಿ ಇದೆ. ಆದರಿಂದಲೇ ಅವನು ಗುಣಾತೀತನೆಂದು ಹೇಳಿದಂತಾಯಿತು. ಏಕೆಂದರೆ, ಗುಣಾತೀತನಾದುದರಿಂದ ತಿಳಿಯದಿರೋಣ, ಸಗುಣನಾದುದರಿಂದ ತಿಳಿಯೋಣ, ಇವೆರಡು ನಿನ್ನಲ್ಲಿ ಸಂಭವಿಸುವದಿಲ್ಲವಲ್ಲ ಎಂದು ಕೇಳಿದ್ದಕ್ಕೆ ಉತ್ತರ —

त्रिभिर्गुणमयैर्भावैरेभिः सर्वमिदं जगत् ।
मोहितं नाभिजानाति मामेभ्यः परमव्ययम् ॥ १३ ॥

ಅಂ—ಸತ್ವ, ರಜ, ತಮುಸ್ಸ್ವರೂಪಗಳಾದ ಪದಾರ್ಥಗಳಿಂದ ಅಥವಾ ಹಿಂದೆ ಹೇಳಿದಂತೆ ಸಾತ್ವಿಕಾದಿ ಭೇದಗಳಿಂದ ಭಿನ್ನಭಿನ್ನವಾದ ಪದಾರ್ಥಗಳಿಂದ ಮರುಳುಗೊಂಡ ಗುಣ, ಅವುಗಳ ವಿಕಾರಗಳಿಂದ ಭಿನ್ನನೂ, ದೇಹದಿಂದ ಅವಿನಾಶಿಯೂ, ಆದ ನನ್ನನ್ನು ಇದ್ದಕ್ಕಿದ್ದಂತೆ ತಿಳಿಯದೆ, ವಿಪರೀತವಾಗಿ ಈ ಜಗವು ತಿಳಿಯುವದು. ಇಲ್ಲಿ ಸಕಲ ಪದಾರ್ಥಗಳು ಮೂರು ಗುಣಗಳ ಸ್ವರೂಪವುಳ್ಳವುಗಳೆಂದು ಹೇಳಿದ ಕಾರಣವೇನಂದರೆ, ಲೋಕದಲ್ಲಿ ಸಹ ಗುಣವುಳ್ಳ ದೇಹವನ್ನು ಕಂಡು ಪರಮಾತ್ಮನು ಕೂಡ ದೇಹವನ್ನು ತೊಟ್ಟಿದ್ದರಿಂದ ಅವನೂ ಗುಣಸ್ವರೂಪಿ ಎಂದು ಮೂಢರು ಮೋಹಗೊಳ್ಳುವರೆಂದು ಅದರಿಂದ ಸೂಚಿತವಾಗುವದು. ಜ್ಞಾನಿಗಳು ಅವನನ್ನು ನಿಜವಾಗಿ ತಿಳಿಯುವದರಿಂದ ಅವರನ್ನು ಬೇರ್ಪಡಿಸಲಿಕ್ಕೆಂದು ಜಗತ್ತಿಗೆ ಈ ವಿಶೇಷಣ ಹೇಳಿ ಇದೆ ಇಲ್ಲಿ ವಿವೇಕವೇನಂದರೆ, ಅಜ್ಞರಿಗೆ ಅನ್ಯ ಸಾಧನವಿಲ್ಲವ್ದರಿಂದ ಅವರಿಗೆ ಗುಣಾತೀತನಾದ ಪರಮಾತ್ಮನು ನಿಲುಕನು. 'ಅವನು ದೇಹವುಳ್ಳವನೆಂಬ' ಅನುಮಾನಾಭಾಸದಿಂದ ಸಗುಣನೆಂದು ತಿಳಿದವರಿಗೆ ಅವನ ವಿಪರೀತಜ್ಞಾನವಾಗುವದು.

೧೪. ಚತುರ್ಮುಖಾದಿ ಜೀವಸಮುದಾಯವು ದೇಹೇಂದ್ರಿಯಗಳಿಂದ ಕೂಡಿದ್ದೆಂದು ಹಿಂದಿನ ಶ್ಲೋಕದಲ್ಲಿ ಹೇಳಲಾಯಿತು. ಆ ದೃಷ್ಟಾಂತಕ್ಕನುಗುಣವಾಗಿ ಪರಮಾತ್ಮನು ಗುಣಮಯ ದೇಹವುಳ್ಳವನೆಂದು ಹೇಳುವ ಜ್ಞಾನವು ಮೋಹವಲ್ಲ, ಏಕೆಂದರೆ, ಹಾಗೆ ಹೇಳಲು ಬಾಧಕವಿಲ್ಲ ಹಾಗಾದರೆ, ಜ್ಞಾನಿಗಳು ತಿಳಿಯುವ ಜ್ಞಾನವೇ ಅದಕ್ಕೆ ಬಾಧಕವೆಂದರೆ, ನಮ್ಮಂಥ ಪಾಮರರ ಜ್ಞಾನವು ವಿರೋಧಿಯಾದರೂ, ಅದು ಅಲ್ಪವಾದ್ದರಿಂದ ಅಯಥಾರ್ಥವೆಂತಲೇ ಎಣಿಸತಕ್ಕದ್ದು ಇನ್ನು ಕಾಲಾಂತರದಲ್ಲಿ ಅವರ ಜ್ಞಾನಕ್ಕೆ ಬಾಧೆಯುಂಟಾಗುವದೆಂದು ಸಂದೇಹಪಡಲಾಗದು, ಏಕೆಂದರೆ, ಅನಾದಿಕಾಲದಿಂದ ಇದುವರೆಗೆ ಹುಟ್ಟದಿರುವ ಬಾಧಕಜ್ಞಾನವು ಹುಟ್ಟುವದು ಅಸಂಭವವಲ್ಲೇ ಎಂದು ಸಂಶಯವೆತ್ತಿದರೆ, ಯಥಾರ್ಥಜ್ಞಾನವು ಹುಟ್ಟದಿರುವದಕ್ಕೂ, ವಿಪರೀತಜ್ಞಾನಕ್ಕೂ, ಗುಣಗಳಿಗೆ ಅಭಿಮಾನಿಯಾದ ದುರ್ಗಾದೇವಿಯೇ ಕಾರಣಳು, ಮತ್ತು ಜೀವಸಮೂಹವು ದೇಹವುಳ್ಳದ್ದೆಂದು ಮೇಲೆ ಕಾಣಿಸಿದ ಅನುಮಾನವು ಕೇವಲ ನಿಮಿತ್ತವೆಂಬ ಅಭಿಪ್ರಾಯದಿಂದ ಹೇಳಿದ್ದು :—

दैवी ह्येषा गुणमयी मम माया दुरत्यया ।
मामेव ये प्रपद्यंते मायामेतां तरंति ते ॥ १४ ॥

ಅಂ—ಸೃಷ್ಟಿ ಮುಂತಾದ ಕ್ರೀಡಾಗುಣಗಳುಳ್ಳ, ಪರಮಾತ್ಮನ ಸಂಬಂಧಿಕಳಾದ ದೇವತೆಯೂ, ಅವನಿಗೆ ಅತಿಪ್ರಿಯಳೂ, ಪ್ರಮಾಣಗಳಿಂದ ನಿಶ್ಚಿತವಾದ ಸತ್ವಾದಿ ಸ್ವರೂಪಳೂ, ಗುಣಾಭಿಮಾನಿಯೂ, ಆದ ದುರ್ಗಾದೇವಿಯೇ ಮೋಹಕಳು; ಅಂದಮೇಲೆ, ಚಿರಕಾಲಾನಂತರ ಅವಳ ಮೋಹವು ಅಳಿಯುವದಲ್ಲವೇ ಎಂದು ಕೇಳಿದರೆ, ಅವಳಿಂದುಂಟಾದ ಮೋಹವನ್ನು ಮಿಕ್ಕಿ ಪಾರಾಗಲು ಯಾರೂ ಸಮರ್ಥರಲ್ಲ. ಆದ್ದರಿಂದ ಯಾರಿಗೂ ಬಾಧಕ ಜ್ಞಾನವುಂಟಾಗದೆಂಬ ಅಭಿಪ್ರಾಯ ಇಲ್ಲಿ ವಿವೇಕವೇನಂದರೆ, 'ನನ್ನ ಮಾಯೆಯು' ಇಷ್ಟರಿಂದಲೇ ಮುಗಿಯದೆ, 'ದೈವೀ' ಎಂದು ಹೇಳಿದ್ದರಿಂದ 'ಅವಳು ನನಗೆ ಪ್ರಿಯಳು' ಎಂದು ಹೇಳಿದರೆ, ಇಷ್ಟರಿಂದಲೇ 'ಅವಳನ್ನು ಮಿಕ್ಕುವದು ಹೇಗೆ' ಎಂಬ ಸಂದೇಹವು ಬರುವದು, ಅದರ ನಿರಸನೆಗಾಗಿ ಅವಳಿಗೂ ಸೃಷ್ಟಿ, ಸ್ಥಿತಿ, ಲಯಾದಿ ಗುಣಗಳ ಸಾಮರ್ಥ್ಯವಿದ್ದು, ಪರಮಾತ್ಮನಿಗೆ ಅತಿಪ್ರಿಯಳಾದ್ದರಿಂದ ಆಕೆಗೂ ಅತಿಸಾಮರ್ಥ್ಯವುಂಟೆಂದು ಸೂಚಿತ

ವಾಯಿತು. ಅದರಂತೆಯೇ, 'ಗುಣಮಯೀ' ಎಂದು ಹೇಳಿದ್ದರಿಂದ ಗುಣಗಳಿಗೆ ಅಭಿಮಾನಿಯಾದ್ದರಿಂದ ತಮೋಗುಣದಿಂದಲೇ ಇಂತಹ ಮೋಹವು ಹುಟ್ಟುವದೆಂದು ಸೂಚಿತವಾಯಿತು. ಹಾಗಾದರೆ, ಅನುಮಾನವಷ್ಟೇ ಅಲ್ಲ; ಪರಮಾತ್ಮನಿಂದ ಪ್ರೇರಿತಳಾದ ಮಾಯೆಯು ಮೋಹಕ್ಕೆ ಕಾರಣಳಾದರೆ, ಅವಳನ್ನು ಮೀರಲು ಯಾರೂ ಸಮರ್ಥರಾಗರು, ಮತ್ತು ಅವರಿಗೆ ಯಾವುದರ ಜ್ಞಾನವೂ ಆಗಲರಿಯದೆಂದು ಸಂದೇಹಪಟ್ಟರೆ, ಎಲ್ಲವನ್ನು ಬಿಟ್ಟು ಗುರುಗಳ ಅಭಿವಂದನೆ ಮುಂತಾದವುಗಳನ್ನು ಕೂಡ ಅವರು ಪರಮಾತ್ಮನ ಭಕ್ತರೆಂದು ಭಾವಿಸಿ ಮಾಡುತ್ತ ನನಗೆ ಶರಣಹೊಕ್ಕವರು ಮಾಯೆಯಿಂದುಂಟಾದ ಮೋಹವನ್ನು ದಾಟುವರು.

ವಿಂ ಅಂ—ಲೋಕದಲ್ಲಿ ಸಿಂಪನ್ನು ಕಂಡು ಬೆಳ್ಳಿಯೆಂದು ಭ್ರಮಿಸುವದನ್ನು ಕಾಣುವೆವು. ಇಂತಹ ಜ್ಞಾನವೇ ಭ್ರಾಂತಿ. ಸಿಂಪಿನ ಸಮೀಪಕ್ಕೆ ಹೋಗಿ ನೋಡಿದ ಬಳಿಕ "ಏನಿದು! ನಾನು ಇಷ್ಟೊತ್ತಿನವರೆಗೆ ಕಂಡ ವಸ್ತುವು ಬೆಳ್ಳಿಯಲ್ಲ, ಸಿಂಪು" ಎಂದು ನೈಜವಾದ ಜ್ಞಾನವು ಹುಟ್ಟುವದು. ಈ ನೈಜಜ್ಞಾನವೇ ಮೊದಲಿನ ಭ್ರಾಂತಿಜ್ಞಾನಕ್ಕೆ ಪ್ರತಿಬಂಧಕವು; ಆದ್ದರಿಂದ ಇದೇ ಬಾಧಕಜ್ಞಾನವೆನಿಸುವದು.

೧೫. ಕೃಷ್ಣಾ, ನಿನ್ನ ಜ್ಞಾನವು ಮಾಯೆಯನ್ನು ಮೀರಲು ಉಪಾಯವೆಂದು ಹೇಳಿದರೆ, ನಿನಗೇ ಎಲ್ಲರೂ ಶರಣಹೊಕ್ಕು ನಿನ್ನ ಮಾಯೆಯನ್ನು ಏಕೆ ದಾಟುವದಿಲ್ಲ ಎಂದು ಕೇಳಿದ್ದಕ್ಕೆ ಉತ್ತರ :—

**न मां दुष्कृतिनो मूढाः प्रपद्यंते नराधमाः ।**
**माययापहृतज्ञाना आसुरं भावमाश्रिताः ॥ १५ ॥**

ಅಂ—ಪಾಪಿಗಳು, ವಿವೇಕಹೀನರು, ನರಾಧಮರು, ಅಧಿಷ್ಠಾನ ಯಥಾರ್ಥಜ್ಞಾನವಿಲ್ಲದ್ದರಿಂದ ಮಿಥ್ಯಾಜ್ಞಾನಿಗಳು, ಅಸುರಸ್ವಭಾವದವರು, ಅಥವಾ ಇಂದ್ರಿಯಗಳಲ್ಲಿಯೇ ಮೈಮರೆತು ವಿಷಯಗಳಲ್ಲಿ ಮುಳುಗಿದ ಅಧಮಾಧಿಕಾರಿಗಳು ನನ್ನನ್ನು ಹೊಂದುವದಿಲ್ಲ.

೧೬. ಸತ್ಕರ್ಮ ಮಾಡುವ ಅಧಿಕಾರಿಗಳು ನನ್ನನ್ನೇ ಆಶ್ರಯಿಸುವರು; ಆದರೆ, ಅವರಲ್ಲಿ ಕೂಡ ತಾರತಮ್ಯ ಉಂಟೆಂದು ಹೇಳಿದ್ದು :—

**चतुर्विधा भजंते मां जनाः सुकृतिनोऽर्जुन ।**
**आर्तो जिज्ञासुरर्थार्थी ज्ञानी च भरतर्षभ ॥ १६ ॥**

ಅಂ—ಅರ್ಜುನಾ, ಪೂರ್ವಜನ್ಮದಲ್ಲಿ ಪುಣ್ಯವಂತರಾದವರು ನನ್ನನ್ನಾರಾಧಿಸುವರು. ಅವರಲ್ಲಿ ನಾಲ್ಕು ವಿಧ, ಯಾವುವೆಂದರೆ, (೧) ರೋಗಾದಿಗಳಿಂದ ಪೀಡಿತನು, (೨) ಆತ್ಮಜ್ಞಾನವನ್ನು ಬಯಸುವವನು, (೩) ಹಣದಾಸೆಯುಳ್ಳವನು, (೪) ಆತ್ಮತತ್ವಬಲ್ಲ ಜ್ಞಾನಿಯು.

**तेषां ज्ञानी नित्ययुक्त एकभक्तिर्विशिष्यते ।**
**प्रियो ज्ञानिनोऽत्यर्थमहं स च मम प्रियः ॥ १७ ॥**

ಅಂ—ಹಿಂದಿನ ಶ್ಲೋಕದಲ್ಲಿ ಹೇಳಿದಂತೆ, ನನ್ನನ್ನು ಆರಾಧಿಸುವ ನಾಲ್ಕು ಬಗೆಯ ಅಧಿಕಾರಿಗಳಲ್ಲಿ ಪರಮಾತ್ಮನನ್ನು ಧ್ಯಾನಯೋಗದಿಂದ ನಿತ್ಯದಲ್ಲಿಯೂ ಆರಾಧಿಸುವವನೂ, ನನ್ನಲ್ಲಿಯೇ ಅತಿ

ಭಕ್ತಿಯುಳ್ಳವನೂ, ಶ್ರೇಷ್ಠನು. ಯಾಕೆಂದರೆ, ಪೂರ್ವೋಕ್ತ ಜ್ಞಾನಿಗಳಲ್ಲಿ ಈತನು ನನಗೆ ಪ್ರಿಯತಮನು. ನಾನಾದರೂ ಅವನಿಗೆ ಜೀವದ ಜೀವನು.

೧೮. ಇನ್ನು, ಹಿಂದಣ ಶ್ಲೋಕದಲ್ಲಿ ಒಬ್ಬನನ್ನೇ ಶ್ಲಾಘಿಸಿದ್ದರಿಂದ ಅನ್ಯರನ್ನು ನಿಂದಿಸಿದಂತಾಯಿತಲ್ಲವೇ ಎಂಬ ಸಂಶಯವನ್ನು ನಿರಾಕರಿಸಿದ್ದು :—

**उदाराः सर्व एवैते ज्ञानी त्वात्मैव मे मतम् ।**
**आस्थितः स हि युक्तात्मा मामेवानुत्तमां गतिम् ॥ १८ ॥**

**ಅಂ**—ಈ ಮೊದಲು ಹೇಳಿದ ನಾಲ್ಕು ಬಗೆಯ ಅಧಿಕಾರಿಗಳೆಲ್ಲರು ಉತ್ತಮರಾದಾಗ್ಯೂ, ಜ್ಞಾನಿಯು ನನಗೆ ಅತಿ ಪ್ರಿಯನಾದ್ದರಿಂದ ನನ್ನ ಸ್ವರೂಪಕ್ಕೆ ಅಲ್ಪಸದೃಶ ಎನಿಸುವನು; ಅಂದರೆ, ಎಲ್ಲವೂ ನನ್ನ ಅಧೀನವೇ ಎಂಬುವ ಜ್ಞಾನವು ಅವನಲ್ಲಿ ಬೆಳಗುತ್ತಿರುವ ಮೂಲಕ ಇಲ್ಲಿ ಅಭೇದವು ಔಪಚಾರಿಕವಾಗಿ ಹೇಳಲ್ಪಟ್ಟಿದೆ; ಅಥವಾ ನನ್ನನ್ನು ಅವನು ಹೊಂದುವನು. ಇದೇ ನನ್ನ ಸಿದ್ಧಾಂತವೆಂದು ತಿಳಿ. ಏಕೆಂದರೆ, ಈ ಜ್ಞಾನಿಯು ಅತಿ ಉತ್ತಮವಾದ ಗತಿಯನ್ನು ಹೊಂದಬೇಕೆಂದು ಸಮಾಧಿಯಲ್ಲಿ ಹೊಕ್ಕವನಾಗಿ ಯಾವಾಗಲೂ ನನ್ನನ್ನೇ ಆಸರಗೊಂಡಿರುವನು.

೧೯. ಇಂತಹ ಜ್ಞಾನವುಳ್ಳ ಅಧಿಕಾರಿಯು ದುರ್ಲಭನೆಂದು ಹೇಳಿದ್ದು :—

**बहूनां जन्मनामंते ज्ञानवान्मां प्रपद्यते ।**
**वासुदेवः सर्वमिति स महात्मा सुदुर्लभः ॥ १९ ॥**

**ಅಂ**—ಹಲವು ಜನುಮಗಳನ್ನು ನೀಗಿದ ಬಳಿಕ ಎಲ್ಲವೂ ವಾಸುದೇವನಾಮಕ ಪರಮಾತ್ಮನಿಗೆ ಅಧೀನವೆಂದು ತಿಳಿಯುವದರಿಂದ ಆ ಜ್ಞಾನಿಯು ನನ್ನನ್ನು ಹೊಂದುವನು. ಇದರಿಂದ, 'ಪರಮಾತ್ಮನ ಜ್ಞಾನಿಗಳಿಗೇ ಮೋಕ್ಷವೇಕೆ' ಎಂಬ ಸಂದೇಹ ದೂರಾಯಿತು, ಏಕೆಂದರೆ, ಪರಮಾತ್ಮನೊಬ್ಬನೇ ಪೂರ್ಣನಾದ್ದರಿಂದ ಜ್ಞಾನ ಮುಂತಾದವುಗಳನ್ನು ಈಯುವ ಸಾಮರ್ಥ್ಯ ಅವನಿಗೇ ಉಂಟು. ಇಂತಹ ಜ್ಞಾನವುಳ್ಳ ಮಹನೀಯನು ದುರ್ಲಭನೇ ಸರಿ. ಇದರಿಂದ, 'ವಾಸುದೇವನ ಜ್ಞಾನದಿಂದ ಮೋಕ್ಷಪ್ರಾಪ್ತಿ ಎಂದು ಹೇಳಿದರೆ, ಎಲ್ಲರಿಗೂ ಅದು ಪ್ರಾಪ್ತವಾಗಲಿ' ಎಂದು ಬರುವ ಸಂದೇಹವು ದೂರಾಯಿತು. ಏಕೆಂದರೆ, ವಾಸುದೇವನಾಮಕ ಪರಮಾತ್ಮಜ್ಞಾನದಿಂದ ಮೋಕ್ಷವುಂಟಾದರೂ, ಅವನ ಜ್ಞಾನವು ಎಲ್ಲರಿಗೂ ಇರದ್ದರಿಂದ ಅದು ಎಲ್ಲರಿಗೂ ಸಾಧ್ಯವಲ್ಲೆಂಬ ಅಭಿಪ್ರಾಯ.

೨೦. ಪ್ರಪಂಚದಲ್ಲಿ ಪರಮಾತ್ಮನ ಜ್ಞಾನವುಳ್ಳವರು ಅನೇಕರು ಕಂಡುಬರುವರು, ಅಂದಬಳಿಕ ಅಂಥ ಜ್ಞಾನಿಯು ದುರ್ಲಭನೆಂದು ಹೇಳಿದ್ದು ಸರಿಯೇ ಎಂಬುದಕ್ಕೆ ಉತ್ತರ —

**कामैस्तैस्तैर्हृतज्ञानाः प्रपद्यंतेऽन्यदेवताः ।**
**तं तं नियममास्थाय प्रकृत्या नियताः स्वया ॥ २० ॥**

**ಅಂ**—ತಮ ತಮಗೆ ಅಭಿಮತವಾದ ಇಚ್ಛೆಗಳಿಗೆ ಒಳಗಾಗಿದ್ದರಿಂದ ಜ್ಞಾನಶೂನ್ಯರಾಗಿ ಆಯಾ ವೇದಗಳಲ್ಲಿ ಹೇಳಿದ ನಿಯಮಗಳನ್ನಾಶ್ರಯಿಸಿ, ಪ್ರಕೃತಿಗೆ ಅಥವಾ ತಮ್ಮ ಸ್ವಭಾವಕ್ಕೆ ವಶರಾಗಿ ಚತುರ್ಮುಖಾದಿ ದೇವತೆಗಳನ್ನು ಆಶ್ರಯಿಸುವರು. ಇಲ್ಲಿ ಮುಖ್ಯ ಅಭಿಪ್ರಾಯವೇನಂದರೆ, ಈ

ಅಧಿಕಾರಿಗಳು ಜ್ಞಾನಿಗಳಂತೆ ತೋರುವರಷ್ಟೇ ? ಅವರು ವಿವಿಧ ಕಾಮಪೀಡಿತರಾಗಿ ಪರಮಾತ್ಮನೇ ಸರ್ವೋತ್ತಮನೆಂಬ ಜ್ಞಾನವಿಲ್ಲದೆ ಅನ್ಯ ದೇವತೆಗಳನ್ನು ಆರಾಧಿಸಿ, ಅದೇ ದೇವತೆಗಳನ್ನೇ ಹೊಂದು ವರು; ಆದ್ದರಿಂದ ಪರಮಾತ್ಮನನ್ನೇ ಯಥಾರ್ಥಜ್ಞಾನದಿಂದ ಆರಾಧಿಸುವ ಶುದ್ಧ ಭಾಗವತನು ದುರ್ಲಭನೆಂದು ತಿಳಿಯಬೇಕು.

೨೧. ಇನ್ನು, ಯಾಗಾದಿ ಕರ್ಮಗಳನ್ನು ಮಾಡುವವನು ಕ್ರಮವಾಗಿ ಭಾಗವತನಾಗುವನೋ ಎಂದು ಕೇಳಿದರೆ, ಈ ವಿಷಯದಲ್ಲಿ ಅಧಿಕಾರಿಯು ಮಿಶ್ರಸ್ವಭಾವದವನೋ ? ಸದುಪದೇಶ ಮುಂತಾದ ಸಾಮಗ್ರಿಯಿಲ್ಲದೆ ನಿಶ್ಚಯ ಜ್ಞಾನವಿಲ್ಲದ್ದರಿಂದ ಅನ್ಯ ದೇವತೆಗಳನ್ನಾರಾಧಿಸುವ ಶುದ್ಧ ಭಾಗವತನೋ? ಎಂದು ಎರಡು ವಿಕಲ್ಪಗಳನ್ನು ಅಂಗೀಕರಿಸಿ, ಅವುಗಳಲ್ಲಿ ಮೊದಲನೆಯದಕ್ಕೆ ಉತ್ತರ ಹೇಳಿದ್ದು —

यो यो यां यां तनुं भक्तः श्रद्धयार्चितुमिच्छति ।
तस्य तस्याचलां श्रद्धां तामेव विदधाम्यहम् ॥२१॥

ಅಂ—ಅತ್ಯುತ್ತಮನಾದ ಶುದ್ಧ ಭಾಗವತನಿಂದ ಭಿನ್ನನಾದ ಅಂದರೆ, ವಿಷ್ಣುವಿನ ತತ್ವಜ್ಞಾನ ಮತ್ತು ವಿಪರೀತಜ್ಞಾನಗಳಿಂದ ಹೀನನಾದ ಅಧಿಕಾರಿಯು ಕಾರಣವಿಶೇಷದಿಂದ ಚತುರ್ಮುಖ ರುದ್ರಾದಿ ದೇವತೆಗಳಲ್ಲಿ ಭಕ್ತಿಯನ್ನಿಟ್ಟು ಆಸ್ತಿಕ್ಯಬುದ್ಧಿಯಿಂದ ಆರಾಧಿಸುವ ಇಚ್ಛೆಯುಳ್ಳವನಾದರೆ, ಅಂಥ ಅಧಿಕಾರಿಗೆ ಅದಕ್ಕೆ ತಕ್ಕಂತೆ ಅಚಲಬುದ್ಧಿಯನ್ನು ನಾನೇ ಕೊಡುವೆ.

೨೨. स तया श्रद्धया युक्तस्तस्याराधनमीहते ।
लभते च ततः कामान्मयैव विहितान्हितान् ॥२२॥

ಅಂ—ಬ್ರಹ್ಮ, ರುದ್ರಾದಿ ದೇವತೆಗಳನ್ನು ಆರಾಧಿಸುವ ಅಧಿಕಾರಿಯು ಶ್ರದ್ಧೆಯಿಂದ ಆಯಾ ದೇವತೆಗಳನ್ನು ಭಜಿಸುವನು. ಅವರ ಆರಾಧನೆಯಿಂದ ಆ ದೇವತೆಗಳಲ್ಲಿ ನಾನು ಪ್ರೇರಿಸಿದ ತನ್ನ ಅಭೀಷ್ಟಗಳನ್ನು ಅಧಿಕಾರಿಯು ಪಡೆಯುವನು. ಏಕೆಂದರೆ, ಅವರಲ್ಲಿದ್ದು ಫಲಕೊಡುವವನು ನಾನೇ ಹೊರತು ಅನ್ಯ ದೇವತೆಯಲ್ಲ. ಇನ್ನು, ಹಿಂದಿನ ಮತ್ತು ಈ ಶ್ಲೋಕಗಳನ್ನು ಎರಡನೆಯ ವಿಧದ ಅಧಿಕಾರಿಯ ( ಉಪದೇಶವಿಲ್ಲದ್ದರಿಂದ ಪರಮಾತ್ಮನ ಬಗ್ಗೆ ನಿಶ್ಚಯವಿಲ್ಲದೆ ಅನ್ಯ ದೇವತೆಗಳನ್ನು ಆರಾಧಿಸುವ ಶುದ್ಧ ಭಾಗವತನ ) ವಿಷಯಕ್ಕೆ ಯೋಜಿಸಿ ಹೇಳಿದ್ದು — ವಿಷ್ಣುಭಕ್ತನೇ ಶ್ರೀವಿಷ್ಣುವಿ ನನ್ನು ಅರಿತಾಗ್ಯೂ, ಅನ್ಯ ಕಾರಣದಿಂದ ಬ್ರಹ್ಮ, ರುದ್ರಾದಿ ದೇವತೆಗಳನ್ನು ಆರಾಧಿಸುವನು. ಮುಂದೆ, ಕ್ರಮವಾಗಿ ಪರಮಾತ್ಮನ ಅನುಗ್ರಹದಿಂದ ಸಂಪಾದಿಸಿದ ಗುರೂಪದೇಶದ್ವಾರಾ ಶ್ರೀವಿಷ್ಣುವಿನನ್ನು ಆರಾಧಿಸುವನು, ಹೀಗೆ ಪರಮಾತ್ಮನ ಆರಾಧನೆಯಿಂದಲೇ ಅವನ ಸ್ವರೂಪಕ್ಕೆ ಯೋಗ್ಯವಾದ ಮೋಕ್ಷಾದಿ ಮನೋಭೀಷ್ಟಗಳನ್ನು ಹೊಂದುವನು.

೨೩. ಹಾಗಾದರೆ, ಅನ್ಯ ದೇವತೆಗಳನ್ನಾರಾಧಿಸುವವರಿಗೆ ಕೂಡ ನಿನ್ನಿಂದಲೇ ಫಲದೊರೆ ಯುವದಾದರೆ, ಅವರನ್ನ ಬಿಟ್ಟು ನಿನ್ನನ್ನೇ ಆರಾಧಿಸಬೇಕೆಂಬುದಕ್ಕೆ ಕಾರಣವೇನೆಂದು ಕೇಳಿದ್ದಕ್ಕೆ ಹೇಳಿದ್ದು —

अंतवत्तु फलं तेषां तद्भवत्यल्पमेधसाम् ।
देवान्देवयजो यांति मद्भक्ता यांति मामपि ॥ २३ ॥

ಅಂ—ರಮಾ-ಬ್ರಹ್ಮಾದಿಗಳಿಗಿಂತ ಶ್ರೀವಿಷ್ಣುವು ಉತ್ತಮನೆಂದು ತಿಳಿದು ಅನ್ಯ ದೇವತೆಗಳ ನ್ನಾರಾಧಿಸುವವರಿಗೆ ದೊರೆಯುವ ಫಲವು ನಾಶವುಳ್ಳದ್ದೇ ಸರಿ. ಏಂಕೆದರೆ, ಅಲ್ಪಜ್ಞಾನಿಗಳಾದ ಅವರಿಗೆ ಅಲ್ಪಫಲದಲ್ಲಿಯೇ ಬುದ್ಧಿಯು ಓಡುವದು. ಇನ್ನು, ಆ ಫಲವು ನಾಶವುಳ್ಳದ್ದೆಂದು ಹೇಳುವ ಕಾರಣವೇನೆಂದು ಪ್ರಶ್ನಮಾಡಿದರೆ, ಶ್ರೀವಿಷ್ಣುವು ಸರ್ವೋತ್ತಮನೆಂದು ತಿಳಿದು ಬ್ರಹ್ಮಾದಿ ದೇವತೆ ಗಳನ್ನಾರಾಧಿಸುವವರು ಆಯಾ ದೇವತೆಗಳನ್ನೇ ಹೊಂದುವರು, ನನ್ನನ್ನಲ್ಲ; ಆದ್ದರಿಂದ ಅವರ ಫಲವು ನಾಶವುಳ್ಳದ್ದು. ಆದರೆ, ನನ್ನ ಭಕ್ತರು ಆ ದೇವತೆಗಳನ್ನು ಹೊಂದಿ ಕಡೆಗೆ ನನ್ನನ್ನು ಹೊಂದುವರು; ಅಂತೆಯೇ, ಅವರಿಗೆ ದೊರೆಯುವ ಫಲಕ್ಕೆ ನಾಶವಿಲ್ಲ. ಇದರಿಂದ ತಿಳಿಯತಕ್ಕದ್ದೇನಂದರೆ, ನನ್ನ ಆರಾಧನೆಯನ್ನು ಮುಖ್ಯವೃತ್ತಿಯಿಂದಲೂ. ಅನ್ಯ ದೇವತೆಗಳು ನನ್ನ ಪರಿವಾರದವರೆಂಬ ಭಾವನೆ ಯಿಂದಲೂ, ಆರಾಧಿಸತಕ್ಕದ್ದು.

೨೪. ಕೃಷ್ಣಾ, ನಿನ್ನಿಂದ ದೊರಕಿಸಿದ ಫಲಕ್ಕೆ ನಾಶವಿಲ್ಲೆಂತಲೂ, ದೇವತೆಗಳನ್ನು ಹೊಂದಿ ಸಂಪಾದಿಸಿದ ಫಲಕ್ಕೆ ನಾಶವುಂಟೆಂತಲೂ, ಹೇಳಿರುವಿ. ಅಂದಬಳಿಕ ಆ ದೇವತೆಗಳಿಗಿಂತ ನಿನ್ನಲ್ಲಿ ವಿಶೇಷವೇನುಂಟು ಎಂದು ಕೇಳಿದ್ದಕ್ಕೆ ಉತ್ತರ:—

**अव्यक्तं व्यक्तिमापन्नं मन्यंते मामबुद्धयः ।**
**परं भावमजानंतो ममाव्ययमनुत्तमम् ॥२४॥**

ಅಂ—ಅನ್ಯರಿಗಿಂತ ವಿಲಕ್ಷಣನೂ, ಅನ್ಯ ಉತ್ತಮರಹಿತನೂ, ನಾಶರಹಿತನೂ, ಆದ ನನ್ನನ್ನು ಯಥಾರ್ಥವಾಗಿ ತಿಳಿಯದ ಅಜ್ಞರು ನಾನು ದೇಹಹೀನನೆಂತಲೂ, ದೇಹವುಳ್ಳವನೆಂತಲೂ, ಭಾವಿಸು ವರು. ಇದರಿಂದ, ದೇಹಾದಿರಾಹಿತ್ಯವೇ ದೇಹವುಳ್ಳ ಅನ್ಯ ದೇವತೆಗಳಿಗಿಂತ ನನ್ನಲ್ಲಿಯ ವೈಶಿಷ್ಟ್ಯ ವೆಂದು ತಿಳಿಯಬೇಕು; ಅಥವಾ ಅನ್ಯ ದೇವತಾರಾಧಕರು, ನನ್ನ ಆರಾಧಕರು, ತ್ರೈವಿದ್ಯರು, ಭಾಗ ವತರು, ಇರುವಂತೆ, ನನ್ನ ದ್ವೇಷಿಗಳೂ ಕೆಲವರುಂಟೆಂಬು ಹೇಳಿದ್ದು:— ತಿಳಿಯಲಶಕ್ಯನಾದ ನನ್ನನ್ನು ತಿಳಿಯಲು ಯೋಗ್ಯನಾದ ಜೀವವೆಂದು ಈ ಅಜ್ಞಾನಿಗಳು ಬಾಯಬೊಂಬೆಯುವರು; ಅಂದರೆ ನನಗೂ, ಜೀವಕ್ಕೂ, ಐಕ್ಯವನ್ನು ಹೇಳುವರು. ಹಾಗಾದರೆ, ಹಿಂದೆ ೭ನೆಯ ಶ್ಲೋಕದಲ್ಲಿ ‘ ನೀನು ಎಲ್ಲಕ್ಕೂ ಪ್ರೇರಕ ಮುಂತಾದ ಮಹಿಮೆಯುಳ್ಳವನು ’ ಎಂದು ಹೇಳಿದ್ದರಿಂದ ಕೆಲವರು ಜೀವಕ್ಕೂ, ನಿನಗೂ, ಭೇದವಿಲ್ಲೆಂದು ಏಕೆ ಹೇಳುವರೆಂಬುದಕ್ಕೆ ಉತ್ತರ:— ನನ್ನ ನಿಜಜ್ಞಾನವಿಲ್ಲದೆ ಜೀವಕ್ಕೂ, ನನಗೂ, ಐಕ್ಯವಾದಿಸುವ ಈ ನರಗುರಿಗಳು ತಮೋಯೋಗ್ಯರೇ ಸರಿ !

೨೫. ಇನ್ನು, ನಿನ್ನ ಯಥಾರ್ಥಜ್ಞಾನವಿಲ್ಲದ್ದರಿಂದ ಆ ಅಜ್ಞಾನಿಗಳು ನಿನ್ನನ್ನು ನಿಂದಿಸುವ ಮೂಲಕ ನಿನಗೆ ಖೇದವಾಗುವದೋ ಎಂದು ಕೇಳಿದರೆ, ಹಿಂದಿನ ಶ್ಲೋಕದಲ್ಲಿ ‘ ನನ್ನ ಯಥಾರ್ಥ ಜ್ಞಾನವಿಲ್ಲದ್ದರಿಂದ ’ ‘ ವಿಪರೀತವಾಗಿ ತಿಳಿಯುವರು ’ ಎಂಬುವ ವಾಕ್ಯಗಳಿಂದ ಹೇಳಿದ ವಿಪರೀತ ಜ್ಞಾನವು ಕೂಡ ಸ್ವತಂತ್ರವಾಗಿರದೆ, ನನಗೆ ಅಧೀನವೇ ಸರಿ. ಅಂದಬಳಿಕ ನನಗೆ ಅಂಥ ನಿಂದೆಯಿಂದ ಖೇದವಾಗುವ ಕಾರಣವಿಲ್ಲ. ಆ ಮೂಢನು ಕೂಡ ನನಗೆ ಅಧೀನನೆಂಬ ಅಭಿಪ್ರಾಯದಿಂದ ಹೇಳಿದ್ದು:—

**नाहं प्रकाशः सर्वस्य योगमायासमावृतः ।**
**मूढोऽयं नाभिजानाति लोको मामजमव्ययम् ॥ २५ ॥**

**ಅಂ**—ಸಾಮರ್ಥ್ಯವೆಂಬ ಸಾಧನ, ದುರ್ಗಾದೇವಿ, ಇವರಿಬ್ಬರಿಂದ ನಾನು ಮುಚ್ಚಲ್ಪಟ್ಟಿದ್ದ ರಿಂದ ಎಲ್ಲರಿಗೂ ನನ್ನ ವಿಷಯಕ ಯಥಾರ್ಥಜ್ಞಾನವಾಗದು. ಆದುದರಿಂದಲೇ ನಾನು ಹುಟ್ಟು–ಸಾವು ಗಳಿಲ್ಲದವನೆಂದು ಈ ಮೂಢ ಪ್ರಪಂಚವು ತಿಳಿಯುವದಿಲ್ಲ.

೨೬. ಇನ್ನು, ಪರದೆಯ ಒಳಗೂ, ಹೊರಗೂ, ಇರುವವರಿಗೆ ಪರಸ್ಪರರ ಜ್ಞಾನವಿಲ್ಲದಂತೆ ನಿನಗಾದರೂ ಪ್ರಾಣಿಗಳ ವಿಷಯಕ್ಕೆ ಅಜ್ಞಾನವು ಉಂಟಾಗುವದಲ್ಲ ಎಂದು ಸಂದೇಹಗೊಂಡರೆ, ಪರದೆಯಂತಿರುವ ಮಾಯೆಯು ಕೂಡ ನನ್ನನ್ನು ಬಂಧಿಸಲು ಸಮರ್ಥಳಲ್ಲೆಂದು ಹೇಳಿದ್ದು —

**वेदाहं समतीतानि वर्तमानानि चार्जुन ।**
**भविष्याणि च भूतानि मां तु वेद न कश्चन ॥ २६ ॥**

**ಅಂ**—ಅರ್ಜುನಾ, ಮಾಯೆಯಿಂದಾಗುವ ಬಂಧನವು ನನಗಿಲ್ಲದ್ದರಿಂದ ಭೂತ–ಭವಿಷ್ಯತ್– ವರ್ತಮಾನ ಪ್ರಾಣಿಗಳನ್ನು ನಾನು ಬಲ್ಲೆ, ಆದರೆ, ಯಾರೂ ನನ್ನನ್ನು ನಿಜವಾಗಿ ತಿಳಿಯರು. ಏಕೆಂದರೆ, ಸರ್ವಲೋಕಕ್ಕೆ ಪ್ರಕೃತಿಬಂಧನ ಉಂಟು. ಇಲ್ಲಿ ಅಭಿಪ್ರಾಯವೇನಂದರೆ, ಬ್ರಹ್ಮಾದಿ ದೇವತೆಗಳು ಅತಿಸಮರ್ಥರಾದರೂ, ಅವರಿಗೆ ನನ್ನ ಜ್ಞಾನವೆಂಬುದು ಅಲ್ಪವೇ ಉಂಟು, ಹೊರ್ತು ಅವರು ನನ್ನನ್ನು ಸಾಕಲ್ಯದಿಂದ ತಿಳಿಯರು

೨೭. ಹಿಂದೆ ೧೪ ಮತ್ತು ೨೫ನೆಯ ಶ್ಲೋಕಗಳಲ್ಲಿ ತ್ರಿಗುಣಾತ್ಮಕ ಪ್ರಕೃತಿಯೂ, ಪರಮಾತ್ಮನೂ, ಜೀವೇಶ್ವರರಿಗೆ ಭೇದ ಉಂಟೆಂಬ ವಿಷಯದಲ್ಲಿ ಒದಗುವ ಮೋಹಕ್ಕೆ ಮುಖ್ಯಕಾರಣರೆಂದು ಹೇಳಲಾಗಿದೆ. ಈಗ, ಇಚ್ಛೆ, ದ್ವೇಷ, ಇವುಗಳು ಬೆಳೆದು ಅದರಿಂದ ಹುಟ್ಟಿದ ಸುಖದುಃಖ ಮುಂತಾದ ದ್ವಂದ್ವ ವಿಷಯಕ ಮೋಹವು ಕೂಡ ಅವಾಂತರ ಕಾರಣವೆಂದು ಹೇಳಿದ್ದು:—

**इच्छाद्वेषसमुत्थेन द्वंद्वमोहेन भारत ।**
**सर्वभूतानि संमोहं सर्गे यांति परंतप ॥ २७ ॥**

**ಅಂ**—ಇಚ್ಛೆ ದ್ವೇಷಗಳು ಬಲಿತು ಸುಖದುಃಖ, ಲಾಭಹಾನಿ, ಮುಂತಾದ ದ್ವಂದ್ವಗಳಬಗ್ಗೆ ಮೋಹವು (ದುಃಖವು ನಿಂದ್ಯವಾದಂತೆ ವೈಷಯಿಕ ಸುಖವೂ ನಿಂದ್ಯ) ಮಿಥ್ಯಾಜ್ಞಾನವೇ ಸರಿ. ಸೃಷ್ಟಿಕಾಲ ಮೊದಲ್ಗೊಂಡು ಸಕಲ ಪ್ರಾಣಿಗಳು ಅಂತಹ ಮೋಹದಿಂದ ಜೀವೇಶ್ವರರು ಐಕ್ಯವೆಂಬ ಮಿಥ್ಯಾಜ್ಞಾನವನ್ನು ಹೊಂದುವರು. ಅಥವಾ "ಕೃಷ್ಣಾ, ಕೆಲವರಲ್ಲಿ ಇರುವ ಜೀವೇಶ್ವರರು ಒಂದೆಂಬ ಮಿಥ್ಯಾಜ್ಞಾನವು ಕೂಡ ನಿನಗೆ ಅಧೀನವೆಂದು" ಹಿಂದೆ ೨೫ನೆಯ ಶ್ಲೋಕದಲ್ಲಿ ಹೇಳಿದ್ದು ಸರಿಯಲ್ಲ. ಏಕೆಂದರೆ, 'ಜೀವೇಶ್ವರರು ಐಕ್ಯವೆಂದು ಹೇಳುವ ಕೆಲ ಅಜ್ಞಾನಿಗಳು ಕೋಪಕ್ಕೆ ಈಡಾಗಿ ಅಹಂಕಾರ ಕ್ಕೊಳಪಟ್ಟು ಹಾಗೆ ವಾದಿಸುವರು' ಎಂಬ ವಚನಕ್ಕನುಸರಿಸಿ, ಇಚ್ಛೆ, ದ್ವೇಷಗಳೇ ಅಂತಹ ಮಿಥ್ಯಾಜ್ಞಾನಕ್ಕೆ ಕಾರಣವಾದವಲ್ಲ ಎಂದು ಸಂದೇಹಗೊಂಡರೆ, ಅವುಗಳು ಸೃಷ್ಟಿಮೊದಲು ಇರದೆ, ಸೃಷ್ಟಿಯ ನಂತರ ಇರುವದರಿಂದ ಅವು ಅವಾಂತಾರ ಕಾರಣಗಳೆಂದು ಹೇಳಿದ್ದು. ಇಚ್ಛಾ, ದ್ವೇಷಗಳಿಂದ ಉತ್ಪನ್ನವಾದ ಮೋಹಕ್ಕಾಗಿ ಸರ್ವ ಪ್ರಾಣಿಗಳು ಸೃಷ್ಟಿ–ಮೊದಲ್ಗೊಂಡು ಈ ಮೋಹಕ್ಕೆ ವಶರಾಗುವರು. ಏಕೆಂದರೆ, ಜೀವೇಶ್ವರರಲ್ಲಿ ವೈಲಕ್ಷಣ್ಯವುಂಟು; ಹೇಗದಂತೆ, ಜೀವವು ಅಲ್ಪಜ್ಞ, ಪರತಂತ್ರ, ಅಲ್ಪಶಕ್ತಿ ಮುಂತಾದ, ಧರ್ಮಗಳುಳ್ಳದ್ದು; ಆದರೆ, ಪರಮಾತ್ಮನು ಸರ್ವಜ್ಞನು, ಸರ್ವಸ್ವತಂತ್ರನು, ಸರ್ವಸಮರ್ಥನು ಇರುವನು. ಹೀಗೆ, ಅವರಿಬ್ಬರ ಧರ್ಮಗಳನ್ನು ತಿಳಿಯದ್ದರಿಂದ ಪ್ರಾಣಿಗಳಿಗೆ ಅಂತಹ ಮೋಹವು ಹುಟ್ಟುವದು.

೨೮. ಸಕಲ ಪ್ರಾಣಿಗಳಿಗೆ ಮೋಹವುಂಟಾಗುವದೆಂದು ಹಿಂದೆ ಹೇಳಿದ್ದರಿಂದ, ಮೋಕ್ಷಮಾರ್ಗವೇ ಕಟ್ಟಾಯಿತಲ್ಲ ಎಂದು ಕೇಳಿದರೆ, ದ್ವಂದ್ವಮೋಹವಿಲ್ಲದವರು ಕೆಲವರುಂಟೆಂದು ಹೇಳಿದ್ದು —

येषां त्वंतगतं पापं जनानां पुण्यकर्मणाम् ।
ते द्वंद्वमोहनिर्मुक्ता भजंते मां दृढव्रताः ॥ २८ ॥

ಅಂ—ಪುಣ್ಯಕರ್ಮಗಳನ್ನಾಚರಿಸುವ ಪ್ರಾಣಿಗಳ ಪಾಪಗಳು ನಾಶವಾಗಿದ್ದರೆ, ಅವರು ಹಿಂದೆ ಹೇಳಿದ ದ್ವಂದ್ವವಿಷಯದ ಮಿಥ್ಯಾಜ್ಞಾನವಿಲ್ಲದವರಾಗಿ, ಚಂಚಲಗೊಳ್ಳದ ಅನುಷ್ಠಾನಪರರಾಗಿ ನನ್ನನ್ನಾರಾಧಿಸುವರು.

೨೯. ಭಗವಂತನ ಆರಾಧನೆಯಿಂದ ಫಲವೇನೆಂದು ಕೇಳಿದರೆ, ಹಿಂದೆ ಹೇಳಿದ ಆರಾಧನೆಯನ್ನು ಅನುವಾದಿಸಿ, ಅದಕ್ಕೆ ಬ್ರಹ್ಮಜ್ಞಾನವೆಂಬ ಫಲ ಹೇಳಿದ್ದು —

जरामरणमोक्षाय मामाश्रित्य यतंति ये ।
ते ब्रह्म तद्विदुः कृत्स्नमध्यात्मं कर्म चाखिलम् ॥ २९ ॥

ಅಂ—ಹುಟ್ಟು ಸಾವುಗಳ ಬಿಡುಗಡೆಯಾಗಿ ಉಪಲಕ್ಷಣದಿಂದ ಸ್ವರ್ಗಾದಿ ಫಲ ನಿವೃತ್ತಿಗಾಗಿ ಸುಸ್ವಭಾವದವರು ನನ್ನನ್ನೇ ಆಶ್ರಯಿಸಿ, ಆರಾಧಿಸುವರು; ಇಂಥವರಿಗೆ ಪರಮಾತ್ಮನ ಜ್ಞಾನವುಂಟು. ಅಲ್ಲದೆ, ಪುಣ್ಯವನ್ನೂ, ಅಧ್ಯಾತ್ಮವನ್ನೂ, ಕರ್ಮವನ್ನೂ, ಇವರು ತಿಳಿಯುವರು. ಅನ್ಯವಿಷಯಗಳ ಆಸಕ್ತಿಗಿಂತ ಮೋಕ್ಷದ ಆ ಸಕ್ತಿಯೇ ಪ್ರಶಸ್ತವೆಂದು ಅಥವಾ ಮೋಕ್ಷಾಸಕ್ತಿಯ ಸ್ತುತಿಗಾಗಿ, ಅದರಂತೆಯೇ, ಅನ್ಯ ಕಾಮನೆಗಳ ನಿವೃತ್ತಿಗಾಗಿ, ಇಲ್ಲಿ 'ಜನನ ಮರಣಗಳ ನಾಶಕ್ಕಾಗಿ' ಎಂದು ಹೇಳಲಾಗಿದೆ; ಹೊರ್ತು ಮೋಕ್ಷೋದ್ದೇಶಕ್ಕಾಗಿ ಭಜನವಿಧಿಯು ಹೇಳಿಲ್ಲ. ಏಕೆಂದರೆ ಏಕಾಂತಭಕ್ತರಿಗೆ ಮೋಕ್ಷಾಪೇಕ್ಷೆ ಸಲ್ಲದು. ಇನ್ನು, ಹಿಂದೆ ೧೪ನೆಯ ಶ್ಲೋಕದಲ್ಲಿ ಪರಮಾತ್ಮನ ಆರಾಧನೆಗೆ ಫಲ ಹೇಳಿರಲಿಕ್ಕಾಗಿ, ಇಲ್ಲಿ ಮತ್ತೆ ಅದನ್ನು ಹೇಳುವ ಕಾರಣವೇನಂದರೆ, ಪರಮಾತ್ಮನ ಆರಾಧನೆಯೇ ಜ್ಞಾನದ್ವಾರದಿಂದ ಸಂಸಾರವನ್ನು ದಾಟಲು ಸಾಧನವು, ಹೊರ್ತು ಅನ್ಯ ಮಾರ್ಗವಿಲ್ಲೆಂದು ಸೂಚಿಸುವದಕ್ಕಾಗಿ ಮತ್ತೆ ಹೇಳಲಾಗಿದೆ.

೩೦. ತತ್ ಬ್ರಹ್ಮ ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದ್ದರಿಂದ ಬ್ರಹ್ಮನಿಗೂ, ಪರಮಾತ್ಮನಿಗೂ, ಭೇದ ಉಂಟೆಂಬ ಸಂದೇಹ ನಿರಾಕರಿಸಿದ್ದು —

साधिभूताधिदैवं मां साधियज्ञं च ये विदुः ।
प्रयाणकालेऽपि च मां ते विदुर्युक्तचेतसः ॥ ३० ॥

ಅಂ—ಅಧಿಭೂತ, ಅಧಿದೈವ, ಅಧಿಯಜ್ಞ, ಇವುಗಳಿಂದ ಯುಕ್ತನಾದವನು ನಾನೆಂದು ಮರಣಕಾಲಕ್ಕೆ ನನ್ನನ್ನೇ ಯಥಾರ್ಥವಾಗಿ ತಿಳಿದವರು ಸಮಾಧಿಯುಕ್ತ ಮನಸ್ಸುಳ್ಳವರು, ಅಥವಾ ದೇಹತ್ಯಾಗಕಾಲದಲ್ಲಿ ನನ್ನ ಸ್ಮರಣೆಯಿಂದ ನನ್ನಲ್ಲಿ ಅಂತಃಕರಣವನ್ನು ನೆಲಿಸಿ, ನನ್ನಲ್ಲಿ ಆಸರಪಡೆದವರು ಬ್ರಹ್ಮನ ವಿಷಯಕ್ಕೆ ಯಥಾರ್ಥ ಜ್ಞಾನವುಳ್ಳವರೆಂಬ ಅಭಿಪ್ರಾಯ.

**इति श्रीमद्भगवद्गीतासूपनिषत्सु ब्रह्मविद्यायां योगशास्त्रे श्रीकृष्णार्जुनसवादे ज्ञानविज्ञानयोगो नाम सप्तमोऽध्यायः ॥ ७ ॥**

**ಓಂ**—ಈ ಮೇರೆಗೆ, ಷಡ್ಗುಣೈಶ್ವರ್ಯಸಂಪನ್ನನಾದ ಪರಮಾತ್ಮನಿಂದ ಮನೋಹರವಾದ, ಅಲಂಕಾರಿಕ ಮತ್ತು ಇಷ್ಟಶಬ್ದಗಳಿಂದ ಉಪದೇಶಿಸಲ್ಪಟ್ಟ, ಉಪನಿಷತ್ತಿಗೆ ಸಮಾನವೂ ಪರಬ್ರಹ್ಮವಿಷಯಕ ವಿದ್ಯೆಯೂ ಎನಿಸುವ ಮತ್ತು ಕರ್ಮಯೋಗಾದಿಗಳನ್ನು ಪ್ರತಿಪಾದಿಸುವ, ಶ್ರೀಕೃಷ್ಣನಿಗೂ ಅರ್ಜುನನಿಗೂ ನಡೆದ ಸಂವಾದರೂಪವಾದ **ಗೀತಾಶಾಸ್ತ್ರದಲ್ಲಿ ಜ್ಞಾನವಿಜ್ಞಾನಯೋಗ** ಎಂಬ **ಏಳನೆಯ** ಅಧ್ಯಾಯವು ಮುಗಿಯಿತು.



# ೮ನೆಯ ಅಧ್ಯಾಯವು

೧–೩ ಹಿಂದಿನ (೭–೨೯,೩೦) ನೆಯ ಶ್ಲೋಕಗಳಲ್ಲಿ "ಪರಮಾತ್ಮನ ಆರಾಧನೆಗೆ ಅವನ ಅಪರೋಕ್ಷಜ್ಞಾನಫಲ ಉಂಟೆಂದೂ, ಮರಣಕಾಲಕ್ಕೆ ಪರಮಾತ್ಮನ ಸ್ಮರಣೆಮಾಡಿದವರಿಗೆ ಅವನ ಪ್ರಾಪ್ತಿಯುಂಟೆಂದೂ" ಹೇಳಿದ್ದು, ಪ್ರಕೃತ ಅಧ್ಯಾಯದಲ್ಲಿ ಅವು ಮುಖ್ಯವಾಗಿ ವಿವರಿಸಲ್ಪಡುವವು. ಆ ಸಂದರ್ಭಕ್ಕನುಸರಿಸಿ, ಮರಣಕಾಲಕ್ಕೆ ಪರಮಾತ್ಮನ ಸ್ಮರಣೆಯಿಂದ ದೊರಕುವ ಫಲ, ಅದಕ್ಕಾಗಿ ಅವಲಂಬಿಸುವ ಸಾಧನಬಗೆ, ಬ್ರಹ್ಮಪ್ರಾಪ್ತಿಯ ಮಾರ್ಗ, ಇವುಗಳು ಕೂಡ ಈ ಅಧ್ಯಾಯದಲ್ಲಿ ನಿರೂಪಿಸಲ್ಪಡುವ ಮೂಲಕ ಹಿಂದಿನ ಅಧ್ಯಾಯಕ್ಕೂ, ಈ ಅಧ್ಯಾಯಕ್ಕೂ, ಭೇದ ಸಿದ್ಧವಾಯಿತು. ಮೇಲಾಗಿ, ಸ್ಮರಣೆಗೆ ವಿಷಯನಾರು ? ಅವನು ಹೊಂದಲು ಯೋಗ್ಯನೇ ? ಇವೆರಡರ ಮಹಿಮೆಯ ವರ್ಣನೆಯು ಕೂಡ ಇರುವದರಿಂದ ಪ್ರಸ್ತುತ ಆರು ಅಧ್ಯಾಯಗಳಲ್ಲಿ ಇದರ ಸಮಾವೇಶವಾಗುವದೆಂದು ತಿಳಿಯಬೇಕು. ಇನ್ನು, (೭–೨೯) ನೆಯ ಶ್ಲೋಕದಲ್ಲಿ "ಪರಬ್ರಹ್ಮನನ್ನು ಬಲ್ಲವರು" ಎಂದು ಹೇಳಿದ್ದರಿಂದ ಬ್ರಹ್ಮನು ಪರಮಾತ್ಮನಿಂದ ಭಿನ್ನನೆಂದು ಕಂಡುಬರುವದು. ಅದರಂತೆಯೇ, (೭–೩೦)ನೆಯ ಶ್ಲೋಕದಲ್ಲಿ "ಭೂತಗಳಿಗೂ, ದೇವತೆಗಳಿಗೂ, ಯಜ್ಞಗಳಿಗೂ, ಶ್ರೇಷ್ಠನೆಂದು ತಿಳಿಯುವರು" ಎಂದು ಹೇಳಿದ್ದರಿಂದ ಪರಮಾತ್ಮನ ಜ್ಞಾನದಿಂದ ಬ್ರಹ್ಮಜ್ಞಾನವು ಭಿನ್ನವೆಂದು ತೋರಿಬರುವದು. ಆದರೆ, ವ್ಯಾಸ ಸ್ಮೃತಿಯಲ್ಲಿ "ವಾಸುದೇವ ಸ್ವರೂಪ ಪರಮಾತ್ಮನೇ ಬ್ರಹ್ಮನು" ಎಂದು ಹೇಳಿ ಇದ. ಹೀಗೆ ಬರುವ ವಿರೋಧಗಳಿಂದ ಸಂಶಯ ಹುಟ್ಟಿ ಅರ್ಜುನನು ಕೇಳಿದ್ದು.—

**अर्जुन उवाच ।**

**किं तद्ब्रह्म किमध्यात्मं किं कर्म पुरुषोत्तम ।**
**अधिभूतं च किं प्रोक्तमधिदैवं किमुच्यते ॥ १ ॥**

**अधियज्ञः कथं कोऽत्र देहेऽस्मिन्मधुसूदन ।**
**प्रयाणकाले च कथं ज्ञेयोऽसि नियतात्मभिः ॥ २ ॥**

ಅಂ—ಇಲ್ಲಿ ೧ನೆಯ ಶ್ಲೋಕದಲ್ಲಿ **किं** ಎಂಬುದರಿಂದ ಸ್ವರೂಪ ವಿಷಯಕ ಪ್ರಶ್ನವೂ, ಎರಡನೇದರಲ್ಲಿಯ **कथं** ಎಂಬುದರಿಂದ ಪ್ರಕಾರ ವಿಷಯ ಪ್ರಶ್ನವೂ, ಎಂದು ತಿಳಿಯಬೇಕು. ಪುರುಷರಲ್ಲೆಲ್ಲ ಶ್ರೇಷ್ಠನಾದ ಪುರುಷೋತ್ತಮನೇ, ಬ್ರಹ್ಮ, ಅಧ್ಯಾತ್ಮ, ಕರ್ಮ, ಎಂದರೇನು ? ಅಧಿಭೂತ ಏತಕ್ಕೆ ಅನ್ನುವರು ? ಮತ್ತು ಅಧಿದೈವವೆಂದರೇನು ? ಮಧುನಾಮಕ ದೈತ್ಯಸಂಹಾರಕನೇ, ಈ ದೇಹದಲ್ಲಿ ಅಧಿಯಜ್ಞನಾರು ? (ಇದು ಸ್ವರೂಪ ವಿಷಯಕ ಪ್ರಶ್ನವು) 'ಈ ದೇಹದಲ್ಲಿ' ಎಂಬ ಎರಡು ಪದಗಳ ಕಾರ್ಯವು ಪರಿಹಾರ ವಾಕ್ಯದಲ್ಲಿ ಹೇಳಲಾಗುವದು. ನಿನ್ನಲ್ಲಿ ದೃಢಮನಸ್ಸುಳ್ಳವಂಗೆ ಮರಣಕಾಲದಲ್ಲಿ ನಿನ್ನ ಸ್ಮರಣೆಯು ಯಾಕಾಗಬೇಕು ? ಮತ್ತು ಯಾವ ರೂಪದ ಸ್ಮರಣೆ, ಅದು ಯಾವ ಬಗೆಯಿಂದಾಗಬೇಕು ?

೩. ಈ ಮೇರೆಗೆ, ಅರ್ಜುನನು ಕೇಳಿದ ಪ್ರಶ್ನೆಗಳಿಗೆ ಶ್ರೀಕೃಷ್ಣನು ಉತ್ತರ ಹೇಳಿದ್ದು:—

**श्रीभगवानुवाच ।**

**अक्षरं ब्रह्म परमं स्वभावोऽध्यात्ममुच्यते ।**
**भूतभावोद्भवकरो विसर्गः कर्मसंज्ञितः ॥३॥**

**ಅ೦**—ಅರ್ಜುನಾ, ನೀನು ಬ್ರಹ್ಮನಾರೆಂದು ಕೇಳಿದ್ದಕ್ಕೆ, ಉತ್ತಮವು ಪರಮು 'ಅಕ್ಷರ' ಶಬ್ದ ವಾಚ್ಯ ವಸ್ತುವೇ ಬ್ರಹ್ಮವು. ಇಲ್ಲಿ ವಿವೇಕವೇನಂದರೆ, "ಪರಮಾತ್ಮನೇ ಬ್ರಹ್ಮನು ಅಹುದೋ ಅಲ್ಲವೋ" ಎಂದು ಸಂದೇಹ ತಲೆದೋರಲಾಗಿ, ಅದಕ್ಕೆ "ನಾನೇ ಬ್ರಹ್ಮನು, ಎಂದು" ಪರಿಹಾರ ಹೇಳದೆ, **अक्षरं ब्रह्म** ಎಂದು ಹೇಳಿ ಇದೆ, ಏಕೆಂದರೆ, **तस्मादक्षरम्**, **एतमेव सन्तम्** ಎಂಬ ಶ್ರುತಿಗಳಲ್ಲಿ ವಿಷ್ಣುವೇ ಅಕ್ಷರನೆಂದು ಹೇಳಿದ್ದರಿಂದ ವಿಷ್ಣು ಬ್ರಹ್ಮನೆಂದು ಅಥವಾ ನಾನೇ ಬ್ರಹ್ಮನೆಂದು ಸಿದ್ಧವಾಗುವದು. ಬ್ರಹ್ಮನು ಅಕ್ಷರಶಬ್ದವಾಚ್ಯನಾದರೂ, ಅಜ್ಞರಿಗೆ ಕೂಡ ಅವನ ಜ್ಞಾನವಾಗ ಬೇಕೆಂತಲೂ, ಸ್ಕಾಂದಪುರಾಣದಲ್ಲಿ 'ಜಡ—ಪ್ರಕೃತಿಯು ಕೂಡ ಅಕ್ಷರ ಶಬ್ದದಿಂದ ವಾಚ್ಯಳು' ಎಂದು ಹೇಳಿದ್ದರಿಂದ, ಅವಳ ವ್ಯಾವರ್ತನೆಗಾಗಿ ಇಲ್ಲಿ ಅಕ್ಷರ ಶಬ್ದಕ್ಕೆ **परमम्** ಎಂದು ವಿಶೇಷಣ ಹೇಳಲಾಗಿದೆ. **अध्यात्म** ಎಂದರೆ, ಜೀವನ ಸಂಬಂಧವಾಗಿ ಅದಕ್ಕೆ ಉಪಕಾರಿಯಾಗಿರುವ ದೇಹ, ಇಂದ್ರಿಯ, ಅಂತಃಕರಣರೂಪ ಸಮೂಹವು. ಆದುದರಿಂದ ಆ ಸಮೂಹದ ಲಕ್ಷಣವೇ ಸ್ವಭಾವ ವೆನಿಸುವದು, ಅಥವಾ ಅಧ್ಯಾತ್ಮವು ಸಪ್ತಮೀ ವಿಭಕ್ತಿಯಲ್ಲಿ ಇರುವದಾಗಿ ತಿಳಿದು, ಆತ್ಮಾಧಿಕಾರ ವೆಂಬ ಗ್ರಂಥದಲ್ಲಿ ಪ್ರತಿಪಾದಿಸಿದ ವಸ್ತುವು ಯಾವುದೆಂದು ನಿನ್ನ ಪ್ರಶ್ನವಿದ್ದರೆ, ಅದಕ್ಕೆ ಸ್ವಭಾವ ವೆಂದರೆ ಜೀವವೆಂದು ಹೇಳಬಹುದು. ಏಕೆಂದರೆ, ಅದು ಯಾವಾಗಲೂ ಒಂದೇ ವಿಧವಾಗಿರುವದು; ಅಂದರೆ ಅಧ್ಯಾತ್ಮ ಶಬ್ದವಾಚ್ಯ ಆತ್ಮಾಧಿಕಾರ ಗ್ರಂಥದಲ್ಲಿ ಹೇಳಿದ್ದು ಯಾವಾಗಲೂ ಒಂದೇ ವಿಧವಾಗಿ ರುವ ಜೀವವೆಂಬರ್ಥವು. ಇಲ್ಲಿ **स्वभाव** ಎಂದು ಹೇಳದೆ, **स्व** ಎಂದು ಇಷ್ಟೇ ಹೇಳಿದ್ದರೆ, **स्व** ಶಬ್ದದ ಪ್ರಯೋಗವು ತನ್ನಲ್ಲಿರುವದರಿಂದ ಅದರಿಂದ ಅಂತಃಕರಣ ಮುಂತಾದವುಗಳು ಕೂಡ ಕಂಡು ಬರಬಹುದು; ಆದ್ದರಿಂದ **स्वभाव** ಎಂದು ಹೇಳಿದೆ **अन्नमयं सोम्य मन** ಎಂಬ ಶ್ರುತಿಯಲ್ಲಿ ಮನಸು ಮುಂತಾದವುಗಳು ವಿಕಾರಹೊಂದುವದರಿಂದ ಅವುಗಳಿಗೆ ಏಕಪ್ರಕಾರತ್ವವು ಕಂಡಿಲ್ಲ. ಇನ್ನು, **स्वभाव** ಎಂದು ಹೇಳದೆ, **भाव** ಎಂದು ಹೇಳಿದ್ದರೆ, ಪರಮಾತ್ಮನು ಕೂಡ ಯಾವಾಗಲೂ ಒಂದೇ ವಿಧವಾಗಿರುವದರಿಂದ ಎರಡನೇ ಪ್ರಶ್ನಕ್ಕೆ ಉತ್ತರ ಹೇಳಿದಂತಾಗುತ್ತಿದ್ದಿಲ್ಲ, ಆದ್ದರಿಂದ, ಸ್ವಭಾವ ಎಂದು ಹೇಳಿ ಇದೆ; ಅದರಿಂದ ಜೀವವನ್ನೇ ಹೇಳಿದಂತಾಗುವದು, ಹೀಗೆ ಎರಡೂ ಪದಗಳು ಸಾರ್ಥಕ ವಾದವು. ಪರಮಾತ್ಮನಿಂದ ಆಗುವ ವ್ಯಾಪಾರವೆಂದರೆ, ಚೇತನಾಚೇತನ ಪದಾರ್ಥಗಳ ವಿಶೇಷಾ ಕಾರದ ಉತ್ಪತ್ತಿಗೇ ಕರ್ಮವೆನ್ನುವರು.

೪೦. **अधिभूतं क्षरो भावः पुरुषश्चाधिदैवतम् ।**
**अधियज्ञोऽहमेवात्र देहे देहभृतां वर ॥ ४ ॥**

**ಅ೦**—ದೇಹಧರಿಸಿದವರಲ್ಲಿ ಶ್ರೇಷ್ಠನೇ, ನೀನು ಅಧಿಭೂತವೆಂದರೆ ಏನೆಂದು ಕೇಳಿದ್ದಕ್ಕೆ, ದೇಹ ಸಹಿತವಾಗಿರುವ ಜೀವಕ್ಕೆ ಉಪಕಾರಮಾಡುವದಕ್ಕಾಗಿಯೇ ಇರುವ ವಸ್ತು; ಅಂದರೆ ವಿಕಾರಹೊಂದುವ ಕಾರ್ಯವೆಂಬ ಪದಾರ್ಥವು. ಅಧಿದೈವತನಾರೆಂದು ಕೇಳಿದ್ದಕ್ಕೆ ಪುರುಷನೆಂದು ಹೇಳುವೆ, ಅಂದರೆ ಸರ್ವ ದೇವತೆಗಳಿಗೆ ಸ್ವಾಮಿ ಎಂದು ಅಥವಾ ದೇವತಾ ಪ್ರಕರಣದಲ್ಲಿ ಮುಖ್ಯನೆಂದು ಪ್ರತಿಪಾದಿಸಲ್ಪಟ್ಟ

ವಸ್ತುವು ಯಾವುದೆಂದು ಕೇಳಿದರೆ, ಎಲ್ಲ ದೇಹಗಳಲ್ಲಿ ವಾಸಮಾಡಿದ್ದರಿಂದ ಪುರುಷನೇ ಜೀವವು; ಆ ಜೀವವೆಂದರೆ, ಎಲ್ಲ ಜೀವರಾಶಿಗಳಿಗೆ ಅಭಿಮಾನಿಯಾದ ಸಂಕರ್ಷಣನು; ಅಥವಾ ಚತುರ್ಮುಖ ನೆಂದು ತಿಳಿ. ಈ ದೇಹದಲ್ಲಿ ಅಧಿಯಜ್ಞನಾರೆಂದು ಕೇಳಿದ್ದಕ್ಕೆ ನಾನೆಂದು ಹೇಳುವೆ. ಇಲ್ಲಿ ವಿವೇಕ ವೇನಂದರೆ, ಈ ಲೌಕಿಕ ದೇಹದಲ್ಲಿ ಯಜ್ಞನಾಮಕನಾಗಿ (ಜಠರಾಗ್ನಿ) ವಾಸಮಾಡಿದವನು ನಾನೇ. ಇಲ್ಲಿ ಅತ್ರ ಎಂದು ದೇಹಕ್ಕೆ ವಿಶೇಷಣ ಹೇಳಿದ್ದರಿಂದ, ಪರಮಾತ್ಮನ ದೇಹವು ಅದರಲ್ಲಿ ಸೇರುವದಿಲ್ಲ; ಏಕೆಂದರೆ ಪರಮಾತ್ಮನು ಪ್ರಾಣಿಗಳ ದೇಹದಲ್ಲಿ ಭಿನ್ನನಾಗಿದ್ದಂತೆ, ತನ್ನ ದೇಹದಲ್ಲಿ ತನ್ನಿಂದ ಭಿನ್ನ ನಾಗಿರುವದಿಲ್ಲ, ಅಲ್ಲದೆ, ಅಲ್ಲಿ ಅವನಿಗೆ ನಿಯಮನ ಮಾಡತಕ್ಕ ಕಾರ್ಯವೂ ಇಲ್ಲ. ಆದ್ದರಿಂದ ಕರ್ಮಮಾಡಿಸುವ, ಅದಕ್ಕೆ ಭೋಗ ಮತ್ತು ಫಲಕೊಡುವವರ ದೇಹದಲ್ಲಿ ಅವನು ಪ್ರೇರಕನಾಗಿ ಇರುವನೆಂಬ ಅಭಿಪ್ರಾಯವು ಇಲ್ಲಿ ವಿವಕ್ಷಿತವದೆ. ಇಲ್ಲಿ 'ದೇಹದಲ್ಲಿ' ಎಂದು ಹೇಳುವ ಕಾರಣ ವೇನೆಂದು ಕೇಳಿದರೆ, "ಈ ದೇಹದಲ್ಲಿ ಅಧಿಯಜ್ಞನಾರು" ಎಂದು ಕೇಳಿದ್ದಕ್ಕೆ ಪ್ರಶ್ನೆಕ್ಕನುಸರಿಸಿ ಉತ್ತರಹೇಳಿದಂತಾಗುವದು. 'ದೇಹ' ಪದವನ್ನು ಬಿಟ್ಟು, 'ಅಧಿಯಜ್ಞನಾರು' ಎಂದು ಇಷ್ಟೇ ಹೇಳಿದರೆ, ಪರಮಾತ್ಮನಿಂದ ಭಿನ್ನರಾದ ಅಗ್ನ್ಯಾದಿ ದೇವತೆಗಳು ಕೂಡ ಅಧಿಯಜ್ಞರೆನಿಸುವದರಿಂದ ಆ ವಿಷಯವಾಗಿ ಮಾಡಿದ ಪ್ರಶ್ನಕ್ಕೆ ಸಿದ್ಧಾರ್ಥತೆಯು (ಸಿದ್ಧವಾದ ಮಾತಿನ ಬಗ್ಗೆ ಪ್ರಶ್ನ) ದೋಷ ಬರುವದು. ಅದರ ನಿರಸನೆಗಾಗಿ 'ಕರ್ತೃ, ಭೋಕ್ತೃ, ಫಲದಾತೃ, ಇವರ ದೇಹದಲ್ಲಿ ಪ್ರೇರಕ ನಾಗಿರುವ ಅಧಿಯಜ್ಞನಾರೆಂದು' ಅರ್ಥ ಹೊರಡಬೇಕೆಂದು 'ದೇಹ' ಎಂಬ ಪದವು ಅವಶ್ಯವು. ಇದಲ್ಲದೆ, (೭–೩೦) ನೆಯ ಶ್ಲೋಕದಲ್ಲಿ 'ಅಧಿಯಜ್ಞಸಹಿತ' ನೆಂದು ಹೇಳಿದ್ದರಿಂದ ಅಧಿ ಯಜ್ಞನು ಪರಮಾತ್ಮನೋ, ಅವನಿಂದ ಭಿನ್ನರಾದ ಅಗ್ನ್ಯಾದಿಗಳೋ ಎಂದು ಬರುವ ಶಂಕೆಯ ನಿವಾರಣೆಗಾಗಿ ದೇಹದಲ್ಲಿ ಎಂದು ಹೇಳಿ ಇದೆ. ಸರ್ವ ಪ್ರಾಣಿಗಳ ದೇಹದಲ್ಲಿ ಅಧಿಯಜ್ಞ, ಎಂಬ ರೂಪ ವಿಶೇಷಕ್ಕನುಸರಿಸಿ, ಸಹಿತ ಎಂಬ ಅಭಿಪ್ರಾಯದಿಂದ 'ಸಹಿತನಾದ ಅಧಿಯಜ್ಞನು ನಾನು' ಎಂದು ಹೇಳದೆ, 'ದೇಹದಲ್ಲಿ' ಎಂದು ಹೇಳಿದ್ದರಿಂದ 'ಸಹಿತವಾಗಿ' ಎಂಬುವ ಗತಿ ಸೂಚನೆಯಿಂದ ಪರಮಾತ್ಮನಿಂದ ಅನ್ಯನೆಂದು ಬರುವ ಸಂದೇಹವು ನಿರಾಕರಿಸಲ್ಪಟ್ಟರೂ, 'ಸಹಿತವಾಗಿ' ಎಂಬುದ ರಿಂದ ಒದಗಿದ ಭೇದಸಂದೇಹವನ್ನು ಅವಶ್ಯವಾಗಿ ನಿರಾಕರಿಸಬೇಕಾಯಿತು. ಆದ್ದರಿಂದ, ಮೊದಲು ಕೇಳಿದ 'ದೇಹದಲ್ಲಿ ಅಧಿಯಜ್ಞನು ಹೇಗೆ? ಯಾವ ವಿಧದಿಂದ?' ಎಂಬ ಪ್ರಶ್ನಗಳಿಗೆ ಪರಿಹಾರ ಹೇಳದೆ 'ಅಧಿಯಜ್ಞನು ಯಾರು' ಎಂಬ ಪ್ರಶ್ನವು ಪರಿಹರಿಸಲಾಯಿತು. ಇದಲ್ಲದೆ, ಎಲ್ಲ ಯಜ್ಞ ಗಳಿಗೆ ಭೋಕ್ತೃನೆಂತಲೂ, ಪ್ರವರ್ತಕನೆಂತಲೂ, ಪರಮಾತ್ಮನಿಗೆ ಅಧಿಯಜ್ಞತ್ವವು ಪ್ರಾಪ್ತವಾಗಿದೆ. ಇದು ಹಿಂದೆ (೫–೨೯)ನೆಯ ಶ್ಲೋಕದಲ್ಲಿ ಹೇಳಲಾಗಿದೆ. ಅರ್ಜುನನು ಅದನ್ನು ಕೇಳಿದ್ದರಿಂದ ಅವನಿಗೆ ಈ ವಿಷಯ ಸಿದ್ಧವಾಯಿತು. 'ಅಧಿಯಜ್ಞನು ನಾನು ಎಂದು ಯಜ್ಞಕ್ಕೆ ಅಧಿಷ್ಠಾನನಾದ್ದ ರಿಂದ ಅಧಿಯಜ್ಞ ಎನಿಸುವೆನು' ಎಂದು ಉಕ್ತವಾದ್ದರಿಂದ 'ಅವನು ಹೇಗೆ ಅಧಿಯಜ್ಞನು' ಎಂದು ಕೇಳಿದ ಪ್ರಶ್ನಕ್ಕೆ 'ಭೋಕ್ತೃತ್ವಾದಿ ಪ್ರಕಾರದಿಂದ ಅಧಿಯಜ್ಞ' ಎಂಬ ಪರಿಹಾರವು ಪ್ರವಾಹದಿಂದಲೇ ಪ್ರಾಪ್ತವಾದ್ದರಿಂದ ಅದನ್ನಿಲ್ಲಿ ಹೇಳಿಲ್ಲ. ಅಥವಾ ಕಥಮ್ ಎಂದರೆ ಯಾವ ಲಕ್ಷಣದವನು ಎಂಬ ಅರ್ಥವು. ಆದರಿಂದ 'ನಾನೇ ಅಧಿಯಜ್ಞನು' ಎಂಬದರಿಂದ ಅಧಿಯಜ್ಞನಿಂದ ಭಿನ್ನನಾಗದ ಪರ ಮಾತ್ಮನು (೮–೯)ನೇ ಶ್ಲೋಕದಲ್ಲಿ ಹೇಳಿರುವಂತೆ, ಸರ್ವಜ್ಞ ಮುಂತಾದ ಲಕ್ಷಣಗಳುಳ್ಳವನು ಎಂಬ ಅರ್ಥವು ಬಂದುದರಿಂದ ಅದನ್ನಿಲ್ಲಿ ಹೇಳಿಲ್ಲ. ಇನ್ನು, ಹಿಂದಿನ ಮತ್ತು ಈ ಶ್ಲೋಕಗಳ ಅರ್ಥ ವನ್ನು ಒಟ್ಟುಗೂಡಿಸಿ ಹೇಳಿದ್ದು:– ಹೇಗಂದರೆ, ನನ್ನ ವ್ಯಾಪ್ತರೂಪವು ಅಕ್ಷರ ಶಬ್ದವಾಚ್ಯವು. ಅಧ್ಯಾತ್ಮ ವೆಂದರೆ ಸ್ವಭಾವವು, ಅಥವಾ ಜೀವ ಸಮುದಾಯಕ್ಕೆ ಉಪಕಾರಮಾಡುವ ದೇಹೇಂದ್ರಿಯ ಅಂತಃ ಕರಣ ಪದಾರ್ಥವು, ಅಥವಾ ಜೀವ ಸಮುದಾಯವು. ಕರ್ಮವೆಂದರೆ, ಚೇತನಾಚೇತನ ಜಗವನ್ನು

ನಿರ್ಮಿಸುವ ಪರಮಾತ್ಮನ ವ್ಯಾಪಾರವು. ಅಧಿಭೂತವೆಂದರೆ, ದೇಹೇಂದ್ರಿಯಾದಿ ನಾಶಹೊಂದುವ ಪದಾರ್ಥ. ಅಧಿದೈವವೆಂದರೆ, ಸಂಕರ್ಷಣನಾಮಕ ಪರಮಾತ್ಮನು ಅಥವಾ ಜೀವವು. ಇಲ್ಲಿ, ದೇಹದಲ್ಲಿ ವಾಸಮಾಡಿ ಆರಾಧನೆಗೆ ಯೋಗ್ಯವಾದ್ದರಿಂದ ಅಧಿಯಜ್ಞ ಎಂಬ ವಿಶೇಷ ರೂಪವು ನಾನೇ ಎಂದು ಹೇಳಿದ್ದರಿಂದ ಒದಗಿದ ಭೇದ ಸಂದೇಹ ನಿರಸನೆಗಾಗಿ ಏವಕಾರ ಪ್ರಯೋಗ ಉಂಟು; ಅಥವಾ ಸ್ವಭಾವವೆಂದರೆ, ಪರಮಾತ್ಮನ ಸ್ವಭಾವವೇ ಅಧ್ಯಾತ್ಮವು; ಏಕೆಂದರೆ, ಅದು ಎಲ್ಲವನ್ನು ಮಿಕ್ಕಿದೆ. ಅಧಿಭೂತವೆಂದರೆ ಸರ್ವ ಜೀವ ಸಮುದಾಯವು; ಏಕೆಂದರೆ, ಅದು ಎಲ್ಲ ಜಡಗಳಿಗಿಂತ ಹೆಚ್ಚಿನದು. ಅಧಿದೈವವೆಂದರೆ, ರಮಾದೇವಿಯು.

೫. ಇನ್ನು 'ನಿನ್ನನ್ನು ಅಂತಕಾಲದಲ್ಲಿ ಏಕೆ ಸ್ಮರಿಸಬೇಕು' ಎಂದು ಕೇಳಿದ್ದಕ್ಕೆ ಉತ್ತರ:—

**अंतकाले च मामेव स्मरन्मुक्त्वा कलेवरम् ।**
**यः प्रयाति स मद्भावं याति नास्त्यत्र संशयः ॥५॥**

**ಅಂ**—ಮರಣಕಾಲಕ್ಕೆ ನನ್ನನ್ನೇ ಸ್ಮರಿಸುತ್ತ ದೇಹಬಿಡುವವನು ನನ್ನಲ್ಲಿ ದುಃಖವಿಲ್ಲದ ಅತಿಶಯ ಆನಂದಾನುಭವವುಳ್ಳ ಪದವನ್ನು ಹೊಂದುವನು; ಈ ಬಗ್ಗೆ ಯಾವ ಸಂದೇಹವೂ ಇಲ್ಲ. ಇದರಿಂದ, ದುಃಖವಿಲ್ಲದ ಅತಿಶಯ ಆನಂದದ ಪ್ರಕಟನೆಯೆಂಬ ಪರಮಾತ್ಮನನ್ನು ಹೊಂದಲು, ಮರಣಕಾಲಕ್ಕೆ ಅವನನ್ನೇ ಸ್ಮರಿಸಬೇಕೆಂದು ಹೇಳಿದಂತಾಯಿತು.

೬. ಈ ಬಗ್ಗೆ ಸಾಮಾನ್ಯ ವ್ಯಾಪ್ತಿಯನ್ನು ಹೇಳಿದ್ದು.—

**यं यं वापि स्मरन्भावं त्यजत्यंते कलेवरम् ।**
**तं तमेवैति कौंतेय सदा तद्भावभावितः ॥ ६ ॥**

**ಅಂ**—ಅಧಿಕಾರಿಯು ಮರಣಕಾಲಕ್ಕೆ ಯಾವ ಪದಾರ್ಥವನ್ನು ನೆನಿಸುತ್ತ ದೇಹಬಿಡುವನೋ, ಅವುಗಳನ್ನೇ ಅವನು ಹೊಂದುವನು ಇನ್ನು, ಮರಣಕಾಲಕ್ಕೆ ಸ್ಮರಣೆಯಾಗುವದಕ್ಕೆ ಸಾಧನ ಹೇಳಿದ್ದು:— ಯಾವಾಗಲೂ ಪರಮಾತ್ಮನಲ್ಲಿ ಮನವನ್ನು ನೆಲಿಸಿದವನಾಗಿ ಅಂದರೆ, ಅವನ ಧ್ಯಾನದಿಂದ ಹುಟ್ಟಿದ ಜ್ಞಾನದ ಸ್ಮರಣೆಯನ್ನು ಹುಟ್ಟಿಸುವ ಸಂಸ್ಕಾರವುಳ್ಳವನು ಮರಣಕಾಲಕ್ಕೆ ಅವನನ್ನೇ ನೆನಿಸುತ್ತ ದೇಹಬಿಡುವನು. ನಿತ್ಯದಲ್ಲಿ ಪರಮಾತ್ಮನ ಸ್ಮರಣೆಯು ಅಪರೋಕ್ಷಜ್ಞಾನವನ್ನುಂಟುಮಾಡಿ ಭೋಗದಿಂದ ಪ್ರಾರಬ್ಧಕರ್ಮ ಮುಗಿದಬಳಿಕ ಮರಣಕಾಲಕ್ಕೆ ಅಂಥ ಸ್ಮರಣೆಗೆ ಕಾರಣವಾಗುವದು, ಹೊರ್ತು ಸಾಕ್ಷಾತ್ ಅಲ್ಲ. ಇಲ್ಲಿ ವಿವೇಕವೇನಂದರೆ, ಸ್ಮರಣೆಯೂ ದೇಹತ್ಯಾಗವೂ ಒಂದೇ ಕಾಲಕ್ಕೆ ಸಂಭವಿಸುವವೆಂದು ಕಂಡಾಗ್ಯೂ, ದೇಹಬಿಡುವ ಕಾಲಕ್ಕೆ ಮರಣಸಂಕಟವಾಗುವಮೂಲಕ ಸ್ಮರಣೆಯೇ ಆಗುವದಿಲ್ಲೆಂದು ಬರುವ ಮೂಢರ ಸಂದೇಹನಿರಸನೆಗಾಗಿ 'ಅಂತಕಾಲಕ್ಕೆ' ಎಂದು ಹೇಳಿ ಇದೆ. ದೇಹವು ನಿಂದ್ಯವೆಂದು ಯಾವಾಗಲೂ ಬಗೆಯುವ ಜ್ಞಾನಿಗಳಿಗೆ ದೇಹತ್ಯಾಗವು ದುಃಖಕ್ಕೆ ಕಾರಣವಾಗದ್ದರಿಂದ ಪರಮಾತ್ಮನ ಸ್ಮರಣೆಯು ಅಸಂಭವವಲ್ಲೆಂದು ಸೂಚಿತವಾಗುವದು. ಅಲ್ಲದೆ, ಅಜ್ಞಾನಿಗೆ ಕೂಡ ತ್ಯಾಗದಪೂರ್ವದಲ್ಲಿಯೇ ದುಃಖವಾಗುವದುಂಟು, ಹೊರ್ತು ತ್ಯಾಗ ಕಾಲಕ್ಕೆ ಅಲ್ಲ.

೭. ಅಂತಕಾಲಕ್ಕೆ ಮಾಡಿದ ಸ್ಮರಣೆಗೆ ಫಲ ಉಂಟೆಂಬುದರ ಉಪಯೋಗವನ್ನು ಹೇಳಿದ್ದು:—

तस्मात्सर्वेषु कालेषु मामनुस्मर युध्य च ।
मय्यर्पितमनोबुद्धिर्मामेवैष्यस्यसंशयम् ॥ ७ ॥

ಅಂ—ನಿತ್ಯವೂ ಮಾಡಿದ ನನ್ನ ಸ್ಮರಣೆಯು ನನ್ನ ಪ್ರಾಪ್ತಿಗೆ ಕಾರಣವಾಗುವದಲ್ಲದೆ, ಚಿರಕಾಲದವರೆಗೆ ನನ್ನ ಸ್ಮರಣೆಗೂ ಕಾರಣವಾದ್ದರಿಂದ, ಅರ್ಜುನಾ, ನನ್ನಲ್ಲಿ ಮನಸ್ಸು-ಬುದ್ಧಿಗಳನ್ನು ದೃಢಪಡಿಸಿ ತಪ್ಪದೆ ದಿನಾಲು ಸ್ಮರಿಸುತ್ತ ನಿನ್ನ ವರ್ಣಾಶ್ರಮಗಳಿಗೆ ವಿಹಿತವಾದ ಯುದ್ಧ ಕರ್ಮವನ್ನೆಸಗು; ಅದರಿಂದ ನಿನಗೆ ನನ್ನ ಪ್ರಾಪ್ತಿಯಾಗುವದರಲ್ಲಿ ಸಂಶಯಬೇಡ.

೮. ಅಖಂಡವೂ ಪರಮಾತ್ಮನ ಸ್ಮರಣೆಯಿಂದ ಉಂಟಾಗುವ ಜ್ಞಾನದ ಸಂಸ್ಕಾರವೂ ಹೇಗೆ ಆಗುವವೆಂಬುದನ್ನು ನಿರೂಪಿಸಿದ್ದು:—

अभ्यासयोगयुक्तेन चेतसाऽनन्यगामिना ।
परमं पुरुषं दिव्यं याति पार्थानुचिंतयन् ॥ ८ ॥

ಅಂ—ಅನ್ಯ ವಿಷಯಗಳಲ್ಲಿ ಸೇರಗೊಡದೆ ಕೇವಲ ಪರಮಾತ್ಮನಲ್ಲಿಯೇ ನೆಲೆಗೊಳಿಸಿದ ಹಾಗೂ ತಿರುತಿರುಗಿ ಅಭ್ಯಾಸದಿಂದ ದೃಢಪಡಿಸಿದ ಮನಸಿನಿಂದ ಸರ್ವೋತ್ತಮನೂ, ಸೃಷ್ಟ್ಯಾದಿ ಕ್ರೀಡಾ ಗುಣಗಳುಳ್ಳವನೂ, ಸಕಲಪ್ರಾಣಿಗಳ ದೇಹಗಳಲ್ಲಿ ನಿಯಾಮಕನಾಗಿರುವದರಿಂದ ಅಥವಾ ಪೂರ್ಣನಾದುದರಿಂದ ಪುರುಷನೂ, ಆದ ನನ್ನನ್ನು ಚಿಂತಿಸುವವನು ನನ್ನನ್ನೇ ಹೊಂದುವನು.

೯. ಹಿಂದೆ 'ನಿನ್ನನ್ನು ಹೇಗೆ ಸ್ಮರಿಸಬೇಕು' ಎಂದು ಕೇಳಿದ ಪ್ರಶ್ನೆಕ್ಕೆ ಉತ್ತರ ಹೇಳಿದ್ದು:—

कविं पुराणमनुशासितार-
मणोरणीयांसमनुस्मरेद्यः ।
सर्वस्य धातारमचिन्त्यरूप-
मादित्यवर्णं तमसः परस्तात् ॥ ९ ॥

ಅಂ—ಸರ್ವಜ್ಞನು, ಅನಾದಿಯು, ಶಿಕ್ಷಕನು, ಸೂಕ್ಷ್ಮವಸ್ತುಗಳಲ್ಲಿ ಅತಿ ಸೂಕ್ಷ್ಮನು, ಚೇತನಾಚೇತನಾತ್ಮಕ-ಜಗಕ್ಕೆ ಧಾರಣಪೋಷಣಗಳನ್ನು ಕಲ್ಪಿಸುವವನು, ಸಾಕಲ್ಯದಿಂದ ತಿಳಿಯಲು ಮನಸಿಗೆ ನಿಲುಕದವನು, ಸೂರ್ಯನಂತೆ ಪ್ರಕಾಶವುಳ್ಳವನು, ಪ್ರಕೃತಿ ಅಥವಾ ಮೃತ್ಯುವಿಗೆ ಮಿಕ್ಕಿದವನು ನಾನಿರುವೆನೆಂದು ತಿಳಿದು ನನ್ನನ್ನು ಸ್ಮರಿಸು.

೧೦.

प्रयाणकाले मनसाचलेन
भक्त्या युक्तो योगबलेन चैव ।
भ्रुवोर्मध्ये प्राणमावेश्य सम्यक्
स तं परं पुरुषमुपैति दिव्यम् ॥ १० ॥

**ಅಂ**—ಭಕ್ತಿಯುಳ್ಳವನಾಗಿ ಮರಣಕಾಲಕ್ಕೆ ಯೋಗಸಾಮರ್ಥ್ಯದಿಂದ ಹುಬ್ಬುಗಳ ಮಧ್ಯದಲ್ಲಿ ಪ್ರಾಣಗಳನ್ನು ಸೇರಿಸಿ ದೃಢಮನಸಿನಿಂದ ನನ್ನ ಸ್ಮರಿಸುವ ಅಧಿಕಾರಿಯು ಸರ್ವೋತ್ತಮನಾದ ನನ್ನನ್ನು ಹೊಂದುವನು. ಇಲ್ಲಿ ವಿವೇಕವೇನಂದರೆ, ಹಿಂದಿನ ಶ್ಲೋಕದಲ್ಲಿ 'ಸೂರ್ಯನ ಪ್ರಕಾಶವುಳ್ಳವನು' ಎಂದು ಹೇಳಿದ್ದರಿಂದ 'ಪರಮಾತ್ಮನಿಗೆ ದೇಹ ಉಂಟೆಂದು ಹೇಳಿದ ಹಾಗಾಗಿ ಅವನಿಗೆ ಜನ್ಮಾದಿ ಗಳುಂಟೆಂದು ಹೇಳಬೇಕಾಯಿತಲ್ಲವೇ ಎಂದು ಸಂದೇಹಗೊಂಡರೆ, ಅದೇ ಶ್ಲೋಕದಲ್ಲಿ 'ಪ್ರಕೃತಿ ಮೃತ್ಯುಗಳಿಗೆ ಮಿಕ್ಕಿದವ' ಎಂದು ಹೇಳಿದ್ದರಿಂದ ಈ ಸಂದೇಹವು ದೂರಾಗುವದು. ಅಂದರೆ, ಪರಮಾತ್ಮನು ಅಪ್ರಾಕೃತದೇಹವುಳ್ಳವನಾದ್ದರಿಂದ ಅವನಿಗೆ ಜನ್ಮಾದಿ ದೋಷಗಳಿಲ್ಲ. ಯೋಗಬಲ ದಿಂದ ಹುಬ್ಬುಗಳ ನಡುವೆ ಪ್ರಾಣಗಳನ್ನು ಸೇರಿಸುವದು ವಾಯುಜಯಾದಿಗಳನ್ನು ಸಾಧಿಸಿದವರಿ ಗೇನೇ ಸಾಧ್ಯವು, ದೇಹಬಿಡುವ ಎಲ್ಲ ಯೋಗಿಗಳಿಗೆ ಅಲ್ಲ. ವಾಯುಜಯವಿಲ್ಲದವರಿಗೆ ಜ್ಞಾನ, ಭಕ್ತಿ, ವೈರಾಗ್ಯಗಳಿಂದಲೇ ಮೋಕ್ಷವು ಸಿದ್ಧವಾಗುವದು. ವಾಯುಜಯವುಳ್ಳವರಿಗೆ ಅಲ್ಪ ಮುಕ್ತಿಯು ಶೀಘ್ರವೇ ಲಭಿಸುವದೆಂದು ವಿಶೇಷವಾಗಿ ತಿಳಿಯಬೇಕು.

೧೧. ವಾಯುಜಯಾದಿಗಳುಳ್ಳವರು ಮರಣಕಾಲದಲ್ಲಿ ಮಾಡತಕ್ಕ ಧ್ಯೇಯವಸ್ತುವನ್ನು ಸ್ಪಷ್ಟೀಕರಿಸಿದ್ದು; ಅಥವಾ 'ಯಾವ ವಿಧದಿಂದ ನಿನ್ನನ್ನು ಸ್ಮರಿಸಬೇಕು' ಎಂಬ ಪ್ರಶ್ನಕ್ಕೆ ಮೂರು ಶ್ಲೋಕಗಳಿಂದ ಉತ್ತರ ಹೇಳಿದ್ದು —

यदक्षरं वेदविदो वदंति
विशंति यद्यतयो वीतरागाः ।
यदिच्छंतो ब्रह्मचर्यं चरंति
तत्ते पदं संग्रहेण प्रवक्ष्ये ॥ ११ ॥

**ಅಂ**—ವೇದಬಲ್ಲವರು ಯಾವ ಪದವು ಎಂದೂ ನಾಶವಾಗದ್ದೆಂದು ಹೇಳುವರೋ, ಕಾಮಾದಿ ದೋಷಗಳಿಲ್ಲದವರು ಯಾವುದನ್ನು ಹೊಂದಲು ಹೆಣಗುವರೋ, ಪರಮಾತ್ಮನಲ್ಲಿ ಮನಸು ಮುಂತಾ ದವುಗಳನ್ನು ದೃಢಪಡಿಸಿ ಬ್ರಹ್ಮಚರ್ಯವ್ರತವನ್ನಾಚರಿಸುವರೋ, ಆ ಪದದ ಸ್ವರೂಪವನ್ನೂ, ಆ ಪದದ ಸ್ಮರಣೆಯ ಬಗೆಯನ್ನೂ, ಸಂಕ್ಷೇಪವಾಗಿ ಹೇಳುವೆ.

೧೨—೧೩. ಹೀಗೆ, ಹಿಂದಿನ ಶ್ಲೋಕದಲ್ಲಿ ಧ್ಯೇಯವಸ್ತುವಿನ ಸ್ವರೂಪವನ್ನೂ, ಅದರ ಸ್ಮರಣೆಯ ವಿಧವನ್ನೂ, ಹೇಳುವೆನೆಂದು ಪ್ರತಿಜ್ಞೆ ಮಾಡಿ, ಈಗ ಸ್ಮರಣೆಯ ಪ್ರಕಾರವನ್ನು ಹೇಳಿದ್ದು:—

सर्वद्वाराणि संयम्य मनो हृदि निरुध्य च ।
मूर्ध्न्याधायात्मनः प्राणमास्थितो योगधारणाम् ॥१२॥
ओमित्येकाक्षरं ब्रह्म व्याहरन्मामनुस्मरन् ।
यः प्रयाति त्यजन्देहं स याति परमां गतिम् ॥१३॥

**ಅಂ**—ದೇಹದಲ್ಲಿ ವಾಯುಸಂಚರಿಸುವ ಸ್ಥಾನದಲ್ಲಿ ಸುಷುಮ್ನೆಯ ಹೊರ್ತು ಅನ್ಯ ನಾಡಿಗಳನ್ನು ನಿರೋಧಿಸಿ ಜಗವನ್ನು ಸಂಹರಿಸುವದರಿಂದ ಹೃತ್ ಎನಿಸುವ ಶ್ರೀನಾರಾಯಣನಲ್ಲಿ ಮನವನ್ನು

ನೆಲೆಗೊಳಿಸಿ ದೇಹದಲ್ಲಿರುವ ಪ್ರಾಣವಾಯುವನ್ನು ಶಿರಸ್ಸಿನಲ್ಲಿ ಸುಷುಮ್ನಾದ್ವಾರದಿಂದ ಬ್ರಹ್ಮರಂಧ್ರದಲ್ಲಿ ಸ್ಥಾಪಿಸಿ, ಅಖಂಡಸ್ಮೃತಿ ಎಂಬ ಯೋಗಧಾರಣೆಯಲ್ಲಿ ನಿರತನಾಗಿ ಓಂ ಎಂಬ ಒಂದೇ ಅಕ್ಷರದಿಂದ ವಾಚ್ಯನಾದ ಅಂದರೆ ಓಂಕಾರವಾಚ್ಯನಾದ ಪರಬ್ರಹ್ಮನನ್ನು ಓಂ ಎಂದು ಉಚ್ಚರಿಸುತ್ತ ಪರಬ್ರಹ್ಮನಾದ ನನ್ನನ್ನು ಧ್ಯಾನಿಸುತ್ತ ದೇಹವನ್ನು ಬಿಟ್ಟುಹೋಗುವವನು ಉತ್ತಮ ಗತಿಯನ್ನು ಹೊಂದುವನು.

೧೪. 'ಅಂತಕಾಲಕ್ಕೆ ನನ್ನ ಸ್ಮರಣೆಯು ನಿತ್ಯಾಭ್ಯಾಸಿಗಳಿಗೆ ಆಗುವದು, ಹೊರ್ತು ಅನ್ಯರಿಗಲ್ಲ' ಎಂದು ಶ್ರೀಕೃಷ್ಣನು ಸ್ಪಷ್ಟವಾಗಿ ಹೇಳಿದ್ದು:—

अनन्यचेताः सततं यो मां स्मरति नित्यशः ।
तस्याहं सुलभः पार्थ नित्ययुक्तस्य योगिनः ॥१४॥

**ಅಂ**—ಅರ್ಜುನಾ, ನನ್ನ ಹೊರ್ತು ಅನ್ಯ ವಿಷಯಗಳಲ್ಲಿ ಮನವನ್ನು ಸೇರಿಸದೆ, ನನ್ನನ್ನೇ ನಿತ್ಯದಲ್ಲಿ ಸ್ಮರಿಸುವ ಪೂರ್ಣಯೋಗವನ್ನಾಚರಿಸಿದವನಿಗೆ ಮರಣಕಾಲಕ್ಕೆ ಸುಲಭವಾಗಿ ನಾನು ಸ್ಮರಣೆಗೆ ಬರುವೆನು, ಅಥವಾ ಅವನು ಆಯಾಸವಿಲ್ಲದೆ ನನ್ನನ್ನು ಹೊಂದುವನು.

೧೫. ಇನ್ನು, ಹಿಂದೆ ೧೩ನೆಯ ಶ್ಲೋಕದಲ್ಲಿ ಹೇಳಿದ ಉತ್ತಮ ಗತಿ ಯಾವುದೆಂದರೆ ನನ್ನ ಪ್ರಾಪ್ತಿಯೇ. ಅದನ್ನು ಗಳಿಸಲು ಉಪಾಯಸಹಿತನಾಗಿ ಈ ಶ್ಲೋಕದಲ್ಲಿ ವಿವರಣೆ; ಮತ್ತು ಹಿಂದಿನ ಶ್ಲೋಕದಲ್ಲಿ 'ಸುಲಭವಾಗಿ ಪರಮಾತ್ಮನ ಲಾಭ' ಎಂದು ಹೇಳಿದ್ದರಿಂದ ಪರಮಾತ್ಮನ ಪ್ರಾಪ್ತಿಯೇ ಫಲವೆಂದು ಅಭಿಪ್ರಾಯದಿಂದ ಅದನ್ನು ಸ್ತುತಿಸಿದ್ದು:—

मामुपेत्य पुनर्जन्म दुःखालयमशाश्वतम् ।
नाप्नुवंति महात्मानः संसिद्धिं परमां गताः ॥१५॥

**ಅಂ**—ನನ್ನನ್ನು ಹೊಂದಿದ ಬಳಿಕ ಜ್ಞಾನಿಗಳು ದುಃಖಕ್ಕೆ ಆಶ್ರಯವೂ, ಅಶಾಶ್ವತವೂ, ನಾಶವಂತವೂ, ಆದ ದೇಹಸಂಬಂಧವನ್ನು ಮರಳಿ ಹೊಂದುವದಿಲ್ಲ; ಏಕೆಂದರೆ, ಅವರು ಮಹಾಪುರುಷಾರ್ಥವಾದ ಮೋಕ್ಷವನ್ನು ಹೊಂದಿರುವರು.

೧೬. ಬ್ರಹ್ಮಾದಿ ದೇವತೆಗಳನ್ನು ಹೊಂದಿದವರಿಗೂ ಪುನರ್ಜನ್ಮವಿಲ್ಲ; ಅಂದಬಳಿಕ ನಿನ್ನನ್ನು ಹೊಂದುವದರಲ್ಲಿ ವಿಶೇಷವೇನೆಂದು ಅರ್ಜುನನು ಕೇಳಿದ್ದಕ್ಕೆ ಉತ್ತರ:—

आब्रह्मभुवनाल्लोकाः पुनरावर्तिनोऽर्जुन ।
मामुपेत्य तु कौंतेय पुनर्जन्म न विद्यते ॥१६॥

**ಅಂ**—ಮೇರುಪರ್ವತದಲ್ಲಿರುವ ಚತುರ್ಮುಖನ ಸತ್ಯಲೋಕ ಮೊದಲ್ಗೊಂಡು ಕೆಳಗಿನ ಲೋಕಗಳಲ್ಲಿರುವ ಜನರು ತಿರುತಿರುಗಿ ಭವಮಾಲೆಯಲ್ಲಿ ಸಿಕ್ಕು ಜನ್ಮಹೊಂದುವರು. ಇನ್ನು, **आमेरुब्रह्मसदनादाजनाञ्च जनिर्भुवि** ಎಂಬ ಸ್ಮೃತಿವಚನಕ್ಕೂ, ಮೇಲ್ಕಾಣಿಸಿದ ಸತ್ಯಲೋಕದ ಕೆಳಗಣ ಲೋಕಗಳಲ್ಲಿಯು ಜನರಿಗೆ ಪುನರ್ಜನ್ಮ ಉಂಟೆಂದು ಹೇಳಿದ್ದಕ್ಕೂ ಅನುಸರಿಸಿ, ಸತ್ಯಲೋಕದ ಮೇಲಿರುವ ಲೋಕಗಳಲ್ಲಿರುವವರಿಗೆ ಪುನರ್ಜನ್ಮವಿಲ್ಲೆಂದು ಸಿದ್ಧವಾಗುವದು; ಅಂದಬಳಿಕ,

' ನಿನ್ನನ್ನು ಹೊಂದಿದವರಿಗೆ ಪುನರ್ಜನ್ಮವಿಲ್ಲೆಂದು ' ಹೇಳುವದೇಕೆಂದು ಕೇಳಿದರೆ, ಅಹುದು, ಮೇರುಪರ್ವತದಲ್ಲಿರುವ ಸತ್ಯಲೋಕಕ್ಕಿಂತ ಮತ್ತು ಜನಸ್ತಪೋಲೋಕಗಳಿಗಿಂತ ಮೇಲಿರುವ ಲೋಕದವರಿಗೆ ಜನ್ಮವಿಲ್ಲ. ಆದಾಗ್ಯೂ, ಆ ಲೋಕಗಳಲ್ಲಿಯ ಇರುವಿಕೆಯೇ ಪುನರ್ಜನ್ಮಬಾರದ್ದಕ್ಕೆ ಕಾರಣವಲ್ಲ; ಆದರೆ, ನನ್ನನ್ನು ಹೊಂದಿಕೊಂಡು ಇರುವವರಿಗೆ ಹುಟ್ಟು–ಸಾವುಗಳ ತಿರುಗುಪ್ಪು ಇಲ್ಲೆಂದು ತಿಳಿ. ಆದ್ದರಿಂದ ಹಿಂದೆ ಹೇಳಿದ್ದು ಯೋಗ್ಯವೇ ಸೈ. ಈ ವಿಷಯದಲ್ಲಿ ' ವಸುದೇವನ ಮಗ ನಾದ ಶ್ರೀಕೃಷ್ಣನ ಪ್ರಾಪ್ತಿಯಾದ ಬಳಿಕ ಜನ್ಮವಿಲ್ಲ ' ಎಂದು ಸ್ಮೃತಿವಚನವಿದೆ. ಇನ್ನು ಹಿಂದಿನ ಎರಡು ಸ್ಮೃತಿಗಳಿಂದ ' ಜನೋಲೋಕಗಳ ಮೇಲಿರುವ ಲೋಕಗಳಲ್ಲಿಯ ಜನರಿಗೆ ಕೂಡ ಪುನರ್ಜನ್ಮ ವಿಲ್ಲೆಂದೂ ಸತ್ಯಲೋಕದ ಕೆಳಗಿನ ಲೋಕಗಳಲ್ಲಿಯ ಜನರಿಗೆ ಪುನರಾವೃತ್ತಿ ಉಂಟು ' ಎಂದೂ ಹೇಳಿದ್ದರಿಂದ ಜನಸ್ತಪೋಲೋಕಗಳಲ್ಲಿಯವರಿಗೆ ಹೀಗೆ ಪುನರ್ಜನ್ಮವಿಲ್ಲೆಂದೂ, ಉಂಟೆಂದೂ, ಹೇಳಿದ್ದಕ್ಕೆ ವಿರೋಧಬರಲಿಲ್ಲೇ ಎಂದು ಆಕ್ಷೇಪಿಸಿದರೆ, **ब्रह्मभवन** ಎಂಬ ಪದದಿಂದ ಮೂರು ಲೋಕದಲ್ಲಿರುವ ಸತ್ಯಲೋಕವೆಂದು ಸ್ವೀಕರಿಸಿದ್ದರಿಂದ ಮೇಲ್ಕಂಡ ವಿರೋಧವು ದೂರಾಗುವದು, ಅಲ್ಲದೆ, ಒಂದು ವೇಳೆ, ಸತ್ಯಲೋಕವೆಂದು ತಿಳಿದರೂ, ಅದರ ಕೆಳಗಿನ ತಪೋಲೋಕಗಳಲ್ಲಿಯವರಿಗೆ ಅಂಶದಿಂದ ಪುನರ್ಜನ್ಮ ಉಂಟು. ಹಾಗಾದರೆ **आजनात्** ಎಂಬ ಸ್ಮೃತಿವಚನಕ್ಕೆ ವಿರೋಧಬರಲಿಲ್ಲೇ ಎಂದು ಮರುಮಾತೆತ್ತಿದರೆ, ಅಲ್ಲಿ ಪುನರ್ಜನ್ಮವಿಲ್ಲೆಂದು ಹೇಳಿದ್ದು, ಸಾಕಲ್ಯದಿಂದ ಜನ್ಮವಿಲ್ಲೆಂದು ಎಣಿಸಬೇಕು. ಇದಲ್ಲದೆ, ಜನಾದಿ ಲೋಕದವರಿಗೆ ಅಂಶದಿಂದ ಭೂಮಿಯಲ್ಲಿ ಲಯದ ಮೊದಲು–ಕೊನೆಯಲ್ಲಿಯೂ ಸಾಕಲ್ಯದಿಂದ ಹುಟ್ಟು–ಸಾವುಗಳುಂಟು. ಈ ಶ್ಲೋಕದಲ್ಲಿ ಪುನರ್ಜನ್ಮವಿಲ್ಲೆಂದು ಹೇಳಿದ್ದು ಜನನಮರಣಗಳಿಂದ ಬಿಡುಗಡೆಯಾದ ಮುಕ್ತರ ವಿಷಯವಾಗಿದೆ. ಏಕೆಂದರೆ, ಅವರಿಗೆ ಭೂಮಿಯಲ್ಲಿ ಅಂಶತಃ ಕೂಡ ಹುಟ್ಟು–ಸಾವುಗಳಿಲ್ಲ. ಇದರಿಂದ ಸಿದ್ಧವಾಗುವದೇನಂದರೆ, ಜನನ ಮರಣಗಳು ಸರ್ವಥಾ ಇಲ್ಲೆಂಬುದೂ ಮುಕ್ತರ ವಿಷಯವು; ಜನನ ಉಂಟೆಂದು ಹೇಳಿದ್ದು ಅನ್ಯರ ವಿಷಯವು ಎಂದು ತಿಳಿಯಬೇಕು.

೧೭. ' ನನ್ನ ಪ್ರಾಪ್ತಿಯೇ ಇಲ್ಲಿ ಮರು–ಹುಟ್ಟಿಗೆ ಕಾರಣ ' ಎಂದು ದೃಢಪಡಿಸಲು ಸೃಷ್ಟಿಲಯಾದಿಗಳಿಗೂ ತಾನೇ ಕರ್ತನೆಂದು ಹೇಳಲು ಮೊದಲುಮಾಡಿದ್ದು:—

**सहस्रयुगपर्यंतमहर्यद्ब्रह्मणो विदुः ।**
**रात्रिं युगसहस्रां तां तेऽहोरात्रविदो जनाः ॥ १७ ॥**

**ಅಂ**—ಇಲ್ಲಿ **सहस्र** ಶಬ್ದವು ಬಹುಸಂಖ್ಯಾಪರವಾಗಿದೆ. ಪರಮಾತ್ಮನ ಹಗಲು ಬಹು ಯುಗ ಗಳವರೆಗೆ (ದ್ವಿಪರಾರ್ಧಾತ್ಮಕ) ಅಂದರೆ ಎರಡು ಪರಾರ್ಧ ಕಾಲವೆಂತಲೂ, ಅವನ ರಾತ್ರಿಯು ಬಹುಯುಗಗಳವರೆಗೆ ಎರಡು ಪರಾರ್ಧಕಾಲವೆಂತಲೂ, ಹೇಳುವರು ಹಗಲಿರುಳುಗಳ ತಿರು ಳನ್ನು ಬಲ್ಲವರು. ಪರಮಾತ್ಮನು ನಿರ್ವಿಕಾರ, ನಿತ್ಯ, ಹಾಗೂ ಕಾಲಮರ್ಯಾದೆಯನ್ನು ಮಿಕ್ಕಿ ದ್ದರೂ, ಸೃಷ್ಟ್ಯಾದಿಗಳ ವ್ಯಾಪಾರ–ನಿರ್ವ್ಯಾಪಾರಗಳೆಂಬ ಅವಸ್ಥೆಗಳಮೂಲಕ ಅವನಿಗೆ ಉಪಚಾರ ದಿಂದ ಹಗಲಿರುಳುಗಳ ಕಾಲ ಹೇಳಲಾಗಿದೆ, ಎಂದು ಭಾವಿಸಬೇಕು.

೧೮.

**अव्यक्ताद्व्यक्तयः सर्वाः प्रभवंत्यहरागमे ।**
**रात्र्यागमे प्रलीयंते तत्रैवाव्यक्तसंज्ञके ॥ १८ ॥**

ಅಂ—ಪರಬ್ರಹ್ಮನ ಹಗಲು ಅಂದರೆ, ಮಹಾಪ್ರಳಯದ ಕೊನೆಗೆ ಅವನ ಅನುಗ್ರಹವಿಲ್ಲದೆ ಅನ್ಯರಿಗೆ ಕಾಣಿಸದ ಪರಮಾತ್ಮನಿಂದ ಗುಣವೈಷಮ್ಯಾದಿ ಕಾರ್ಯಪದಾರ್ಥಗಳು ಮೈದೋರುವವು; ಮತ್ತು ಅವನ ಇರುಳೆಂದರೆ, ಮಹಾಪ್ರಲಯದ ಮೊದಲಿಗೆ ಆ ಸೃಷ್ಟಪದಾರ್ಥಗಳೆಲ್ಲ ಅವನಲ್ಲಿಯೇ ಲಯಹೊಂದುವವು, ಅಂದರೆ, ಅನ್ಯ ಮತಗಳು ಪ್ರತಿಪಾದಿಸಿರುವಂತೆ, ಅವನ ಸ್ವರೂಪದಲ್ಲಿ ಲಯ ಹೊಂದದೆ, ಅವನ ಉದರದಲ್ಲಿ ಭಿನ್ನವಾಗಿ ವಾಸಮಾಡಿರುವವೆಂಬ ಅರ್ಥವು.

೧೯.

भूतग्रामः स एवायं भूत्वा भूत्वा प्रलीयते ।
रात्र्यागमेऽवशः पार्थ प्रभवत्यहरागमे ॥ १९ ॥

ಅಂ—ಪರಮಾತ್ಮನ ಮಹಾ ಮಹಿಮೆಯನ್ನು ಪ್ರಸಿದ್ಧಗೊಳಿಸಲು ಸೃಷ್ಟಿಪ್ರಲಯಗಳ ಪ್ರವಾಹವು ಹರಿಗಡಿಯದಂತೆ ಸಂಭವಿಸುವವು. ಹಿಂದೆ 'ಜನ್ಮಲಯಗಳುಳ್ಳವುಗಳೆಂದು' ಹೇಳಿದ ಈ ಚರಾಚರಾತ್ಮಕ ಸಮೂಹವು ಪರಬ್ರಹ್ಮನ ಪ್ರತಿ ಹಗಲು (ದಿನ) ಆಗಲು ಮರಳಿ ಜನ್ಮಕ್ಕೆ ಬಂದು, ರಾತ್ರಿಯಾಗಲು ಲಯಹೊಂದುವವು. ಪಾರ್ಥ, ಆದ್ದರಿಂದ ಪರಾಧೀನವಾದ ಪ್ರಪಂಚವು ಹಗಲಾದ ಮೇಲೆ ಮೈದೋರಿಕೊಳ್ಳುವದು.

೨೦. ಹಗಲಿರುಳುಗಳು ಪರಮಾತ್ಮನಿಗೆ ಉಂಟೆಂದು ಹೇಳಿದ್ದರಿಂದ, ಅವನಿಗೂ ಜಗದಂತೆ ಜನ್ಮಲಯಗಳು ಪ್ರಾಪ್ತವಾದವಲ್ಲ ಎಂದು ಸಂದೇಹಗೊಂಡರೆ, ಹಾಗಲ್ಲವೆಂದು ಮುಂದಿನ ಎರಡು ಶ್ಲೋಕಗಳಿಂದ ಒಡೆದು ಹೇಳಿದ್ದು :—

परस्तस्मात्तु भावोऽन्यो-
ऽव्यक्तो व्यक्तात्सनातनः ।
यः स सर्वेषु भूतेषु
नश्यत्सु न विनश्यति ॥ २० ॥

ಅಂ—ಜನ್ಮಲಯಗಳುಳ್ಳ ಭೂತಸಮೂಹದಿಂದ ಅವ್ಯಕ್ತನಾದ ಪರಮಾತ್ಮನು ವಿಲಕ್ಷಣನು, ಸ್ವತಂತ್ರನು, ಸನಾತನನು, ಅನಾದಿಯು, ಇರುವದರಿಂದ, ಸಕಲ ಭೂತಗಳು ನಾಶಹೊಂದಿದರೂ, ಅವನಿಗೆ ನಾಶವಿಲ್ಲ.

೨೧.

अव्यक्तोऽक्षर इत्युक्तस्तमाहुः परमां गतिम् ।
यं प्राप्य न निवर्तंते तद्धाम परमं मम ॥ २१ ॥

ಅಂ— तस्माद्‌क्षरम् ಎಂಬ ಶ್ರುತಿಯಲ್ಲಿ ಪರಮಾತ್ಮನಿಗೆ ಯಾವ ವಿಧದ ನಾಶವೂ ಇಲ್ಲದ್ದರಿಂದ ಅವನು ಅಕ್ಷರಶಬ್ದವಾಚ್ಯನೆಂದು ಹೇಳಲಾಗಿದೆ. ಆದ್ದರಿಂದ, ಪರಮಾತ್ಮನು ಮುಖ್ಯ ಪ್ರಾಪ್ಯ ಎಂದು ಹೇಳುವದು. ಇವನನ್ನು ಹೊಂದಿದ ಬಳಿಕ, ಅನ್ಯ ಪ್ರಾಪ್ತಿಯ ಆಶೆಯೇ ಇಲ್ಲ. ಏಕೆಂದರೆ, ಅವನನ್ನು ಹೊಂದಿದ ಬಳಿಕ ಹುಟ್ಟುಸಾವುಗಳಿಗೆ ಸೆಲೆಯಾದ ಸಂಸಾರವೆಂಬುದಿಲ್ಲ. ಅವನ ಸ್ವರೂಪವೆಂಬುದು ಇದೇ.

೨೨. ಹಿಂದೆ ೧೦ನೆಯ ಶ್ಲೋಕದಲ್ಲಿ ಭಕ್ತಿಯು ಅನ್ಯ ಸಾಧನಗಳ ಸಹ ಪರಮಾತ್ಮ ಪ್ರಾಪ್ತಿಗೆ ಸಾಧನವೆಂದು ಹೇಳಿ ಇದೆ. ಇದರಿಂದ, ಭಕ್ತಿ ಮತ್ತು ಬೇರೆ ಸಾಧನಗಳು ಸರಿಯಾದವಲ್ಲ ಎಂದು ವಾದಿಸಿದರೆ, ಭಕ್ತಿಯೇ ಎಲ್ಲಕ್ಕೂ ಮೇಲಾದದ್ದೆಂದು ಹೇಳಿದ್ದು :—

पुरुषं स परः पार्थ भक्त्या लभ्यस्त्वनन्यया ।
यस्यांतःस्थानि भूतानि येन सर्वमिदं ततम् ॥ २२ ॥

ಅಂ—ಸಕಲ ಪ್ರಾಣಿಗಳು ಯಾವನಲ್ಲಿ ಆಶ್ರಯಹೊಂದುವವೋ, ಮತ್ತು ಯಾವನಿಂದ ಈ ಜಗವು ವ್ಯಾಪಿಸಲ್ಪಟ್ಟಿರುವದೋ ಆ ಪರಮಪುರುಷನಾದ ಪರಮಾತ್ಮನು ಎಲ್ಲಕ್ಕೂ ಶ್ರೇಷ್ಠಸಾಧನ ವಾದ ಭಕ್ತಿಯಿಂದಲೇ ಲಭ್ಯನು. ಇಲ್ಲಿ ವಿವೇಕವೇನಂದರೆ, "ಅನ್ಯ ಅಸಾಧಾರಣವಾದ ಭಕ್ತಿ" ಎಂದು ಹೇಳಿದ್ದರಿಂದ ಭಕ್ತಿಯೇ ಮೇಲಾದ ಸಾಧನವೆಂದು ಸಿದ್ಧವಾಯಿತು. ಅದರಂತೆಯೇ, (೩-೩-೬೪) ನೆಯ ಸೂತ್ರದಲ್ಲಿ ಭಕ್ತಿಗೆ ಶ್ರೇಷ್ಠತ್ವವು ಹೇಳಲಾಗಿದೆ.

೨೩. ಪರಮಾತ್ಮನನ್ನು ಹೊಂದಿದವರಿಗೆ ಜನನಮರಣಗಳುಳ್ಳ ಸಂಸಾರವಿಲ್ಲೆಂದೂ, ಅನ್ಯ ದೇವತೆಗಳನ್ನು ಹೊಂದಿದವರಿಗೆ ಅಂಥ ಸಂಸಾರ ಉಂಟೆಂದೂ ಹೇಳಲಾಯಿತು; ಆದರೆ, ದೇವತೆಗಳು ಅಧಿಷ್ಠಿತವಾದ ಯಾವ ದಾರಿಗಳಿಂದ ನಡೆದರೆ, ಅಪುನರಾವೃತ್ತಿ-ಪುನರಾವೃತ್ತಿಗಳುಂಟೋ ಆ ದೇವತೆಗಳನ್ನು ಮೂರು ಶ್ಲೋಕಗಳಿಂದ ಹೇಳಿದ್ದು :—

यत्र काले त्वनावृत्तिमावृत्तिं चैव योगिनः ।
प्रयाता यांति तं कालं वक्ष्यामि भरतर्षभ ॥ २३ ॥

ಅಂ—ಭರತಕುಲಶ್ರೇಷ್ಠನೇ, ಕಾಲಕ್ಕೆ ಅಭಿಮಾನಿಯಾದ ದೇವತೆಗಳಿಂದ ಅದಕ್ಕೆ ಅಭಿಮಾನಿ ಯಾಗದ ಅನ್ಯ ದೇವತೆಗಳಿಂದ ಅಧಿಷ್ಠಿತವಾದ ಮಾರ್ಗದಿಂದ ಹೋಗುವವರಿಗೆ ಅನುಕ್ರಮವಾಗಿ ಅನಾ ವೃತ್ತಿ-ಆವೃತ್ತಿಗಳುಂಟೋ ಅಂಥ ಕಾಲಾಭಿಮಾನಿ ದೇವತೆಗಳನ್ನೂ, ಅನ್ಯ ದೇವತೆಗಳನ್ನೂ, ಹೇಳುವೆನು.

೨೪. ಇನ್ನು, ಅಧಿಷ್ಠಿತವಾದ ಕಾಲಾಭಿಮಾನಿ ದೇವತೆಗಳನ್ನು ಹೇಳಿದ್ದು :—

अग्निर्ज्योतिरहः शुक्लः षण्मासा उत्तरायणम् ।
तत्र प्रयाता गच्छंति ब्रह्म ब्रह्मविदो जनाः ॥ २४ ॥

ಅಂ—ಅಗ್ನಿಅರ್ಚಿಗಳೆಂಬ ದೇವತೆಗಳು ಅಭಿಜಿತ್ ದೇವತೆಯ ಸಹಿತ ಅಹರಭಿಮಾನಿ ದೇವ ತೆಯು, ಹುಣ್ಣಿವೆಗೆ ಅಭಿಮಾನಿಯಾದ ದೇವತೆಯ ಸಹಿತ ಶುಕ್ಲಪಕ್ಷಕ್ಕೆ ಅಭಿಮಾನಿಯು, ವಿಷ್ಣ್ವಭಿ ಮಾನಿ ಸಹಿತ ಷಣ್ಮಾಸಾಭಿಮಾನಿ, ಉತ್ತರಾಯಣಾಭಿಮಾನಿ ದೇವತೆಗಳು ಹೀಗೆ ಕ್ರಮದಿಂದ ಅಧಿಷ್ಠಿತ ವಾದ ದಾರಿಯಿಂದ ಹೋದ ಬ್ರಹ್ಮಜ್ಞಾನಿಗಳು ಪರಬ್ರಹ್ಮನನ್ನು ಹೊಂದುವರು.

೨೫.

धूमोरात्रिस्तथा कृष्णः षण्मासा दक्षिणायनम् ।
तत्र चांद्रमसं ज्योतिर्योगी प्राप्य निवर्तते ॥ २५ ॥

ಅಂ—ಧೂಮ, ರಾತ್ರಿ, ಕೃಷ್ಣಪಕ್ಷ, ಷಣ್ಮಾಸ, ದಕ್ಷಿಣಾಯ[redacted] ಅಭಿಮಾನಿಗಳಾದ ದೇವತೆಗಳು ಅಧಿಷ್ಠಿತವಾದ ಮಾರ್ಗದಿಂದ ಹೋದ ಕರ್ಮಯೋಗಿಗಳು ಚಂದ್ರ ಮುಂತಾದ ಜ್ಯೋತಿಯುಳ್ಳವರಿಗೆ ಬೀಡಾದ ಸ್ವರ್ಗಲೋಕವನ್ನು ಹೊಂದಿ, ಅಲ್ಲಿ ಪುಣ್ಯಫಲವಾದ ಸುಖವನ್ನನುಭವಿಸಿ, ಬಳಿಕ ಭೂಲೋಕಕ್ಕೆ ಹುಟ್ಟಿ ಬರುವರು. ಇಲ್ಲಿ ವಿವೇಕವೇನಂದರೆ, ಹಿಂದಿನ ಶ್ಲೋಕದಲ್ಲಿ ಬ್ರಹ್ಮಜ್ಞಾನಿಗಳೆಂದೂ, ಇಲ್ಲಿ ಕರ್ಮಯೋಗಿಗಳೆಂದೂ, ಹೇಳಿದ್ದರಿಂದ, ಈ ಎರಡು ವಿಧದ ಮಾರ್ಗಗಳು ಕ್ರಮದಿಂದ ಜ್ಞಾನ-ಕರ್ಮಗಳಿಂದ ಸಾಧ್ಯವೆಂದು ಹೇಳಿದಂತಾಯಿತು. ಅಲ್ಲದೆ, ಇವೆರಡು ಮಾರ್ಗಗಳ ಸ್ಮರಣೆಯು ಅಂತಕಾಲದಲ್ಲಿ ಪರಮಾತ್ಮನ ಸ್ಮರಣೆಯುಳ್ಳವರಿಗೆ ಆಗುವದೆಂದು ತಿಳಿಯಬೇಕು. ಈ ವಿಷಯಕ್ಕೆ (೪-೨-೨೦) ನೇ ಸೂತ್ರದಲ್ಲಿ ಹೇಳಿ ಇದೆ.

೨೬. ಹಿಂದಿನ ಶ್ಲೋಕದಲ್ಲಿ ಹೇಳಿದ ಎರಡು ಬಗೆಯ ದಾರಿಗಳ ನಿರೂಪಣೆಯನ್ನು ಮುಗಿಸಿದ್ದು —

**शुक्लकृष्णे गती ह्येते जगतः शाश्वते मते ।**
**एकया यात्यनावृत्तिमन्ययाऽऽवर्तते पुनः ॥ २६ ॥**

ಅಂ—ಉತ್ತರಾಯಣ-ದಕ್ಷಿಣಾಯನ ಮಾರ್ಗಗಳು ಜ್ಞಾನ-ಕರ್ಮಯೋಗಿಗಳ ಸಂಬಂಧವಾಗಿದ್ದು, ಶಾಶ್ವತವಾಗಿವೆ. ಮೊದಲನೆಯ ಮಾರ್ಗದಿಂದ ಹೋದವರಿಗೆ ಜನನಮರಣರೂಪ ಸಂಸಾರವಿಲ್ಲ. ಅನ್ಯ ಮಾರ್ಗದಿಂದ ಹೋದವನಿಗೆ ಮಾತ್ರ ಅಂಥ ಸಂಸಾರ ಉಂಟೆಂದು ತಿಳಿಯಬೇಕು.

೨೭. ಮೇಲ್ಕಾಣಿಸಿದ ಎರಡು ವಿಧ ಮಾರ್ಗಜ್ಞರಿಗೆ ಆಗುವ ಫಲ ಹೇಳಿದ್ದು :—

**नैते सृती पार्थ जानन्योगी मुह्यति कश्चन ।**
**तस्मात्सर्वेषु कालेषु योगयुक्तो भवार्जुन ॥ २७ ॥**

ಅಂ—ಅರ್ಜುನಾ, ಅವೆರಡೂ ಮಾರ್ಗಗಳನ್ನರಿತ ಯೋಗಿಯು ಅವುಗಳಿಗೆ ಸಾಧನಗಳಾದ ಜ್ಞಾನ ಮತ್ತು ಕರ್ಮಾನುಷ್ಠಾನವನ್ನಾಚರಿಸುವನು. ಅಥವಾ ಪರಮಾತ್ಮನ ಅಪರೋಕ್ಷಜ್ಞಾನವುಳ್ಳವನಿಗೆ ಭಗವಂತನ ವಿಸ್ಮರಣೆ ಎಂಬ ಮೋಹ ಉಂಟಾಗುವದಿಲ್ಲ. ಆದ್ದರಿಂದ, ಯೋಗವು ಪುರುಷಾರ್ಥಕ್ಕೆ ಕಾರಣವಾದ್ದರಿಂದ, ಆತನ ಜ್ಞಾನಭಕ್ತಿ ಸಹಿತ ನಿನ್ನ ವರ್ಣಾಶ್ರಮಕ್ಕೆ ವಿಹಿತವಾದ ನಿಷ್ಕಾಮ ಕರ್ಮಾನುಷ್ಠಾನವನ್ನಾಚರಿಸು.

೨೮. ಪ್ರಕೃತ ಅಧ್ಯಾಯದ ಅರ್ಥವನ್ನು ಫಲ ಹೇಳಿ ಮುಗಿಸಿದ್ದು :—

**वेदेषु यज्ञेषु तपःसु चैव**
**दानेषु यत्पुण्यफलं प्रदिष्टम् ।**
**अत्येति तत्सर्वमिदं विदित्वा**
**योगी परं स्थानमुपैति चाद्यम् ॥ २८ ॥**

ಅಂ—ಪರಮಾತ್ಮನ ಅಧ್ಯಾತ್ಮಸ್ವರೂಪವನ್ನೂ, ಸೃಷ್ಟ್ಯಾದಿ ಕರ್ಮಗಳಿಗೆ ಶ್ರೇಷ್ಠನೆಂದು ಶುಕ್ಲಕೃಷ್ಣ ಮಾರ್ಗಗಳನ್ನೂ, ತಿಳಿದವನು ವೇದಾಧ್ಯಯನ, ಯಜ್ಞ, ಕೃಚ್ಛ್ರ, ಚಾಂದ್ರಾಯಣಾದಿ ತಪಸ್ಸು,

ಸತ್ಪಾತ್ರದಾನ, ಮುಂತಾದ ಕರ್ಮಗಳಿಗೆ ಹೇಳಿದ ಫಲಕ್ಕಿಂತ ಹೆಚ್ಚಿನ ಫಲವನ್ನು ಹೊಂದುವನು. ಆ ಫಲವು ಎಂಥದೆಂದು ಕೇಳಿದರೆ, ಜ್ಞಾನೋಪಾಯವುಳ್ಳವನು ಶ್ರೀವಿಷ್ಣುವಿನ ಸ್ಥಾನವನ್ನು ಹೊಂದುವನು. ಅಥವಾ **मार्गौ ब्रह्म च यः पश्येत्** ಎಂಬ ವಚನದಂತೆ ಈ **ಶ್ಲೋ**ಕದಲ್ಲಿಯ **इदम्** ಶಬ್ದವು **मार्ग, ब्रह्म** ಇವುಗಳಿಗಷ್ಟೇ ಪರಾಮರ್ಶಕವಾಗಿದೆ; ಮತ್ತು **विदित्वा** ಎಂದರೆ, ಸಾಕ್ಷಾತ್ಕರಿಸಿ ಎಂಬರ್ಥವು.

**इति श्रीमद्भगवद्गीतासूपनिषत्सु ब्रह्मविद्यायां योगशास्त्रे श्रीकृष्णार्जुन-**
**संवादेऽक्षरब्रह्मयोगो नामाष्टमोऽध्यायः ॥ ८ ॥**

**ಅಂ**—ಈ ಮೇರೆಗೆ, ಷಡ್ಗುಣೈಶ್ವರ್ಯ ಸಂಪನ್ನನಾದ ಪರಮಾತ್ಮನಿಂದ ಮನೋಹರ,
ಆಲಂಕಾರಿಕ ಮತ್ತು ಇಷ್ಟ ಶಬ್ದಗಳಿಂದ ಉಪದೇಶಿಸಲ್ಪಟ್ಟದ್ದೂ ಉಪನಿಷತ್ತಿಗೆ ಸಮಾ
ನವೂ ಪರಬ್ರಹ್ಮ ವಿಷಯಕ ವಿದ್ಯೆಯೂ ಎನಿಸುವ ಮತ್ತು ಕರ್ಮಯೋಗ
ಗಳನ್ನು ಪ್ರತಿಪಾದಿಸುವ, ಶ್ರೀ ಕೃಷ್ಣನಿಗೂ ಅರ್ಜುನನಿಗೂ ನಡೆದ
ಸಂವಾದರೂಪವಾದ **ಗೀತಾಶಾಸ್ತ್ರದಲ್ಲಿಯ ಅಕ್ಷರ**
**ಬ್ರಹ್ಮಯೋಗ ಎಂಬ ಎಂಟನೆಯ**
ಅಧ್ಯಾಯವು ಮುಗಿಯಿತು.



# ೯ನೆಯ ಅಧ್ಯಾಯವು



೧. ಏಳನೆಯ ಅಧ್ಯಾಯದ ೩೦ನೆಯ ಶ್ಲೋಕದಲ್ಲಿ "ಪರಮಾತ್ಮನು ಸಕಲ ಭೂತಗಳಿಗೂ, ದೇವತೆಗಳಿಗೂ, ಯಜ್ಞಗಳಿಗೂ, ಒಡೆಯನೆಂದು ಬಗೆಯುವವರು" ಎಂಬುದರಿಂದ ಹೇಳಿದ ಪರಮಾತ್ಮನ ವರ್ಣನೆಯು ಪ್ರಕೃತ ಅಧ್ಯಾಯದಲ್ಲಿ ವರ್ಣಿಸಲಾಗುವದು. ಹಾಗಾದರೆ, ಈ ಅಧ್ಯಾಯ ಮುಗಿದ ಬಳಿಕ ೮ನೆಯ ಅಧ್ಯಾಯವನ್ನು ಏಕೆ ಹೇಳಲಿಲ್ಲವೆಂದು ಆಕ್ಷೇಪಿಸ ಕೂಡದು; ಏಕೆಂದರೆ, ಅಧ್ಯಾತ್ಮ ಮುಂತಾದ ಪದಗಳನ್ನು ನಿರೂಪಿಸಿ ಪರಿಹಾರ ಹೇಳಿದ ಬಳಿಕ ಭೂತಾದಿಗಳಿಗೆ ಶ್ರೇಷ್ಠನೆಂದು ಪ್ರತಿಪಾದಿಸುವ ವಾಕ್ಯಕ್ಕೆ ವಿಷಯನಾದ ಪರಮಾತ್ಮನ ಮಹಿಮೆಯ ವರ್ಣನೆಗೆ ಅವಸರವಾದ್ದರಿಂದ, ೮ನೆಯ ಅಧ್ಯಾಯವು ಮೊದಲು ಬಂದದ್ದು ಯೋಗ್ಯವೇ ಸರಿ. ಪರಮಾತ್ಮನು ಹೇಳುವ ತನ್ನ ವಿಲಕ್ಷಣ ಮಹಿಮೆಯಲ್ಲಿ ಆದರ ಉಂಟಾಗಬೇಕೆಂದು ತಾನು ಹೇಳುವ ಮಹಿಮೆಯನ್ನು ಸ್ತುತಿಸಿದ್ದು —

**श्रीभगवानुवाच ।**

**इदं तु ते गुह्यतमं प्रवक्ष्याम्यनसूयवे ।**
**ज्ञानं विज्ञानसहितं यज्ज्ञात्वा मोक्ष्यसेऽशुभात् ॥ १ ॥**

**ಅಂ**—ಅರ್ಜುನಾ, ನಾನು ಹೇಳುವ ಬಹುಗುಟ್ಟಿನ ಜ್ಞಾನವನ್ನು ಮತ್ಸರ ಮುಂತಾದ ದೋಷಗಳಿಲ್ಲದ ನಿನ್ನನ್ನು ಕುರಿತು ಹೇಳುವೆ; ಅದನ್ನು ತಿಳಿದರೆ ನೀನು ಮೋಕ್ಷ ಹೊಂದುವಿ. ಇಲ್ಲಿ, ಅಸೂಯಾದಿ ದೋಷಗಳಿಲ್ಲದವನೆಂದು ಹೇಳಿದ್ದು ಅರ್ಜುನನು ಅಂತಹ ಜ್ಞಾನ ಸಂಪಾದಿಸಲು ಯೋಗ್ಯ ಅಧಿಕಾರಿ ಎಂದು ಸೂಚಿತವಾಗುವದು.

೨. ತಾನು ಹೇಳುವ ಜ್ಞಾನವನ್ನು ಮತ್ತೆ ಸ್ತುತಿಸಿದ್ದು:—

**राजविद्या राजगुह्यं पवित्रमिदमुत्तमम् ।**
**प्रत्यक्षावगमं धर्म्यं सुसुखं कर्तुमव्ययम् ॥ २ ॥**

**ಅಂ**—ನಾನು ಹೇಳುವ ವಿದ್ಯೆಯು ರಾಜವಿದ್ಯೆ. ಅಂದರೆ, ಅರಸು-ವಿದ್ಯೆಗಳಲ್ಲಿ, ಗುಟ್ಟಿನ ವಿಷಯಗಳಲ್ಲಿ ಬಹುಗುಟ್ಟಿನದು. ಪಾವಿತ್ರ್ಯಕ್ಕೆ ಕಾರಣವಾದ್ದರಿಂದ ಉತ್ತಮವಾದದ್ದು. ಸಕಲ ಇಂದ್ರಿಯಗಳಿಗೆ ಪ್ರೇರಕನಾದ ಪರಮಾತ್ಮನ ಪರೋಕ್ಷಜ್ಞಾನಕ್ಕೆ ಸಾಧಕವು. ಎಲ್ಲಕ್ಕೂ ಮೂಲಾಧಾರನಾದ್ದರಿಂದ ಆತನಿಗೇ ಸಂಬಂಧಿಸಿದ್ದು; ಅಂದರೆ, ಸರ್ವಾಧಾರಕ ಪರಮಾತ್ಮನ ಪರೋಕ್ಷಜ್ಞಾನವು, ಮೋಕ್ಷಫಲವನ್ನೀಯಲು ಸಮರ್ಥವದು. ಬಹು ಸರಾಗವಾಗಿ ಕೈಗೆ ಬರುವಂಥದು. ಇಂಥ ಜ್ಞಾನವನ್ನು ನಾನು ಹೇಳುವೆ ನಿನಗೀಗ.

೩. ಹಾಗಾದರೆ, ನೀನು ಹೇಳುವ ಪರಮಾತ್ಮನ ಅಪರೋಕ್ಷಜ್ಞಾನಕ್ಕೆ ಸಾಧನವಾದ ಜ್ಞಾನವು ಸುಲಭವೂ, ಅಂಥ ಮಹತ್ಫಲವನ್ನು ಕೊಡಲು ಸಮರ್ಥವೂ, ಆಗಿದ್ದರೆ, ಯಾವ ಪ್ರಾಣಿಯು ಸಂಸಾ

ರಡ ಕಟ್ಟಿಗೆ ಸಿಲುಕುವನು ? ಅಥವಾ ಅಂಥ ಜ್ಞಾನವನ್ನು ಸಂಪಾದಿಸಿದವನಿಗೆ ಅನಿಷ್ಟವೇನು ? ಎಂದು ಅರ್ಜುನನು ಕೇಳಿದ ಪ್ರಶ್ನಕ್ಕೆ ಉತ್ತರ:—

अश्रद्दधानाः पुरुषा धर्मस्यास्य परंतप ।
अप्राप्य मां निवर्तंते मृत्युसंसारवर्त्मनि ॥ ३ ॥

ಅಂ—ಶತ್ರುಸಂತಾಪಕನೇ, ಸರ್ವಾಧಾರಕ ಪರಮಾತ್ಮನ ಪರೋಕ್ಷಜ್ಞಾನವು ಮಹಾಪುರುಷಾರ್ಥವಾದ ಮೋಕ್ಷಕ್ಕೆ ಕಾರಣವೆಂದು ತಿಳಿಯದೆ, ಅದರಲ್ಲಿ ಶ್ರದ್ಧೆಯನ್ನಿಡದ ಪುರುಷರು ನನ್ನನ್ನು ಸಂಪಾದಿಸದೆ, ಮೃತ್ಯು ಎಂಬ ಸಂಸಾರದ ಸೆಳವಿಗೆ ಬಲಿಯಾಗುವರು.

೪. ಇನ್ನು, ಇದಂ ಪದದಿಂದ ಜ್ಞಾನವು ಪರಮಾತ್ಮನ ಪರೋಕ್ಷಜ್ಞಾನಕ್ಕೆ ಸಾಧನವೆಂದು ಹೇಳಲಾಯಿತು. ಅದನ್ನು ಹೇಳುವೆನೆಂದು ಶ್ರೀಕೃಷ್ಣನು ಪ್ರಾರಂಭದಲ್ಲಿ ಪ್ರತಿಜ್ಞೆ ಮಾಡಿದನು. ಯಾವುದನ್ನು ತಿಳಿದರೆ' ಎಂದು ಅದನ್ನು ಬಾಯಿತುಂಬ ಹೊಗಳಿದನು. 'ಯಾವುದನ್ನು ತಿಳಿಯದಿದ್ದರೆ' ಹೀಗೆಂದು ನಿಂದಿಸಿದನು. ಆ ಜ್ಞಾನ–ವಿಜ್ಞಾನಗಳ ಮಧ್ಯದಲ್ಲಿ 'ಜ್ಞಾನ' ಶಬ್ದದಿಂದ ತಿಳಿಯತಕ್ಕದ್ದನ್ನು ಮೊದಲು ಹೇಳಿದ್ದು :—

मया ततमिदं सर्वं जगदव्यक्तमूर्तिना ।
मत्स्थानि सर्वभूतानि न चाहं तेष्ववास्थितः ॥ ४ ॥

ಅಂ—ಚೇತನಾಚೇತನಾತ್ಮಕ ಈ ಜಗವೆಲ್ಲವೂ ನನ್ನಿಂದ ತುಂಬಿಕೊಂಡಿದೆ. ಹಾಗಾದರೆ, ಇಲ್ಲಿ ಏಕೆ ಕಣ್ಣಿಗೆ ತೋರುವದಿಲ್ಲ ಎಂದು ಕೇಳಿದರೆ, ಅವ್ಯಕ್ತನಾದ್ದರಿಂದ ಕಣ್ಣೊಳಿಸುವದಿಲ್ಲ. ಹಾಗಾದರೆ, ಪರಮಾತ್ಮನು ಈ ಜಗವನ್ನೆಲ್ಲ ವ್ಯಾಪಿಸಿರುವನೆಂದು ಹೇಳುವದರಿಂದ ಘಟಾದಿ ಪದಾರ್ಥಗಳಿಂದ ಜಗತ್ತಿಗೆ ಆಧಾರ–ಆಧೇಯ ಸಂಬಂಧವಿದ್ದಂತೆ, ಪರಮಾತ್ಮನಿಗೂ ಅಂಥ ಸಂಬಂಧವು ಒದಗುವದೇ ಎಂದು ಸಂದೇಹ ಬಂದರೆ, ಸಕಲ ಚೇತನಾಚೇತನಾತ್ಮಕ ಸಮೂಹವು ನನ್ನ ಆಧಾರದಿಂದಲೇ ಇರುವದು; ಹೊರ್ತು ಆ ಸಮೂಹದ ಆಧಾರವು ನನಗೆ ಬೇಕಾಗಿಲ್ಲ. ಅಥವಾ ಅದರ ಆಧಾರವನ್ನಾಶ್ರಯಿಸಿ ನಾನೆಂದೂ ಇರುವದಿಲ್ಲ

೫. ಹಾಗಾದರೆ, ಸಕಲ ಪ್ರಾಣಿಗಳು ಪರಮಾತ್ಮನ ಆಧಾರದಿಂದಲೇ ಬಾಳುವರೆಂದು ಬಗೆದರೆ, "ಭೂಭಾಗದಲ್ಲಿ ನಾನಿರುವೆ, ಭೂಮಿಯ ಸೀತೋಷ್ಣಗಳಿಂದ ನಾನು ಅಂಥ ಧರ್ಮವುಳ್ಳವನು" ಎಂಬ ಜ್ಞಾನದಂತೆ, ಪ್ರಾಣಿಗಳೆಲ್ಲ ಪರಮಾತ್ಮನಲ್ಲಿಯೇ ಮನೆಮಾಡಿರುವವೆಂಬುದರ ಜ್ಞಾನವಾಗುವದು. ಅದರಿಂದ, ಭೂಮಿಯ ಸೀತೋಷ್ಣಗಳ ಸಂಬಂಧವುಳ್ಳ ಭೂಮಿ ಮತ್ತು ಜೀವಗಳಲ್ಲಿ ಆಯಾ ಧರ್ಮಗಳ ಅನ್ಯೋನ್ಯ ಅದಲುಬದಲುಗಳಾಗುವಂತೆ, ಜೀವಕ್ಕೆ ಪರಮಾತ್ಮನ ಸಂಬಂಧದಿಂದ ಅವರೀರ್ವರಲ್ಲಿ ಕೂಡ ಅವರವರ ಧರ್ಮಗಳ ಸಂಕ್ರಾಂತಿಯಾಗುವದೇ ಎಂದು ಕೇಳಿದ್ದಕ್ಕೆ ಸಮಾಧಾನ ಹೇಳಿದ್ದು —

न च मत्स्थानि भूतानि पश्य मे योगमैश्वरम् ।
भूतभृन्न च भूतस्थो ममात्मा भूतभावनः ॥ ५ ॥

ಅಂ—ಜೀವರಾಶಿಗಳು ತ್ವಗಿಂದ್ರಿಯದ ಸ್ಪರ್ಶದಿಂದ ಪರಮಾತ್ಮನನ್ನು ತಿಳಿದು ಅವನ ಆಶ್ರಯದಿಂದ ಇರುವದಿಲ್ಲ. ಆದುದರಿಂದ, ಅವರವರ ಧರ್ಮಗಳಿಗೆ ಸಂಕ್ರಾಂತಿ ಇಲ್ಲ. ಏಕೆಂದರೆ, **ಪರ**

ಮಾತ್ಮನು ಪ್ರಾಕೃತ ಸ್ಪರ್ಶರಹಿತನು. ಈ ವಿಷಯವಾಗಿ ಕಾರಕ (೩–೧೫) ನೇ ಮಂತ್ರದಲ್ಲಿ ಹೇಳಿ ಇದೆ. ಅದರಂತೆ ಮೋಕ್ಷಧರ್ಮದಲ್ಲಿ ಕೂಡ 'ಪರಮಾತ್ಮನು ಕಣ್ಣಿಗೂ, ಸ್ಪರ್ಶಕ್ಕೂ, ವಿಷಯನಲ್ಲೆಂದು' ಹೇಳಿ ಇದೆ. ಹಾಗಾದರೆ, ಪರಮಾತ್ಮನು ಎಲ್ಲಕ್ಕೂ ಆಧಾರನಾದ್ದರಿಂದ ಅವನಿಗೆ ಅನ್ಯರ ಆಧಾರವಿಲ್ಲೆಂದು ಹೇಳುವದೇಕೆಂದು ಕೇಳಿದರೆ, ಈಶ್ವರಸಂಬಂಧಿಯಾದ ನನ್ನ ಸಾಮರ್ಥ್ಯವನ್ನು ನೋಡು. ಅನ್ಯರ ಆಧಾರವಿಲ್ಲದೆ ಇರಲು ನನಗೆ ಸಾಮರ್ಥ್ಯ ಉಂಟು. ಇನ್ನು, ಹಿಂದಿನ ಶ್ಲೋಕದಲ್ಲಿ **अव्यक्तमूर्तिना** ಅಂದರೆ ಪರಮಾತ್ಮನು ದೇಹವುಳ್ಳವನೆಂದು ಹೇಳಿದ್ದರಿಂದ, ನಮ್ಮ ದೇಹವು ನಮ್ಮಿಂದ ಭಿನ್ನವಾದಂತೆ, ಅವನ ದೇಹವು ಕೂಡ ಅವನಿಂದ ಭಿನ್ನವಲ್ಲವೇ ಎಂದು ಕೇಳಿದರೆ, ಹಾಗಲ್ಲ; ಅದಕ್ಕೆ ಕೂಡ ಸಕಲ ಭೂತಗಳಿಗೆ ಆಧಾರವಾಗುವ ಸಾಮರ್ಥ್ಯ ಉಂಟು. ಏಕೆಂದರೆ ನಾನು ಸಕಲ ಭೂತಗಳ ಒಳಹೊರಗಿರುವೆನು, ಹೊರ್ತು ಅವುಗಳ ಆಧಾರದಿಂದ ನಾನಿಲ್ಲ. ನಾನು ಪ್ರಾಣಿಮಾತ್ರರ ಉತ್ಪತ್ತಿಗೆ ಕಾರಣನು. ನನ್ನಂತೆ ನನ್ನ ದೇಹವು ಸಹ ಎಲ್ಲವನ್ನು ವ್ಯಾಪಿಸಿದೆ, ಹೊರ್ತು ಅವುಗಳ ಮೇಲೆ ಕೈಯೂರಿಕೊಂಡಿಲ್ಲ. ಇಲ್ಲಿ ವಿವೇಕವೇನಂದರೆ, 'ನನ್ನ ದೇಹ' ಎಂದು ಹೇಳದೆ, 'ನನ್ನ ಆತ್ಮ' ಎಂದು ಹೇಳಿದ್ದರಿಂದ ಅಚೇತನ ದೇಹವು ಪರಮಾತ್ಮನ ಲಕ್ಷಣವಾಗಬಹುದೇ? ಎಂಬುವ ಸಂದೇಹಕ್ಕೆ ಅಲ್ಲಿಯೇ ಉತ್ತರ ದೊರೆತಂತಾಗಿದೆ. ಇದಲ್ಲದೆ, 'ಆತ್ಮ' ಪದವು ದೇಹ ಮತ್ತು ಚೇತನ ಹೀಗೆ ಎರಡೂ ಅರ್ಥಪರವಾದ್ದರಿಂದ 'ದೇಹ' ಪದದಿಂದ ಅದು ಚೇತನವೆಂದು ಬೇರೆ ಹೇಳುವದು ಅವಶ್ಯವಿದ್ದಂತೆ, 'ಆತ್ಮ' ಪದದಿಂದ ಹಾಗೆ ಹೇಳುವ ಅವಶ್ಯ ಉಳಿಯಲಿಲ್ಲ.

೬. ಪರಮಾತ್ಮನೇ ಎಲ್ಲಕ್ಕೂ ಆಧಾರ; ಅವನ ಮತ್ತು ಪದಾರ್ಥಗಳ ಸಂಬಂಧದಿಂದ ಅವರವರ ಪರಸ್ಪರ ಧರ್ಮಗಳ ಸಂಕ್ರಾಂತಿಯು ಅಸಂಭವವೆಂಬುದನ್ನು ದೃಷ್ಟಾಂತಪೂರ್ವಕವಾಗಿ ಹೇಳಿದ್ದು :—

**यथाकाशस्थितो नित्यं वायुः सर्वत्रगो महान् ।**
**तथा सर्वाणि भूतानि मत्स्थानीत्युपधारय ॥ ६ ॥**

ಅಂ—ಆಕಾಶವು ನಿತ್ಯವಾದುದರಿಂದ ಅದರ ವ್ಯಾಪ್ತಿಯು ಎಲ್ಲ ಕಡೆಯಲ್ಲಿಯೂ ಉಂಟು; ಅದಿಲ್ಲದ ಸ್ಥಳವೇ ಇಲ್ಲ. ಆದ್ದರಿಂದ ಅದನ್ನಾಶ್ರಯಿಸಿ ವಾಯುವು ಇದ್ದರೂ, ಅದು ಕೂಡ ಸಕಲ ಪದಾರ್ಥಗಳಲ್ಲಿ ಸಂಚರಿಸುವ ಮೂಲಕ ಅದಕ್ಕೆ ಅವುಗಳ ಸಂಬಂಧ ಉಂಟು. ಆದರೂ, ಅವುಗಳು ವಾಯುವಿನಲ್ಲಿದ್ದ ಧರ್ಮಗಳನ್ನು ಹೊಂದುವದಿಲ್ಲ; ಹಾಗಾದರೆ, ವಾಯುಸ್ಪರ್ಶದಿಂದ ಶೀತಲಾದಿಗಳ ಅನುಭವವು ಲೋಕದಲ್ಲಿ ಕಂಡಿಲ್ಲೇ ಎಂದು ಕೇಳಿದರೆ, ಶೀತ, ಸುಗಂಧ, ಮುಂತಾದ ಧರ್ಮಗಳು, ವಾಯುವಿನಲ್ಲಿರದೆ, ಅದಕ್ಕೆ ಸಂಬಂಧಿಸಿದ ನೀರು ಮುಂತಾದವುಗಳ ಅವಯವಗಳಲ್ಲಿರುವವು. ಅದೇ ಮೇರಗೆ, ಸಕಲ ಪ್ರಾಣಿಗಳಿಗೆ ನನ್ನ ಆಧಾರವಿರುವದರಿಂದ ಪರಸ್ಪರ ಸಂಬಂಧವಾದರೂ, ಪರಸ್ಪರ ಧರ್ಮಕ್ರಾಂತಿ ಇಲ್ಲವೆಂದು ತಿಳಿಯಬೇಕು

೭. ಹೀಗೆ ಪರಮಾತ್ಮನ ವಿಷಯಕ್ಕೆ ತಿಳಿದುಕೊಳ್ಳುವ ಅವನ ವ್ಯಾಪ್ತಿ, ಸರ್ವಾಧಾರತ್ವಗಳನ್ನು ಹಿಂದಿನ ಎರಡು ಶ್ಲೋಕಗಳಿಂದ ವಿಸ್ತರಿಸಿ, ಈಗ ಪ್ರತಿಜ್ಞೆ ಮಾಡಿದ ಜ್ಞಾನವು ಎಂಥದೆಂದು ಹೇಳುವದಕ್ಕಾಗಿ ಪ್ರಲಯಾದಿಗಳಿಗೆ ಅವನೇ ಕಾರಣನೆಂದು ನಿರೂಪಿಸಿದ್ದು :—

**सर्वभूतानि कौंतेय प्रकृतिं यांति मामिकाम् ।**
**कल्पक्षये पुनस्तानि कल्पादौ विसृजाम्यहम् ॥ ७ ॥**

ಅಂ—ಕುಂತಿಯಕಂದಾ, ಪ್ರಳಯಕಾಲದಲ್ಲಿ ಚೇತನಾಚೇತನ ಸಮೂಹವು ನನಗೆ ಆಧೀನವಾದ ತ್ರಿಗುಣಾತ್ಮಕ ಪ್ರಕೃತಿಯಲ್ಲಿ ಲೀನವಾಗುವದು. ಅದು ಮುಗಿದ ಮೇಲೆ ಜಗದಾರಂಭಕ್ಕೆ ನಾನು ಅವುಗಳನ್ನು ತಿರಿಗಿ ಹುಟ್ಟಿಸುವೆ.

೮. ಸೃಷ್ಟಿಯ ಪ್ರಾರಂಭಕ್ಕೆ ಪ್ರಕೃತಿಯ ಉಲ್ಲೇಖ ಮಾಡದ್ದರಿಂದ ಸಾಧನವಿಲ್ಲದೆ ಪರಮಾತ್ಮನು ಜಗವನ್ನು ನಿರ್ಮಿಸುವನೆಂದು ಬರುವ ಸಂದೇಹಕ್ಕೆ ಉತ್ತರ :—

प्रकृतिं स्वामवष्टभ्य विसृजामि पुनः पुनः ।
भूतग्राममिमं कृत्स्नमवशं प्रकृतेर्वशात् ॥ ८ ॥

ಅಂ—ಪರಮಾತ್ಮನು ತನಗೆ ಸ್ವಾಧೀನವಿರುವ ಉಪಾದಾನಕಾರಣಳಾದ ತ್ರಿಗುಣಾತ್ಮಕ-ಪ್ರಕೃತಿಯನ್ನು ಆಶ್ರಯಿಸಿ ಸೃಷ್ಟಿಮಾಡುವನೆಂದು ತಿಳಿಯಬೇಕು. ಜಗವು ಪ್ರಕೃತಿಗೆ ಆಧೀನವಾದ್ದರಿಂದ ಅದು ಅವಳಿಗೆ ಆಧೀನವೆಂದು ಹೇಳಿ ಇದೆ, ಆದರೆ, ಅವಳು ಕೂಡ ಪರಮಾತ್ಮನಿಗೆ ಅಧೀನಳಾದ್ದರಿಂದ ಆಕೆಗೆ ಸ್ವತಂತ್ರ ಆಧಾರವಿಲ್ಲೆಂಬುದು ಸ್ಪಷ್ಟವಾಯಿತು. ಅಥವಾ ಈ ಚೇತನಾಚೇತನಾತ್ಮಕ ಜಗವನ್ನು ನನಗೆ ಆಧೀನಳಾದ ಪ್ರಕೃತಿಯನ್ನು ಉಪಾದಾನಕಾರಣಳನ್ನಾಗಿಯೂ, ನಾನು ನಿಮಿತ್ತಕಾರಣನಾಗಿಯೂ, ತಿರುತಿರುಗಿ ಹುಟ್ಟಿಸುವೆ. ಪ್ರಕೃತಿಯ ಆಧಾರವಿಲ್ಲದೆ ನಾನು ಸೃಷ್ಟಿ ಮಾಡಲು ಅಸಮರ್ಥನೇನೂ ಅಲ್ಲ; ಆದರೆ, ಲೀಲೆಯಿಂದಲೇ ಸೃಷ್ಟಿ ಮುಂತಾದವುಗಳನ್ನು ಮಾಡುವೆ. ಪ್ರಕೃತಿಯ ಆಧಾರವು ಕೂಡ ನನಗೆ ಆಧೀನವೆಂದು ತೋರಿಸುವದಕ್ಕಾಗಿ ಇಲ್ಲಿ स्वाम् ಎಂಬ ವಿಶೇಷಣದಿಂದ ಸ್ಪಷ್ಟಗೊಳಿಸಿದೆ. ಈ ವಿಷಯವಾಗಿ (೨-೧-೧೯) ನೆಯ ಸೂತ್ರವು ಪ್ರಮಾಣ.

೯. ಕೃಷ್ಣಾ, ನೀನು ವಿವಿಧ ಸೃಷ್ಟಿಮಾಡುವದರಿಂದ ನಿನಗೆ ಜೀವದಂತೆ ಕರ್ಮಬಂಧನವಿಲ್ಲವೇ ? ಎಂದು ಕೇಳಿದ್ದಕ್ಕೆ ಉತ್ತರ :—

न च मां तानि कर्माणि निबध्नंति धनंजय ।
उदासीनवदासीनमसक्तं तेषु कर्मसु ॥ ९ ॥

ಅಂ—ಧನಂಜಯಾ, ನಾನು ಮಾಡುವ ಸೃಷ್ಟ್ಯಾದಿ ಕರ್ಮಗಳು ನನ್ನನ್ನು ಬಂಧಿಸುವದಿಲ್ಲ. ಏಕೆಂದರೆ, ನಾನು ಅವುಗಳ ವಿಷಯದಲ್ಲಿ ಉದಾಸೀನನಂತೆ ಕುಳಿತಿರುವೆ. ಆದರೆ, ನಾನು ಮಾಡುವ ಸೃಷ್ಟಿಯು ಮಾಟಗಾರನಂತೆ ಅಲ್ಲ. ಅಂದಬಳಿಕ, ಉದಾಸೀನನಾಗಿ ಕುಳ್ಳಿರುವ ಬಗೆ ಹೇಗೆಂದು ಕೇಳಿದರೆ, ಈ ಸಂದೇಹವು ಇಲ್ಲಿ 'ಉದಾಸೀನನಾಗಿ' ಎಂದು ಹೇಳದೆ, 'ಉದಾಸೀನನಂತೆ' ಎಂದು ಹೇಳಿದ್ದರಿಂದ ದೂರವಾಗುವದು. ಅದರಿಂದ, ಉದಾಸೀನನಾಗದಿದ್ದರೂ, ಉದಾಸೀನನಂತೆ ಇರುವನೆಂಬರ್ಥ ಧ್ವನಿತವಾಗುವದು. ಉದಾಸೀನನ ಸಾದೃಶ್ಯವು ಹೇಗೆ ಒಪ್ಪುವದೆಂದು ಕೇಳಿದರೆ, ಉದಾಸೀನನು ಮಾಡುವ ಕರ್ಮಗಳಲ್ಲಿ ಅವನ ಆಸಕ್ತಿ ಇಲ್ಲದಂತೆ ನಾನು ಮಾಡುವ ಸೃಷ್ಟ್ಯಾದಿ ಕರ್ಮಗಳಲ್ಲಿ ಕೂಡ ಆಸಕ್ತಿ-ಆಯಾಸಗಳು ಇಲ್ಲ. ಅಂತೆಯೇ, ಆ ಕರ್ಮಗಳು ನನ್ನನ್ನು ಕಟ್ಟಲಾರವು.

೧೦. ಇನ್ನು, ಹಿಂದೆ ೮ನೆಯ ಶ್ಲೋಕದಲ್ಲಿ ಉಪಾದಾನಕಾರಣಳಾದ ಪ್ರಕೃತಿಯನ್ನಾಶ್ರಯಿಸಿ, ಸೃಷ್ಟಿಮಾಡುವಿ ಎಂದು ಹೇಳಿದ್ದರಿಂದಲೂ, ಹಿಂದಿನ ಶ್ಲೋಕದಲ್ಲಿ ನೀನು ಉದಾಸೀನನಂತೆ ಇರುವಿ ಎಂದು ಹೇಳಿದ್ದರಿಂದಲೂ, ನೀನು ಕ್ರಿಯಾರಹಿತನೆಂದು ತೋರುವದು, ಅದರಿಂದ ಪ್ರಕೃತಿಯೇ

ಸ್ವಾತಂತ್ರ್ಯದಿಂದ ಜಗವನ್ನು ಹುಟ್ಟಿಸುವಳು. ನೀನು ಅವಳ ಸನ್ನಿಧಾನವುಳ್ಳವನಾದ್ದರಿಂದ ನಿನಗೆ ಕರ್ತನೆಂಬ ಮಾತು ಉಪಚಾರಕ್ಕಾಗಿ ಅಲ್ಲವೇ ಎಂದು ಕೇಳಿದ್ದಕ್ಕೆ ಉತ್ತರ —

**मयाऽध्यक्षेण प्रकृतिः सूयते सचराचरम् ।**
**हेतुनानेन कौंतेय जगद्विपरिवर्तते ॥ १० ॥**

**ಅಂ**—ಕುಂತಿಪುತ್ರಾ, ನನ್ನಿಂದ ಪ್ರೇರಿತಳಾದ ಪ್ರಕೃತಿಯು ಈ ಚರಾಚರಾತ್ಮಕ ಜಗವನ್ನು ಹುಟ್ಟಿಸುವಳು. ಸೃಷ್ಟಿಕಾರ್ಯದಲ್ಲಿ ಅವಳು ಸ್ವತಂತ್ರ ಕರ್ತಳಾಗದೆ, ಉಪಾದಾನಕಾರಣಳು ಮಾತ್ರ, ಮತ್ತು ನಾನು ನಿಮಿತ್ತಕಾರಣನು. ಅವಳಿಗೆ ಸೃಷ್ಟಿಕಾರ್ಯದಲ್ಲಿ ಸಾಮರ್ಥ್ಯವಿರದ್ದರಿಂದ, ನನ್ನ ನೆರವು ಅವಳಿಗುಂಟು. ಆದರೆ, ನನಗೆ ಆ ಕಾರ್ಯದಲ್ಲಿ ಅನ್ಯರ ಸಹಾಯು ಬೇಡ. ಹೀಗೆ, ನನ್ನಿಂದ ಪ್ರೇರಿತಳಾದ ಪ್ರಕೃತಿಯಿಂದ ಜಗತ್ತು ತಿರಿಗಿ ತಿರಿಗಿ ಸೃಷ್ಟಿಗೆ ಬರುವದು. ಇಲ್ಲಿ ವಿವೇಕವೇನಂದರೆ, ನಾನು ಉಪಚಾರದಿಂದ ಸರ್ವ ಕರ್ತನೆಂದು ಬರುವ ಸಂದೇಹವು ಹಿಂದಿನ (೭, ೮, ೯) ನೆಯ ಶ್ಲೋಕಗಳಿಂದ ಪರಿಹರಿಸಲ್ಪಟ್ಟಿದ್ದರೂ, ಆ ಪರಿಹಾರವನ್ನು ಬಚ್ಚಿಟ್ಟು, ಮತ್ತೆ ಆ ಬಗ್ಗೆ ಸಂದೇಹಪಟ್ಟು ಪ್ರಕೃತ ಶ್ಲೋಕದಿಂದ ಅದನ್ನು ನಿರಾಕರಿಸಿದ್ದು.

೧೧. ಕೃಷ್ಣಾ, ನೀನು ಜಗದ ಸೃಷ್ಟಿ, ಸ್ಥಿತಿ, ಸಂಹಾರಗಳಿಗೆ ಕಾರಣನೆಂದು ಹೇಳಿದರೆ, ಕೆಲವರು ನಿನ್ನನ್ನು ಬೀಳುಗಳೆಯಲು ಕಾರಣವೇನು? ಅವರು ಹೀಗೆ ಅವಮಾನ ಮಾಡಿದಾಗ್ಯೂ, ಅವರಿಗೇನೂ ಅನರ್ಥ ತಟ್ಟದ್ದರಿಂದ ಹಿಂದೆ ನೀನೇ ಕರ್ತನೆಂದು ಹೇಳಿದ್ದಕ್ಕೆ ವಿರೋಧ ಬರಲಿಲ್ಲವೇ? ಎಂದು ಆಕ್ಷೇಪಿಸಿದ್ದಕ್ಕೆ ಸಮಾಧಾನ :—

**अवजानंति मां मूढा मानुषीं तनुमाश्रितम् ।**
**परं भावमजानंतो मम भूतमहेश्वरम् ॥ ११ ॥**

**ಅಂ**—"ಇವನು ಮನುಷ್ಯ ದೇಹವನ್ನು ತೊಟ್ಟಿರುವನು" ಎಂಬ ಭ್ರಾಂತಿಯಿಂದ ಮೂಢರಾದವರು ನನ್ನನ್ನು ಲೆಕ್ಕಿಸರು. ಅಥವಾ ಅಜ್ಞಾನಿಗಳಿಂದ ಅವಮಾನಕ್ಕೆ ಕಾರಣವಾದ ಮನುಷ್ಯ ದೇಹದಂತೆ ತೋರುವ ದೇಹವುಳ್ಳ ನನ್ನನ್ನು ತುಚ್ಛವಾಗೆಣಿಸುವರು. ಇದರಿಂದ ಪರಮಾತ್ಮನಿಗೆ ಮನುಷ್ಯ ದೇಹ ಉಂಟೆಂದು ಹೇಳಿದ್ದರಿಂದ ಅದಕ್ಕೂ, ಅವನಿಗೂ, ಆಗುವ ಸಂಬಂಧದಿಂದ ಧರ್ಮಸಂಕ್ರಾಂತಿಯು ಆಗಲೇಬೇಕು; ಅಂದಬಳಿಕ ಹಿಂದೆ ೫ನೆಯ ಶ್ಲೋಕದಲ್ಲಿ ಹೇಳಿದ್ದು ಸರಿಯಲ್ಲವೆಂಬ ಸಂದೇಹವು ದೂರಾಯಿತು. ಅದರಂತೆ ದೇಹವುಳ್ಳವರಲ್ಲಿ ಭೇದವಿರದಿದ್ದರೂ, 'ಆಶ್ರಯಿಸಿದ' ಎಂದು ಹೇಳಿದ್ದು ಚೈತ್ರನ ದೇಹವು ಚೈತ್ರನಿಗೆ ಅಧೀನವಿರುವಂತೆ, ಪರಮಾತ್ಮನ ದೇಹ ಕೂಡ ಅವನಿಗೆ ಅಧೀನವೆಂದು ಗೌಣವೃತ್ತಿಯಿಂದ ಆ ಶ್ಲೋಕದಲ್ಲಿ ಹೇಳಿದ್ದಕ್ಕೆ ವಿರೋಧವಾಗುವದಿಲ್ಲ. ಹೀಗೆ ಯಾವಾಗಲೂ ಇರುವ ಗುಣಗಳಿಂದ ಪೂರ್ಣನೂ, ಸರ್ವೋತ್ತಮನೂ, ಆದ ನನ್ನ ಯಥಾರ್ಥಜ್ಞಾನವಿಲ್ಲದೆ, ತಮೋಗುಣಿಗಳು ನನ್ನನ್ನು ಹಾಗೆ ತಿಳಿಯುವರು. ಇದಲ್ಲದೆ, ತಾತ್ಪರ್ಯದಲ್ಲಿ ಚತುರ್ಮುಖ, ರುದ್ರ, ರಮಾದೇವಿ, ಇವರೆಲ್ಲರು ಸಮಾನರೆಂದು ತಿಳಿಯುವ ಜ್ಞಾನವು ಕೂಡ ಅವಮಾನವೇ ಎಂದು ಹೇಳಿ ಇದೆ.

೧೨. ಪರಮಾತ್ಮನನ್ನು ಹೀನೈಸುವವರಿಗೆ ಅನರ್ಥವಿಲ್ಲೆಂದು ಹೇಳಿದ್ದು ಸರಿಯಲ್ಲೆಂಬ ಅಭಿಪ್ರಾಯದಿಂದ ನುಡಿದದ್ದು :—

मोघाशा मोघकर्माणो मोघज्ञाना विचेतसः ।
राक्षसीमासुरीं चैव प्रकृतिं मोहिनीं श्रिताः ॥ १२ ॥

ಅಂ—ಈ ತಮೋಗುಣಿಗಳು ಬರಿಯಲಾಸೆ ಉಳ್ಳವರು, ಅಂದರೆ ಭಗವಂತನ ದ್ವೇಷಿಗಳು ಅಪೇಕ್ಷಿಸಿದ ಸಂಪತ್ತು ಮುಂತಾದವುಗಳು ದೊರೆತಾಗ್ಯೂ, ಇಹಲೋಕದಲ್ಲಿ ಎಷ್ಟು ಸಿಕ್ಕರೂ ತಮ್ಮ ಆಸೆ ಈಡೇರಲಿಲ್ಲವೆಂದು ಅನ್ನುವರು. ಅವರು ಮಾಡುವ ಯಜ್ಞಾದಿ ಕರ್ಮಗಳು ಅವರ ಮುಕ್ತಿಗೆ ಗೊಡ್ಡು ಕೆಲಸಗಳು. ಅವರ ತತ್ವವಿಷಯಕ ಜ್ಞಾನವು ಕೂಡ ಬರಡವೇ. ಇಲ್ಲಿ 'ಬರಡು—ಜ್ಞಾನ' ಅಂದರೆ ಬ್ರಹ್ಮರುದ್ರಾದಿಗಳಲ್ಲಿ ಭಕ್ತಿಯಿಂದ ಸಂಪಾದಿಸಿದ ಜ್ಞಾನ. ಈ ವಿಷಯಕ್ಕೆ (೩—೪—೩೪) ಈ ಸೂತ್ರವು ಪ್ರಮಾಣವಾಗಿದೆ. ಅದರಂತೆಯೇ, ಅವರು ವಿರುದ್ಧ ಮನದವರು. ಹೆಚ್ಚಿಗೆ ಹೇಳುವದೇನು? ಅವರಿಗೆ ಇಹಲೋಕದ ಪುರುಷಾರ್ಥದ ಪ್ರಾಪ್ತಿಯೇ ಇಲ್ಲ. ಈ ಬಗ್ಗೆ ಭಾಗವತ (೭—೧—೩೨)ನೆಯ ಶ್ಲೋಕದಲ್ಲಿ 'ದ್ವೇಷಪೂರ್ವಕ ಚೈದ್ಯಾದಿ ಅರಸರು ಮಾಡಿದ ನಿತ್ಯ ಧ್ಯಾನವು ಕೇವಲ ಸ್ತುತಿಗಾಗಿ' ಎಂದು ಹೇಳಿ ಇದೆ ಹಾಗಾದರೆ, ಅಂಥವರಿಗೆ ಅಜ್ಞಾನಮೂಲಕ ಮಿಥ್ಯಾಜ್ಞಾನವು ಇರಲಿ, ಆದರೆ ಪರಮಾತ್ಮನ ವಿಷಯಕ್ಕೆ ಉತ್ಕಟ ದ್ವೇಷವೇಕೆ ಅಥವಾ ಅನ್ಯರಲ್ಲಿ ಕಾಣದ ಮಿಥ್ಯಾಜ್ಞಾನವೇ ಅವರಲ್ಲಿ ಇರುವ ಕಾರಣವೇನೆಂದು ಕೇಳಿದರೆ, ಅದಕ್ಕೆ ಸಮಾಧಾನ ಹೇಳುವರು:— ಬುದ್ಧಿಯನ್ನು ಕೆಡಿಸುವ ರಾಕ್ಷಸ—ಅಸುರ ಸ್ವಭಾವವನ್ನು ಆಶ್ರಯಿಸಿದ್ದರಿಂದ ಅವರು ನನ್ನನ್ನು ಹಾಗೆ ಧಿಕ್ಕರಿಸುವರು.

೧೩. ಇನ್ನು, ಪರಮಾತ್ಮನಲ್ಲಿ ದ್ವೇಷವಿರುವದರಿಂದಲೇ ಅವರು ಅವನನ್ನು ಹಾಗೆ ಕಡೆಯಾಗಿ ಕಾಣುವರೆಂದೇಕೆ ತಿಳಿಯಕೂಡದೆಂದು ಕೇಳಿದರೆ, ಹಾಗೆ ತಿಳಿದರೆ, ದೈವಪ್ರಕೃತಿಯೆಂದರೆ, ಮುಕ್ತಿಯೋಗ್ಯರಾದ ಉತ್ತಮ ಜೀವರಾಶಿಗಳು ಕೂಡ ಅವರಂತೆ ವರ್ತಿಸಬಹುದು; ಆದರೆ ಹಾಗಿಲ್ಲ ಎಂಬ ಅಭಿಪ್ರಾಯದಿಂದ ಹೇಳಿದ್ದು:—

महात्मानस्तु मां पार्थ दैवीं प्रकृतिमाश्रिताः ।
भजंत्यनन्यमनसो ज्ञात्वा भूतादिमव्ययम् ॥ १३ ॥

ಅಂ—ಮುಕ್ತಿಯೋಗ್ಯರಾದ ಉತ್ತಮ ಜೀವರ ಸ್ವಭಾವವನ್ನು ಆಶ್ರಯಿಸಿದ ಮಹನೀಯರು ಪ್ರಾಣಿಗಳಿಗೆ ಕಾರಣನೂ, ನಾಲ್ಕು ಬಗೆಯ ನಾಶರಹಿತನೂ, ನಾನೆಂದು ತಿಳಿದು ನನ್ನಲ್ಲಿಯೇ ತಮ್ಮ ಮನವನ್ನು ಒಲಾಗಿಟ್ಟವರಾಗಿ ನನ್ನನ್ನೇ ಆರಾಧಿಸುವರು.

೧೪. ಮುಕ್ತಿಯೋಗ್ಯ ಜೀವರಾಶಿಗಳು ಮಾಡುವ ಸ್ತುತಿಯ ಪ್ರಕಾರವನ್ನು ವರ್ಣಿಸಿದ್ದು:—

सततं कीर्तयंतो मां यतंतश्च दृढव्रताः ।
नमस्यंतश्च मां भक्त्या नित्ययुक्ता उपासते ॥ १४ ॥

ಅಂ—ಉತ್ತಮ ಅಧಿಕಾರಿಗಳು 'ಕೃಷ್ಣಾ, ಕೃಷ್ಣಾ,' ಎಂದು ನನ್ನನ್ನು ನೆನೆಯುತ್ತ, ನನ್ನ ಆರಾಧನೆಗಾಗಿಯೇ ಯತ್ನಿಸುವರು. ಅವರು ಉಪವಾಸಾದಿ ವ್ರತಗಳಲ್ಲಿ ತತ್ಪರರು. ನಿತ್ಯವೂ

ನನ್ನಲ್ಲಿ ಮನವನ್ನಿಟ್ಟವರಾಗಿ ಅಥವಾ ನಿತ್ಯದಲ್ಲಿ ಕರ್ಮಜ್ಞಾನ–ಉಪಾಯಗಳನ್ನು ಸಾಧಿಸುತ್ತ, ಭಕ್ತಿ ಪೂರ್ವಕವಾಗಿ ನನಗೆ ನಮಸ್ಕರಿಸಿ ನನ್ನನ್ನೇ ಭಜಿಸುವರು.

೧೫.

**ज्ञानयज्ञेन चाप्यन्ये यजंतो मामुपासते ।**
**एकत्वेन पृथक्त्वेन बहुधा विश्वतोमुखम् ॥ १५ ॥**

**ಅಂ**—ಅನ್ಯ ಜ್ಞಾನಿಗಳು ಕೂಡ ಜ್ಞಾನವೆಂಬ ಯಜ್ಞದಿಂದ ಆರಾಧಿಸುತ್ತ ನನ್ನ ಉಪಾಸನೆ ಗೈಯ್ಯುವರು, ಅಂದರೆ ಅವರು ನಿತ್ಯದಲ್ಲಿ ಶ್ರವಣ, ಮನನ, ಧ್ಯಾನಾದಿಗಳನ್ನು ಆಚರಿಸಿ ಅನ್ಯರಿಗೆ ಬೋಧಿಸುತ್ತ ಪರಮಾತ್ಮನ ಮಹಿಮೆಯು ಜ್ಞಾನದಲ್ಲಿಯೇ ನಿರತರಾಗಿರುವರೆಂಬರ್ಥ. ಇಲ್ಲಿ 'ಮುಖ' ಶಬ್ದದಿಂದ ಎಲ್ಲ ಅವಯುವಗಳೆಂದು ತಿಳಿಯಬೇಕು. ನಾನು ಎಲ್ಲ ಕಡೆಗೂ ಇರುವದರಿಂದ ಮುಖ್ಯನೆಂತಲೂ, ಎಲ್ಲ ಅವಯುವಗಳಿಂದ ಯುಕ್ತನೆಂತಲೂ, ಸಕಲ ಜಗತ್ತಿಗೆ ವಿಲಕ್ಷಣನಾದ್ದರಿಂದ ಭಿನ್ನನೆಂತಲೂ, ಶುಕ್ಲ, ನೀಲ, ಪೀತ, ಮುಂತಾದ ಭೇದಗಳಿಂದ ಅನೇಕ ವಿಧದಿಂದಲೂ ಆರಾಧನೆ ಗೈಯ್ಯುವರು, ಅಥವಾ ಹಿಂದೆ (೪–೨೫)ನೆಯ ಶ್ಲೋಕದಲ್ಲಿ ಹೇಳಿದಂತೆ, ಅನೇಕರು ಆರಾಧಿಸುವರೆಂದು ತಿಳಿಯಬೇಕು, ಅಥವಾ ತಾತ್ಪರ್ಯದಲ್ಲಿ ಹೇಳಿದಂತೆ, ಸರ್ವರೂಪಗಳ ಸ್ವರೂಪವೇ ಆದ ನಾರಾಯಣನು ನಾನೆಂತಲೂ, ವಾಸುದೇವಾದಿ ನಾಲ್ಕು ಮೂರ್ತಿ, ನಾರಾಯಣ ವಾಸುದೇವಾದಿ ಐದು ಮೂರ್ತಿ, ಮತ್ಸ್ಯಾದಿ ದ್ವಾದಶ ಮೂರ್ತಿ, ಕೇಶವಾದಿ ಇಪ್ಪತ್ತುನಾಲ್ಕು ಮೂರ್ತಿಗಳಿಂದ ಯುಕ್ತನೇ ನಾನೆಂದು ವಿವಿಧವಾಗಿ ನನ್ನ ಪೂಜೆಗೈಯ್ಯುವರು

೧೬. ಹೀಗೆ ಜ್ಞಾನವನ್ನು ನಿರೂಪಿಸಿ, ವಿಶೇಷ ಜ್ಞಾನ ಹೇಳುವದಕ್ಕಾಗಿ ಮುಂದಿನ ನಾಲ್ಕು ಶ್ಲೋಕಗಳಿಂದ ಅದರ ವಿಷಯುವನ್ನು ಹೇಳಿದ್ದು —

**अहं क्रतुरहं यज्ञः स्वधाऽहमहमौषधम् ।**
**मंत्रोऽहमहमेवाज्यमहमग्निरहं हुतम् ॥ १६ ॥**

**ಅಂ**—ದೀಕ್ಷೆ ಮೊದಲ್ಗೊಂಡು ಅವಭೃತಸ್ನಾನದವರೆಗೆ ಮಾಡತಕ್ಕ ಕರ್ಮಸಮೂಹ ಅಂದರೆ ಜ್ಯೋತಿಷ್ಟೋಮಾದಿಗಳು, ಯಜ್ಞವೆಂದರೆ ದೇವತಾ ಉದ್ದಿಶ್ಯವಾಗಿ ದ್ರವ್ಯತ್ಯಾಗವೆಂಬ ಮುಖ್ಯ ಕರ್ಮ, ಪಿತೃಗಳಿಗೆ ತಿಲೋದಕಾದಿಗಳನ್ನು ಕೊಡುವದು, ಔಷಧ, ಮಂತ್ರ, ಆಜ್ಯ, ಅಗ್ನಿ, ಆಹುತಿ, ಇವೆಲ್ಲ ನಾನೇ ಎಂದು ತಿಳಿ. ಇಲ್ಲಿ ವಿವೇಕವೇನಂದರೆ, ಮೇಲೆ ಹೇಳಿದ ವಿಷಯುಗಳಿಗೂ, ಪರಮಾತ್ಮನಿಗೂ, ಅಭೇದ ಹೇಳಿದ್ದು ಆಯಾ ಕರ್ಮಾದಿಗಳಿಗೆ ನಿಯಾಮಕನೂ, ಅವುಗಳಲ್ಲಿ ಅಂತರ್ಗತನೂ, ಆದ್ದರಿಂದ ಹೇಳಿ ಇದೆ. (ಉದಾಂ ಯಜ್ಞಕ್ಕೆ ನಿಯಾಮಕನಾಗಿ ಯಜ್ಞದಲ್ಲಿ ನಿಂತು ಆಹುತಿಗಳ ಭೋಕ್ತೃತ್ವ).

೧೭.

**पिताऽहमस्य जगतो माता धाता पितामहः ।**
**वेद्यं पवित्रमोंकार ऋक् साम यजुरेव च ॥ १७ ॥**

**ಅಂ**—ಈ ಪ್ರಪಂಚಕ್ಕೆ ತಂದೆ, ತಾಯಿ, ಧಾರಕನು, ಪೋಷಕನು, ಪೂಜ್ಯನು ನಾನು. ಅದರಂತೆಯೇ ತಿಳಿದುಕೊಳ್ಳಲು ಯೋಗ್ಯನು. ಪವಿತ್ರನು, ಅಂದರೆ ತಿಳಿದುಕೊಳ್ಳುವ ಪವಿತ್ರ

ವಸ್ತುಗಳಿಗೆ ನನ್ನಿಂದಲೇ ಪಾವಿತ್ರ್ಯ. ಓಂಕಾರ, ಋಕ್, ಸಾಮ, ಯಜು. ಈ ಭೇದಗಳೆಲ್ಲ ನನ್ನ ಹೆಸರುಗಳೇ. ಹೇಗಂದರೆ, ಎಲ್ಲ ಪದಾರ್ಥಗಳ ಯಥಾರ್ಥಜ್ಞಾನವು ನನಗಿರುವದರಿಂದ ಯಜ್ಞ ಎನಿಸುವೆ. ನನಗೆ ನಾನೇ ಧಾರಕನಾದ ಮೂಲಕ ಸ್ವಧಾ, ತಾಪತ್ರಯಗಳ ನಾಶಕ್ಕೆ ಆಶ್ರಯನಾದ್ದರಿಂದ ಔಷಧಿನಾಮಕನು ಜ್ಞಾನದಿಂದ ರಕ್ಷಿಸುವದರಿಂದ ಮಂತ್ರ ಎನಿಸುವೆ. ಎಲ್ಲ ಕಡೆಗೂ ಶ್ರೇಷ್ಠನಾದ್ದರಿಂದ ಆಜ್ಯವೆಂದು ನನಗೆ ಹೆಸರು. ಗತಿಹೀನನಾದರೂ ಜಗದ ನಿಯಮನ ಮಾಡುವದರಿಂದ ಅಗ್ನಿನಾಮಕನು. ಯಜ್ಞಾದಿಗಳಲ್ಲಿ ನನ್ನ ಆವಾಹನೆಮಾಡುವದರಿಂದ ಹುತನಾಮಕನು ಸಕಲ ಕಾರ್ಯಗಳಲ್ಲಿ ಓಂ ಎಂಬ ಉಚ್ಚಾರದಿಂದ ನನ್ನ ಆವಾಹನೆ ಮಾಡುವದರಿಂದ ಓಂಕಾರನೆನಿಸುವೆ. ಪೂಜ್ಯನಾದ್ದರಿಂದ ಋಕ್‌ನಾಮಕನು. ಎಲ್ಲ ರೂಪಗಳಲ್ಲಿ ಒಂದೇ ವಿಧನಾಗಿರುವದರಿಂದ ಸಾಮನೆಂದೆನ್ನುವರು ನನಗೆ, ಎಲ್ಲರು ನನ್ನನ್ನೇ ಆರಾಧಿಸುವದರಿಂದ ಯಜುನಾಮಕನು ನಾನು.

೧೮.

**गतिर्भर्ता प्रभुः साक्षी निवासः शरणं सुहृत् ।**
**प्रभवः प्रलयः स्थानं निधानं बीजमव्ययम् ॥ १८ ॥**

**ಅಂ**—ಮೋಕ್ಷೇಚ್ಛುಗಳಿಂದ ತಿಳಿಯಲ್ಪಡುವದರಿಂದ ನಾನು ಗತಿ ಎನಿಸುವೆ; ಅಂದರೆ ನಾನು ಮುಕ್ತರಿಗೆ ಆಸರ, ಧಾರಕನು, ಸರ್ವಸ್ವಾಮಿಯು, ಸರ್ವಸಾಕ್ಷಿಯು, ಎಲ್ಲರಿಗೆ ಶರಣ ಸ್ಥಾನವು, ಅನಿಮಿತ್ತ ಬಂಧು, ಜಗದುತ್ಪಾದಕ, ಪ್ರಲಯನು, ಸರ್ವಾಧಾರನು, ಪ್ರಳಯಕಾಲದಲ್ಲಿ ಪ್ರಕೃತಿ ಮುಂತಾಗಿ ಎಲ್ಲ ಜಗವು ನನ್ನಲ್ಲಿ ಲೀನವಾಗುವದರಿಂದ ನಿಧಾನನು. ( ಇಲ್ಲಿ ಜೀವರಾಶಿಗಳು ಮೊದಲು ಪ್ರಕೃತಿಯನ್ನು ಹೊಂದಿ ಬಳಿಕ ಅವಳ ಕೂಡ ಪರಮಾತ್ಮನಲ್ಲಿ ಆಸರ ಪಡೆಯುವವೆಂದು ತಿಳಿಯಬೇಕು ಇದರಿಂದ प्रकृतिं यान्ति भूतानि निग्रह किं करिष्यति ಎಂಬುದಕ್ಕೆ ವಿರೋಧ ಬರುವದಿಲ್ಲ ) ಪ್ರಪಂಚವನ್ನು ಹುಟ್ಟಿಸುವದರಿಂದ ಬೀಜನೆನಿಸುವೆ; ಹಾಗಾದರೆ, ಇದರಿಂದ ಪರಮಾತ್ಮನಿಗೆ ವಿಕಾರ ಉಂಟೇ ಎಂದು ಕೇಳಿದರೆ, ಇಲ್ಲ, ಅದರಿಂದಲೇ ಅವ್ಯಯನೆಂದು ಹೇಳಿ ಇದೆ, ( ಅವ್ಯಯ—ವಿಕಾರ ನಾಶಗಳಿಂದ ಶೂನ್ಯ. )

೧೯.

**तपाम्यहमहं वर्षं निगृह्णाम्युत्सृजामि च ।**
**अमृतं चैव मृत्युश्च सदसच्चाहमर्जुन ॥ १९ ॥**

**ಅಂ**—ಸೂರ್ಯನಲ್ಲಿದ್ದು ಜಗವನ್ನು ತಪಿಸುವೆ. ಮೇಘಮಂಡಲದಲ್ಲಿ ಅಂತರ್ಗತನಾಗಿ ಮಳೆ ಗರೆಯುವೆ; ಮಳೆ ನಿಲ್ಲಿಸುವೆ. ಇಂದ್ರಿಯಗಳಲ್ಲಿ ಅಡಗಿ ಅವುಗಳಿಗೆ ಆಶ್ರಯವಾದ ದೇಹವನ್ನು ಕೊಟ್ಟು, ಮರಣಪರಿಹರಿಸುವದರಿಂದ ಅಮೃತ ಎನಿಸುವೆ. ಪ್ರಳಯಕಾಲದ ಹೊರ್ತು ಅನ್ಯಕಾಲದಲ್ಲಿ ಸಂಹಾರ ಕಾರ್ಯಮಾಡುವದರಿಂದ ಮೃತ್ಯು ಎನಿಸುವೆ. ಸತ್ ಎಂದರೆ ಕಾರ್ಯ ಸಮೂಹಕ್ಕೂ, ಅಸತ್ ಎಂದರೆ ಕಾರಣ ಸಮೂಹಕ್ಕೂ, ನಿಯಾಮಕನಾದ್ದರಿಂದ ನನಗೆ ಸದಸತ್ ಎನ್ನುವರು. ಇಲ್ಲಿ 'ನಾನು' ಎಂದು ಆಗಾಗ್ಗೆ ಹೇಳಿದ್ದು ಬರಿಯ ಉಪಚಾರಕ್ಕಲ್ಲವೆಂದು ಸೂಚಿತವಾಗುವದು. ಅಥವಾ ಸದ್ಗುಣಗಳಿಂದ ಪೂರ್ಣನಾದ್ದರಿಂದ ಸತ್ ಎಂದು ನನಗೆನ್ನುವರು, ಮತ್ತು ಅಂಥ ಗುಣಗಳಿಂದ ಪೂರ್ಣರಾದ ಅನ್ಯ ಪುರುಷರಿಲ್ಲದ್ದರಿಂದ ಅಸತ್ ಎನ್ನುವರು.

೨೦. ಇನ್ನು, "ಹಿಂದೆ ಸಕಲ ಯಜ್ಞಗಳನ್ನು ಭೋಗಿಸುವದರಿಂದ ಪರಮಾತ್ಮನು ಯಜ್ಞನೆನಿಸುವನೆಂದು ಹೇಳಿದ್ದು ಯೋಗ್ಯವಲ್ಲ. ಅದರಿಂದ ತ್ರೈವಿದ್ಯರು ಮಾಡುವ ಯಜ್ಞಗಳಿಗೂ ಪರಮಾತ್ಮನು ಭೋಕ್ತೃನಾಗುವದರಿಂದ ತ್ರೈವಿದ್ಯರು ಮತ್ತು ಭಾಗವತರಿಗೆ ಅದರಿಂದುಂಟಾಗುವ ಫಲಗಳಲ್ಲಿ ಭೇದವೇ ಇಲ್ಲದಂತಾಯಿತ್ತು, ಏಕೆಂದರೆ, ಕರ್ಮಗಳಿಂದಾಗುವ ಫಲಕ್ಕೆ ಪರಮಾತ್ಮನ ಭೋಗವೇ ಕಾರಣವು. ಆ ಭೋಗವು ಎಲ್ಲ ಕಡೆಯಲ್ಲಿ ಸಮಾನವಾಗಿದೆ" ಎಂದು ಆಕ್ಷೇಪಿಸಿದರೆ, ಭಾಗವತರು ಮಾಡಿದ ಆರಾಧನೆಗೆ ದೊರೆಯುವ ಫಲವು ತ್ರೈವಿದ್ಯರು ಮಾಡಿದ ಯಜ್ಞಫಲಕ್ಕಿಂತ ಹೆಚ್ಚಿನದೆಂಬಲ್ಲಿ ಮೂರು ಶ್ಲೋಕಗಳಿಂದ ಹೇಳಿದ್ದು —

त्रैविद्या मां सोमपाः पूतपापा
यज्ञैरिष्ट्वा स्वर्गतिं प्रार्थयंते ।
ते पुण्यमासाद्य सुरेंद्रलोक-
मश्नंति दिव्यान्दिवि देवभोगान् ॥ २० ॥

ಅಂ — ಋಕ್, ಯಜು, ಸಾಮಗಳೆಂದು ಮೂರು ವಿದ್ಯೆಗಳು. ಅವುಗಳನ್ನಾಚರಿಸುವವರೇ ತ್ರೈವಿದ್ಯರು; ಅಂದರೆ, ಅವರು ಶ್ರೀ ವಿಷ್ಣುವು ಸರ್ವೋತ್ತಮನೆಂದು ತಿಳಿದರೂ, ತ್ರಿವಿದ್ಯೆಗಳಲ್ಲಿ ತೋರುವ ಸ್ವರ್ಗಾದಿಗಳಿಗೆ ಅನ್ಯ ದೇವತೆಗಳು ಕಾರಣರೆಂದು ಬಗೆದು, ಹಾಗೆ ಅನುಷ್ಠಾನಮಾಡಿ, ಕೊನೆಗೆ ಅವುಗಳನ್ನು ಶ್ರೀ ವಿಷ್ಣುವಿಗೆ ಸಮರ್ಪಿಸುವರು. ಅವರು ನನ್ನನ್ನು ಯಜ್ಞಗಳಿಂದ ಆರಾಧಿಸಿ ಕಡೆಗೆ ನನಗೆ ಆ ಕರ್ಮಗಳನ್ನರ್ಪಿಸಿ ಯಜ್ಞದಲ್ಲಿ ಉಳಿದಪ್ಪರ ಮತ್ತು ಸೋಮರಸದ ಸೇವನೆಯಿಂದ ತಮ್ಮ ಪಾಪಗಳನ್ನೆಲ್ಲ ನಾಶಗೊಳಿಸಿ ಸ್ವರ್ಗ ಫಲಪ್ರಾಪ್ತಿಗಾಗಿ ನನ್ನನ್ನು ಪ್ರಾರ್ಥಿಸುವರು. ಅವರು ಪುಣ್ಯಗಳಿಂದ ಲಭಿಸುವ ಇಂದ್ರಲೋಕವಾದ ಸ್ವರ್ಗಕ್ಕೆ ಹೋಗಿ ಅಲ್ಲಿ ಅಲೌಕಿಕ ಭೋಗಗಳನ್ನು ಉಣ್ಣುವರು.

೨೧.

ते तं भुक्त्वा स्वर्गलोकं विशालं
क्षीणे पुण्ये मर्त्यलोकं विशंति ।
एवं त्रयीधर्ममनुप्रपन्ना
गतागतं कामकामा लभंते ॥ २१ ॥

ಅಂ—ತ್ರೈವಿದ್ಯರು ಸ್ವರ್ಗಫಲಕ್ಕಾಗಿ ಅನ್ಯ ದೇವತೆಗಳನ್ನಾರಾಧಿಸಿ, ಸ್ವರ್ಗದಲ್ಲಿ ವಿವಿಧ ಫಲಗಳನ್ನುಂಡು ತಮ್ಮ ಪುಣ್ಯ ತೀರಿದಬಳಿಕ ಈ ಮೃತ್ಯುಲೋಕಕ್ಕೆ ಮರಳುವರು. ಈ ಬಗ್ಗೆ (೩–೧–೮)ನೆಯ ಸೂತ್ರದಲ್ಲಿ ಹೇಳಲಾಗಿದೆ. ಬಳಿಕ ಇವೇ ಮೂರು ಧರ್ಮಗಳನ್ನು ವೇದಕ್ಕನುಗುಣವಾಗಿ ಆಚರಿಸುತ್ತ ವಿವಿಧ ಭೋಗಾಪೇಕ್ಷೆಯಿಂದ ಸ್ವರ್ಗ–ಮೃತ್ಯು ಲೋಕಗಳಿಗೆ ಬರುಹೋಗುವದರಲ್ಲಿಯೇ ಸಂಚರಿಸುವರು. ಹೊರ್ತು ಅವರಿಗೆ ಸಂಸಾರಕ್ಕೆ ಬಾಧಕ ಫಲವಾದ ಮೋಕ್ಷವೆಂದೂ ಕೈಗೆ ನಿಲುಕುವದಿಲ್ಲ.

೨೨. ಹೀಗೆ ತ್ರೈವಿದ್ಯರಿಗೆ ದೊರೆಯುವ ಫಲವನ್ನು ಹೇಳಿ, ಭಾಗವತರಿಗಾಗುವ ಫಲವನ್ನು ವಿವರಿಸಿದ್ದು:—

अनन्याश्चितयंतो मां ये जनाः पर्युपासते ।
तेषां नित्याभियुक्तानां योगक्षेमं वहाम्यहम् ॥ २२ ॥

ಅಂ— ಅನ್ಯರನ್ನಾರಾಧಿಸದೆ, ಕೇವಲ ನನ್ನನ್ನೇ ಆರಾಧಿಸುವ ಭಾಗವತರು ಅತಿಭಕ್ತಿಯಿಂದ ನನ್ನನ್ನು ಧ್ಯಾನಾದಿಗಳಿಂದ ಉಪಾಸನೆಗೈಯ್ಯುವರು. ಇಂಥವರು ಪರಮಾತ್ಮನ ಸೇವೆಗಾಗಿಯೇ ಮನಮಾರಿಕೊಂಡಿರುವರು, ನನ್ನ ಸೇವೆಯಲ್ಲಿಯೇ ತಮ್ಮ ದೇಹ, ಇಂದ್ರಿಯಾದಿಗಳನ್ನು ದೃಢಪಡಿಸಿದ್ದಲ್ಲದೆ ಯಾವಾಗಲೂ ನನ್ನ ಸ್ಮರಣೆಯಲ್ಲಿಯೇ ಮುಳುಗಿರುವರು. ಯೋಗವೆಂದರೆ ಸಿಗದಿದ್ದ ಮೋಕ್ಷವನ್ನು ಒದಗಿಸಿ ಕೊಡುವದು, ಕ್ಷೇಮವೆಂದರೆ ಅದು ಅಕ್ಷಯವಾಗಿರುವಂತೆ ನೋಡಿಕೊಳ್ಳುವದು, ಇವೆರಡೂ ಭಾರಗಳನ್ನು ನಾನು ವಹಿಸುವೆನು; ಅಂದರೆ ಸಂಸಾರಕ್ಕೆ ತಿರುಗಿ ಸಿಲುಕದ ಮಹಾ ಪುರುಷಾರ್ಥವನ್ನು ನಾನವರಿಗೆ ಕೊಡುವೆನು.

ವಿಂ ಅಂ— ಇಲ್ಲಿ ತ್ರೈವಿದ್ಯರಿಗೂ, ಭಾಗವತರಿಗೂ, ವೈಲಕ್ಷಣ್ಯವೇನಂದರೆ, ಪರಮಾತ್ಮನು ಯಜ್ಞಗಳಿಗೆಲ್ಲ ಭೋಕ್ತೃ ಆದರೂ, ಅವರೀರ್ವರಿಗೆ ಉಂಟಾಗುವ ಫಲಭೇದವು ಅವರು ಮಾಡುವ ಪರಮಾತ್ಮನ ಆರಾಧನೆಯ ಪ್ರಕಾರದ ಮೂಲಕ ಸಂಭವಿಸುವದು. ಹೇಗಂದರೆ, ಹಿಂದೆ (೭–೨೧)ನೆಯ ಶ್ಲೋಕದಲ್ಲಿ 'ತ್ರೈವಿದ್ಯರು ಅನ್ಯದೇವತೆಗಳನ್ನು ಆರಾಧಿಸುವರೆಂದು' ಹೇಳಿ ಇದೆ. ಇಲ್ಲಿ ಭಾಗವತರು ಅನ್ಯ ದೇವತೆಗಳನ್ನಾರಾಧಿಸದೆ ಕೇವಲ ಪರಮಾತ್ಮನನ್ನೇ ಆರಾಧಿಸುವರೆಂದು ಹೇಳಲಾಗಿದೆ. ಮುಂಬರುವ ೨೪ನೆಯ ಶ್ಲೋಕದಲ್ಲಿ **न तु अभिजानन्ति** ತ್ರೈವಿದ್ಯರಿಗೆ ಅತಿಭಕ್ತಿಯು, ಜ್ಞಾನವು, ಇಲ್ಲವೆಂದು ಹೇಳಲ್ಪಡುವದು. ತತ್ವಜ್ಞಾನವಿರದಿದ್ದರೆ, ಭಕ್ತಿಯುಂಟಾಗದೆಂಬುದು ಸಿದ್ಧ ಮಾತು. ಆದರೆ, ಭಾಗವತರಿಗೆ ಇಲ್ಲಿ **परि** ಎಂಬ ಶಬ್ದ ಪ್ರಯೋಗದಿಂದ ಅತಿಶಯ ಭಕ್ತಿ ಉಂಟೆಂದು ಹೇಳಿ ಇದೆ. ತ್ರೈವಿದ್ಯರು ಸ್ವರ್ಗಫಲಕ್ಕಾಗಿ ನನ್ನನ್ನು ಪ್ರಾರ್ಥಿಸುವರೆಂದು ಹಿಂದೆ ೨೦ನೆಯ ಶ್ಲೋಕದಿಂದ ಹೇಳಿದ್ದರಿಂದ, ಅವರಿಗೆ ಕಾಮನಾ ಉಂಟೆಂದು ಸಿದ್ಧವಾಯಿತು. ಆದರೆ, ಭಾಗವತರು ನನ್ನನ್ನೇ ಧ್ಯಾನಿಸುವರೆಂದು ಹೇಳಿದ್ದರಿಂದ, ಅವರಿಗೆ ಕಾಮನೆ ಇಲ್ಲೆಂದು ಹೇಳಿದಂತಾಯಿತು. ಇನ್ನು, ತ್ರೈವಿದ್ಯರು ನನ್ನನ್ನು ಆರಾಧಿಸಿ ತಾವು ಮಾಡಿದ ಕರ್ಮಗಳನ್ನು ಕೊನೆಗೆ ನನಗೆ ಅರ್ಪಿಸುವರೆಂದು ಹೇಳಲಾಗಿದೆ. ಆದರೆ ಭಾಗವತರು ನನ್ನ ಸ್ಮರಣೆಯನ್ನೇ ಯಾವಾಗಲೂ ಮಾಡುವರು. ಇದರಿಂದ, ಅವರೀರ್ವರು ವೈಷ್ಣವರಾದರೂ, ಪರಮಾತ್ಮನ ಆರಾಧನೆಗಾಗಿ ಕರ್ಮಮಾಡಿದರೂ, ಫಲದೊರೆಯಲು ಕಾರಣವಾದ ಉಪಾಯಭೇದದಿಂದ ಫಲಭೇದ ಉಂಟೆಂದು ಸಿದ್ಧವಾಯಿತು.

೨೩. ಅನ್ಯ ದೇವತೆಗಳನ್ನು ಆರಾಧಿಸುವವರಿಗೆ ದೊರೆಯುವ ಫಲದಲ್ಲಿ ಭೇದ ಉಂಟೆಂದು ಸಪ್ರಮಾಣವಾಗಿ ಹೇಳಿದ್ದು —

येऽप्यन्यदेवता भक्ता यजंते श्रद्धयान्विताः ।
तेऽपि मामेव कौंतेय यजंत्यविधिपूर्वकम् ॥ २३ ॥

ಅಂ— ಅನ್ಯ ದೇವತೆಗಳಲ್ಲಿ ಶ್ರದ್ಧೆಯುಳ್ಳವರು ಅನ್ಯ ದೇವತೆಗಳ ಸಲುವಾಗಿ ಯಜ್ಞಗೈಯ್ಯುವರು. ಅವರು ಕೂಡ ನನ್ನನ್ನು ವಿಧಿಗನುಸರಿಸದೆ ಆರಾಧಿಸುವರೆಂದು ತಿಳಿ. ಇಲ್ಲಿ ಅಭಿಪ್ರಾಯ

ವೇನಂದರೆ, ನನ್ನ ಆರಾಧನೆಗಾಗಿಯೇ ಕರ್ಮವಾಡುವದು ಯೋಗ್ಯವಾದರೂ, ಅನ್ಯ ದೇವತೆಗಳ ಆರಾಧನೆಗಾಗಿ ಕರ್ಮವಾಡಿ ಅದನ್ನು ಕೊನೆಯಲ್ಲಿ ನನಗೆ ಅರ್ಪಿಸುವದರಿಂದ ಆರಾಧನರೂಪವಾದ ಆ ಕರ್ಮವು ವಿಧಿಪೂರ್ವಕವಲ್ಲ.

೨೪. ಹಿಂದಿನ ಶ್ಲೋಕದಲ್ಲಿ ಹೇಳಿದ ಭಕ್ತರು ಮಾಡಿದ ಯಜ್ಞಗಳಿಗೆ ಕೂಡ ಪರಮಾತ್ಮನು ಭೋಕ್ತೃನಾದುದರಿಂದ ಅವರು ಮಾಡಿದ ಯಜ್ಞಗಳು ವಿಧಿಪೂರ್ವಕವಲ್ಲೆಂಬುದಕ್ಕೆ ಕಾರಣ ಹೇಳಿದ್ದು:—

अहं हि सर्वयज्ञानां भोक्ता च प्रभुरेव च ।
न तु मामभिजानंति तत्त्वेनातश्च्यवंति ते ॥ २४ ॥

ಅಂ—ನಾನು ಯಜ್ಞಗಳಿಗೆಲ್ಲ ಭೋಕ್ತೃ, ಪ್ರವರ್ತಕ, ಉದ್ದೇಶ್ಯ, ಎಂದು ಅವರಿಗೆ ನನ್ನ ಯಥಾರ್ಥಜ್ಞಾನವಿಲ್ಲ; ಅಂದರೆ ಅವರು ನಾನು ಸರ್ವೋತ್ತಮನೆಂದು ತಿಳಿದರೂ, ತಾವು ಮಾಡಿದ ಯಜ್ಞಾದಿಗಳಿಗೆ ನಾನು ವಿಷಯನಲ್ಲೆಂದು ನಿಜವಾಗಿ ತಿಳಿಯುವದಿಲ್ಲ. ಅಲ್ಲದೆ, ಚತುರ್ಮುಖ ಮುಂತಾದ ಅನ್ಯ ದೇವತೆಗಳು ನನ್ನ ಪರಿವಾರದವರೆಂದು ಅವರಿಗೆ ಯಥಾರ್ಥಜ್ಞಾನವಿಲ್ಲ. ಆದುದ ರಿಂದಲೇ ಅವರು ತಿರುತಿರುಗಿ ಸ್ವರ್ಗದಿಂದ ಚ್ಯುತರಾಗಿ ಮೃತ್ಯುಲೋಕಕ್ಕೆ ಇಳಿಯುವರು.

೨೫. ಫಲಭೇದಗಳನ್ನು ವಿಸ್ತರಿಸಿ ಹೇಳಿದ್ದು:—

यांति देवव्रता देवान्
पितॄन्यांति पितृव्रताः ।
भूतानि यांति भूतेज्या
यांति मद्याजिनोऽपि माम् ॥ २५ ॥

ಅಂ—ದೇವತೆಗಳನ್ನಾರಾಧಿಸುವವರು ದೇವತೆಗಳನ್ನೂ, ಪಿತೃಗಳನ್ನಾರಾಧಿಸುವವರು ಪಿತೃಗ ಳನ್ನೂ, ಭೂತಗಳನ್ನು ಆರಾಧಿಸುವವರು ಭೂತಗಳನ್ನೂ, ನನ್ನನ್ನು ಆರಾಧಿಸುವವರು ನನ್ನನ್ನೂ, ಹೊಂದುವರು. ಹೀಗೆ ಆರಾಧನೆಯ ಭೇದದಿಂದ ಫಲಭೇದ ಉಂಟು

೨೬. ಹಾಗಾದರೆ, ಅನ್ಯ ದೇವತೆಗಳ ಆರಾಧನೆಯಿಂದ ಅಲ್ಪಫಲ ದೊರೆತರೂ, ಅದು ಸುಲಭ ವಾದ್ದರಿಂದ ಅದೇ ಯೋಗ್ಯವು, ಆದರೆ ನೀನು ಮಹಾಮಹಿಮೆಯುಳ್ಳವನಾದ್ದರಿಂದ ನಿನ್ನನ್ನು ಆರಾಧಿ ಸುವದು ಅಶಕ್ತರಿಗೆ ಶಕ್ಯವಲ್ಲ ಎಂಬುದಕ್ಕೆ ಉತ್ತರ:—

पत्रं पुष्पं फलं तोयं यो मे भक्त्या प्रयच्छति ।
तदहं भक्त्युपहृतमश्नामि प्रयतात्मनः ॥ २६ ॥

ಅಂ—ನಿಷಿದ್ಧವಲ್ಲದ ಪತ್ರ, ಪುಷ್ಪ, ಫಲ, ನೀರು, ಮುಂತಾದವುಗಳನ್ನು ವೈರಾಗ್ಯದಿಂದಲೂ, ಭಕ್ತಿಯಿಂದಲೂ, ಸಮರ್ಪಿಸಿದವರ ಭಕ್ತಿಗೆ ಮೆಚ್ಚುವೆ; ಹೊರ್ತು ದ್ರವ್ಯಾರ್ಪಣೆಗಲ್ಲ.

೨೭. ಭಕ್ತಿಯಿಂದ ಅರ್ಪಿಸಿದ್ದು ಅಲ್ಪವಾದರೂ, ನನಗೆ ತೃಪ್ತಿಯೇ. ಆದ್ದರಿಂದ, ಅರ್ಜುನಾ, ನೀನು ಕೂಡ ಹಾಗೇ ಮಾಡೆಂದು ಹೇಳಿದ್ದು:—

यत्करोषि यदश्नासि यज्जुहोषि ददासि यत् ।
यत्तपस्यासि कौंतेय तत्कुरुष्व मदर्पणम् ॥ २७ ॥

**ಅಂ**—ನೀನು ಮಾಡುವ ಕರ್ಮ, ಊಟ, ಹೋಮ, ದಾನ, ತಪ, ಇವುಗಳನ್ನೆಲ್ಲ ಭಕ್ತಿಪೂರ್ವಕವಾಗಿ ನನಗೇ ಅರ್ಪಿಸು. ಅದರಿಂದಲೇ ನಿನಗೆ ಶ್ರೇಯಸ್ಸುಂಟಾಗುವದು.

೨೮. ಮಾಡಿದ್ದನ್ನೆಲ್ಲ ಪರಮಾತ್ಮನಿಗೆ ಅರ್ಪಿಸಿದ್ದಕ್ಕೆ ಫಲವೇನೆಂದು ಕೇಳಿದರೆ, ಉತ್ತರ:—

शुभाशुभफलैरेवं मोक्ष्यसे कर्मबंधनैः ।
संन्यासयोगयुक्तात्मा विमुक्तो मामुपैष्यसि ॥ २८ ॥

**ಅಂ**—ಅರ್ಜುನಾ, ನೀನು ಮಾಡಿದ್ದನ್ನೆಲ್ಲ ನನಗೇ ಭಕ್ತಿಯಿಂದ ಅರ್ಪಿಸಿದರೆ, ಶುಭಾಶುಭ ಫಲಗಳೆಂಬ ಕರ್ಮಬಂಧನೆಯಿಂದ ಮುಕ್ತನಾಗುವಿ. ಮಾಡಿದ ಕರ್ಮ-ಫಲಾಸಕ್ತಿತ್ಯಾಗ, ವಿಹಿತ ಕರ್ಮಾಚರಣೆ, ಇವುಗಳಿಂದ ಯುಕ್ತನಾಗಿ ಪ್ರಕೃತಿಯ ಬಂಧನವನ್ನು ನಾಶಗೊಳಿಸಿ ಕಡೆಗೆ ನನ್ನನ್ನು ಹೊಂದುವಿ.

೨೯. ಹಿಂದೆ ೨೬ನೆಯ ಶ್ಲೋಕದಲ್ಲಿ 'ಭಕ್ತಿಯಿಂದ ಅರ್ಪಿಸಿದ್ದನ್ನು ಸ್ವೀಕರಿಸುವಿ' ಎಂದು ಹೇಳಿದ್ದರಿಂದ, ನೀನು ಭಕ್ತನಿಗೆ ಪ್ರಿಯನಾದಂತಾಯಿತು. ಅಂದಬಳಿಕ, ದ್ವೇಷಿಗಳಿಗೆ ಅಪ್ರಿಯನೇ ಸರಿ. ಹೀಗಿದ್ದ ಮೇಲೆ, ಭಕ್ತರಲ್ಲಿಯೂ, ದ್ವೇಷಿಗಳಲ್ಲಿಯೂ, ಕ್ರಮದಿಂದ ಸ್ನೇಹದ್ವೇಷಗಳ ಮೂಲಕ ಅಲ್ಪಭಕ್ತನಿಗೆ ಹೆಚ್ಚು ಸುಖಫಲವನ್ನೂ, ಅಲ್ಪದ್ವೇಷಿಗೆ ಹೆಚ್ಚಿನ ದುಃಖಫಲವನ್ನೂ, ಕೊಡುವಿ ಎಂದು ಹೇಳಿದಂತಾಯಿತು. ಇಂಥ ಸ್ಥಿತಿಯು ರಾಜಾದಿಗಳಲ್ಲಿ ಕೂಡ ಕಂಡಿದೆ. ಆದ್ದರಿಂದ ನಿನಗೆ ವೈಷಮ್ಯ-ನೈರ್ಘೃಣ್ಯ ದೋಷಗಳು ತಗಲುವದಿಲ್ಲೇ ಎಂದು ಕೇಳಿದ್ದಕ್ಕೆ ಉತ್ತರ:—

समोऽहं सर्वभूतेषु न मे द्वेष्योऽस्ति न प्रियः ।
ये भजंति तु मां भक्त्या मयि ते तेषु चाप्यहम् ॥ २९ ॥

**ಅಂ**—ನಾನು ಎಲ್ಲ ಪ್ರಾಣಿಗಳಿಗ ಸಮನಾದುದರಿಂದ ನನಗೆ ವೈಷಮ್ಯವಿಲ್ಲ; ಏಕೆಂದರೆ, ಪ್ರಾಣಿಗಳಲ್ಲಿರುವ ನನ್ನ ವಿಷಯಕ ದ್ವೇಷಕ್ಕಿಂತ ನನಗೆ ಹೆಚ್ಚಿನ ದ್ವೇಷವಿಲ್ಲ. ಅದರಂತೆ, ಅವನು ತೋರಿಸಿದ ಭಕ್ತಿಗಿಂತ ಹೆಚ್ಚಿನ ಭಕ್ತಿಯು (ಪ್ರಿಯವು) ಇಲ್ಲ; ಆದರೆ, ಅವರವರ ದ್ವೇಷ-ಭಕ್ತಿಗಳಿಗನುಸರಿಸಿಯೇ ಫಲಕೊಡುವೆನು; ಆದ್ದರಿಂದಲೇ ಸಮನೆನಿಸುವೆ. ಇನ್ನು, ಯಮನು ಪ್ರಾಣಿಗಳು ಮಾಡುವ ಕರ್ಮಕ್ಕನುಗುಣವಾಗಿ ದಂಡಿಸುವದರಿಂದ ವಿಷಮನಾಗನು. ಹಾಗೆ ತಿಳಿಯದಿದ್ದರೆ, ಯಮಧರ್ಮನು ಸಮ ಆಚಾರವುಳ್ಳವನೆಂಬುವದಕ್ಕೆ ವಿರೋಧ ಬರುವದು. ಈ ಅಭಿಪ್ರಾಯದಿಂದ ಭಕ್ತಿಯುಳ್ಳವರಿಗೆ ದೊರಕುವ ಫಲಹೇಳಿದ್ದು:— ಹೇಗಂದರೆ, ಭಕ್ತಿಯಿಂದ ನನ್ನನ್ನು ಆರಾಧಿಸುವವರಿಗೆ ತಾವು ನನಗೆ ಆಧೀನರೆಂಬುವ ಜ್ಞಾನ ಹುಟ್ಟುವದು. ನಾನಾದರೂ ಅವರಿಗೆ ವಶನೆಂದು ತಿಳಿ. ಅಥವಾ ಮೊದಲನೆಯ ಅರ್ಧ ಶ್ಲೋಕದಲ್ಲಿ 'ಭಕ್ತ ಮತ್ತು ಅಭಕ್ತ' ಹೀಗೆ ಎರಡು ಪದಗಳನ್ನು ಅಧ್ಯಾಹಾರ ಮಾಡಬೇಕು. ಅದರಿಂದ ಸಕಲ ಪ್ರಾಣಿಗಳಲ್ಲಿ ಭಕ್ತನಾದವನ ಕುರಿತು ನನ್ನ ದ್ವೇಷವಿಲ್ಲ, ಭಕ್ತನಾಗ

ಷವನು ನನಗೆ ಪ್ರಿಯನಲ್ಲ. ಆದ್ದರಿಂದ ನಾನು ಸಮನೆನಿಸುವೆ. ಇನ್ನು, ಭಕ್ತರಲ್ಲಿ ನಾನು ದ್ವೇಷವನ್ನೂ, ಅಭಕ್ತರಲ್ಲಿ ಪ್ರೀತಿಯನ್ನೂ, ಮಾಡಿದರೇನೇ ವಿಷಮನಾಗಬಹುದು; ಹಾಗಿರದೆ, ಭಕ್ತಿಗನುಸರಿಸಿಯೇ ಫಲಕೊಡುವೆನೆಂದು ಹೇಳಿದ್ದು — ನನ್ನ ಕೂಡ ಪ್ರೀತಿಯಿಂದ ಆಚರಿಸುವವರ ಸಂಗಡ ನಾನು ಪ್ರೀತಿಯಿಂದಿರುವೆ.

೩೦. ಭಕ್ತಿಯನ್ನು ಹೊಗಳಿದ್ದು —

अपि चेत्सुदुराचरो भजते मामनन्यभाक् ।
साधुरेव स मंतव्यः सम्यग्व्यवसितो हि सः ॥ ३० ॥

ಅಂ—ಪರಮಾತ್ಮನ ಭಕ್ತನೆಂದರೆ ( ದೇವತಾಂಶ–ಋಷಿ ಮುಂತಾದವರು ) ತನ್ನಲ್ಲಿದ್ದ ಹೆಚ್ಚಿನ ಪುಣ್ಯವು ನಾಶವಾಗಲೆಂದು ಅದೃಷ್ಟಕ್ಕನುಸರಿಸಿ ಅತಿದುರಾಚಾರಿಯಾದರೂ, ಅನ್ಯ ದೇವತೆಗಳನ್ನು ಸ್ವತಂತ್ರವಾಗಿ ಭಜಿಸದೆ, ನನ್ನನ್ನೇ ಆರಾಧಿಸುವದರಿಂದ ಅವನು ಸಾಧುವೇ ಸರಿ. (ಏಕೆಂದರೆ, ಅವನು ಚಂದ್ರ–ಸೂರ್ಯಾದಿಗಳ ಅಂಶವುಳ್ಳವನು). ಅವನು ಪರಮಾತ್ಮನ ತತ್ವದ ವಿಷಯಕ್ಕೆ ಯಥಾರ್ಥಜ್ಞಾನವುಳ್ಳವನು.

೩೧. ಭಗವದ್ಭಕ್ತನು ಪರಮಾತ್ಮನ ತತ್ವದ ಯಥಾರ್ಥಜ್ಞಾನವುಳ್ಳವನಾದರೂ, ಒಳ್ಳೇ ದುರಾಚಾರಿಯಾದುದರಿಂದ ಅವನು ಸಾಧು ಎಂದು ಹೇಳಿದ್ದು ಯೋಗ್ಯವೇ ಎಂಬುದಕ್ಕೆ ಉತ್ತರ —

क्षिप्रं भवति धर्मात्मा शश्वच्छांतिं निगच्छति ।
कौंतेय प्रतिजानीहि न मे भक्तः प्रणश्यति ॥ ३१ ॥

ಅಂ—ಕುಂತಿತನಯಾ, ಹಿಂದಿನ ಶ್ಲೋಕದಲ್ಲಿ ಹೇಳಿದಂಥ ಭಕ್ತನು ದುರಾಚಾರಿಯಾದರೂ, ನನ್ನ ತತ್ವದಲ್ಲಿ ಯಥಾರ್ಥಜ್ಞಾನವುಳ್ಳವನಾದ್ದರಿಂದ ಅಕ್ಷಯ ಮೋಕ್ಷಫಲಹೊಂದುವನು. ನನ್ನ ಭಕ್ತನು ದುರಾಚಾರಿಯಾದರೂ ನರಕ ಮುಂತಾದ ಅನರ್ಥಕ್ಕೆ ಗುರಿಯಾಗನು. ಈ ವಿಷಯವು ದೇವತೆ, ಅವರ ಅಂಶವುಳ್ಳ ಋಷಿ, ಮುಂತಾದವರ ವಿಷಯವೆಂದು ತಿಳಿಯಬೇಕು.

೩೨. ಕೈಮುತ್ಯನ್ಯಾಯದಿಂದ ಭಕ್ತಿಯ ಮಹಿಮೆ ವರ್ಣಿಸಿದ್ದು —

मां हि पार्थ व्यपाश्रित्य
येऽपि स्युः पापयोनयः ।
स्त्रियो वैश्यास्तथा शूद्रा-
स्तेऽपि यांति परां गतिम् ॥ ३२ ॥

ಅಂ—ಪಾರ್ಥಾ, ತಾವು ಉತ್ತಮವರ್ಣದವರಾದರೂ, ಪಾಪಕರ್ಮ ಮೂಲಕ ಅಂಥ ಯೋನಿಗಳಲ್ಲಿ ಜನ್ಮಹೊಂದಿದವರೆಂದರೆ, ಪುರುಷನಾದರೂ ಸ್ತ್ರೀಯಾಗಿ ಹುಟ್ಟಿದವರು, (ಸುದ್ಯುಮ್ನನಿಗೆ ಇಳೆಯ ಸ್ತ್ರೀಜನ್ಮಪ್ರಾಪ್ತಿ) ಬ್ರಾಹ್ಮಣನಾದರೂ ಪಾಪಮೂಲಕ ವೈಶ್ಯ ಅಥವಾ ಶೂದ್ರಯೋನಿಯಲ್ಲಿ ಹುಟ್ಟಿದವರು, ನನ್ನನ್ನೇ ಆಶ್ರಯಿಸಿ ವರ್ತಿಸುವರು; ಅಂದರೆ ನನ್ನಲ್ಲಿ ಭಕ್ತಿಯುಳ್ಳವರಾಗಿ ಅವರು ಕೂಡ ಮೋಕ್ಷವನ್ನೈದುವರು.

೩೩.

**किं पुनर्ब्राह्मणाः पुण्या भक्ता राजर्षयस्तथा ।**
**अनित्यमसुखं लोकमिमं प्राप्य भजस्व माम् ॥ ३३ ॥**

**ಅಂ—**ಶೂದ್ರಾದಿ ಹೀನವರ್ಣದವರಾದರೂ, ಪುಣ್ಯಕರ್ಮ ಮೂಲಕ ಬ್ರಾಹ್ಮಣ, ರಾಜರ್ಷಿ, ಮುಂತಾದ ಕುಲಗಳಲ್ಲಿ ಜನ್ಮಹೊಂದಿದ ಭಕ್ತರು ಉತ್ತಮ ಗತಿಯನ್ನು ಹೊಂದುವರು. ಅಂದಬಳಿಕ ನಿಮಿತ್ತವಿಲ್ಲದೆ ಸ್ವರೂಪದಿಂದ ಸ್ತ್ರೀ, ವೈಶ್ಯ, ಶೂದ್ರರಾದ ನನ್ನ ಭಕ್ತರು ಉತ್ತಮ ಗತಿಯನ್ನು ಹೊಂದುವರೆಂದು ಹೇಳಲಿಕ್ಕೆಬೇಕೆ ? ಇಲ್ಲಿ ವಿವೇಕವೇನಂದರೆ, ಉಚ್ಚವರ್ಣದವರಿಗೆ ಪಾಪಮೂಲಕ ಹೀನಯೋನಿಗಳ ಪ್ರಾಪ್ತಿಯಾದರೂ, ಹೀನವರ್ಣದವರಿಗೆ ಪುಣ್ಯಕರ್ಮ ಮೂಲಕ ಉಚ್ಚಯೋನಿಯು ಜನ್ಮಬಂದರೂ, ಅವರು ನನ್ನನ್ನೇ ಆಶ್ರಯಿಸಿ ನನಗೆ ಭಕ್ತರಾದ್ದರಿಂದ ಉತ್ತಮಗತಿ ಹೊಂದುವರು. ಸ್ವರೂಪದಿಂದ ಬ್ರಾಹ್ಮಣ, ಶೂದ್ರ, ಸ್ತ್ರೀಯಾದಿ ಭಕ್ತರಿಗೆ ಅಂಥ ಗತಿಸಿಗುವದೆಂದು ಹೇಳುವ ಕಾರಣ ವಿಲ್ಲ. ಮೇಲೆ, ದೃಷ್ಟಾಂತದಲ್ಲಿ ತೋರಿಸಿದಂತೆ, ಪುರುಷರು ಶಾಪಮೂಲಕ ( ನಿಮಿತ್ತಮೂಲಕ ) ಸ್ತ್ರೀಯರಾಗಬಹುದು; ಆದರೆ, ಸ್ತ್ರೀಯರು ಯಾವುದೇ ಕಾರಣದಿಂದ ಪುರುಷರಾಗರು. ಈ ಬಗ್ಗೆ ಸ್ಮೃತಿವಚನ ಪ್ರಮಾಣ. ಆದ್ದರಿಂದ, ಸಾಧನಗಳಲ್ಲಿ ಭಕ್ತಿಯು ಉತ್ತಮವಾದ್ದರಿಂದ ಅನಿತ್ಯ ಸುಖವುಳ್ಳ ಮತ್ತು ಭಕ್ತಿಗೆ ಸಾಧನವಾದ ಈ ದೇಹವನ್ನು ಅಥವಾ ಭೂಲೋಕವನ್ನು ಪಡೆದು ಶೀಘ್ರವಾಗಿ ನನ್ನನ್ನು ಆರಾಧಿಸು

೩೪. ಪರಮಾತ್ಮನನ್ನು ಆರಾಧಿಸುವ ಪ್ರಕಾರವನ್ನು ಹೇಳಿ, ಅದಕ್ಕೆ ದೊರಕುವ ಫಲವನ್ನು ನಿರೂಪಿಸಿದ್ದು:—

**मन्मना भवमद्भक्तो मद्याजी मां नमस्कुरु ।**
**मामेवैष्यसि युक्त्वैवमात्मानं मत्परायणः ॥ ३४ ॥**

**ಅಂ—**ಅರ್ಜುನಾ, ನನ್ನಲ್ಲಿ ಮನನೆಲೆಯಾಗಿಟ್ಟು, ನನ್ನ ಭಕ್ತನಾಗಿ, ನನ್ನನ್ನು ಆರಾಧಿಸುತ್ತ ನನ್ನನ್ನೇ ನಮಸ್ಕರಿಸು; ಅಲ್ಲದೆ, ನನ್ನ ಆಶ್ರಯದಿಂದಲೇ ನನ್ನಲ್ಲಿ ಮನನೆಟ್ಟವನಾದರೆ, ನನ್ನನ್ನು ಹೊಂದುವಿ.

**इति श्रीमद्भगवद्गीतासूपनिषत्सु ब्रह्मविद्यायां योगशास्त्रे श्रीकृष्णार्जुनसंवादे**
**राजविद्याराजगुह्ययोगो नाम नवमोऽध्याय. ॥ ९ ॥**

**ಅಂ—**ಈ ಮೇರೆಗೆ, ಷಡ್ಗುಣೈಶ್ವರ್ಯಸಂಪನ್ನನಾದ ಪರಮಾತ್ಮನಿಂದ ಮನೋಹರ,
ಅಲಂಕಾರಿಕ ಮತ್ತು ಇಷ್ಟಶಬ್ದಗಳಿಂದ ಉಪದೇಶಿಸಲ್ಪಟ್ಟದ್ದೂ ಉಪನಿಷತ್ತಿಗೆ
ಸಮಾನವೂ ಪರಬ್ರಹ್ಮವಿಷಯಕ ವಿದ್ಯೆಯೂ ಎನಿಸುವ ಮತ್ತು ಕರ್ಮ
ಯೋಗಾದಿಗಳನ್ನು ಪ್ರತಿಪಾದಿಸುವ, ಶ್ರೀಕೃಷ್ಣನಿಗೂ ಅರ್ಜುನನಿಗೂ
ನಡೆದ ಸಂವಾದರೂಪವಾದ ಗೀತಾಶಾಸ್ತ್ರದಲ್ಲಿಯ
**ರಾಜವಿದ್ಯಾ ರಾಜಗುಹ್ಯಯೋಗ** ಎಂಬ ಒಂಭತ್ತನೆಯ
ಅಧ್ಯಾಯವು ಮುಗಿಯಿತು.



# ೧೦ನೆಯ ಅಧ್ಯಾಯವು.



೧. ಆರನೆಯ ಅಧ್ಯಾಯದಲ್ಲಿ ಧ್ಯಾನಯೋಗವು ನಿರೂಪಿಸಲಾಯಿತು. ಒಂಭತ್ತನೆಯ ಅಧ್ಯಾಯದ ೩೪ನೆಯ ಶ್ಲೋಕದಲ್ಲಿ ಪರಮಾತ್ಮನ ಧ್ಯಾನದ ಸ್ಮರಣೆ ಮಾಡಲ್ಪಟ್ಟಿತು. ಇನ್ನು, ಅಂತಹ ಧ್ಯಾನಕ್ಕೆ ಧ್ಯೇಯವಸ್ತು ಒಂದು ಅವಶ್ಯ ಬೇಕಷ್ಟೇ ! ಧ್ಯಾನಕ್ಕೆ ವಿಷಯವಿಲ್ಲದೆ ಧ್ಯಾನವೇ ಸಂಭವಿಸದು. ಆದುದರಿಂದ, ಧ್ಯಾನಕ್ಕಾಗಿ ಪರಮಾತ್ಮನ ವಿಭೂತಿರೂಪಗಳು ಮುಂದಿನ ೧೯ನೆಯ ಶ್ಲೋಕದಿಂದ ಮುಖ್ಯವಾಗಿ ವರ್ಣಿಸಲಾಗುವದು. ಮೊದಲು, ಮಹರ್ಷಿ ಮುಂತಾದವರಲ್ಲಿರುವ ಬುದ್ಧಿಯ ಸಾಮರ್ಥ್ಯವು ಅತಿಶಯವಾಗಿರುವಮೂಲಕ ಅಂತಹ ಬುದ್ಧಿಯನ್ನು ಹುಟ್ಟಿಸಲು ಪರಮಾತ್ಮನೇ ಕಾರಣನೆಂದು ವಿವರಿಸಲ್ಪಡುವದು.

ಹಿಂದೆ (೫–೨೯) ನೆಯ ಶ್ಲೋಕದಲ್ಲಿ ಧ್ಯೇಯವಸ್ತುವು ವರ್ಣಿಸಲ್ಪಟ್ಟಾಗ್ಯೂ, ವಿಶಿಷ್ಟ ಅಧಿಕಾರಿಗಳಿಗೆ ವಿಶಿಷ್ಟ ಅಧಿಕಾರಿಗಳು ಪರಮಾತ್ಮನ ವಿಭೂತಿರೂಪಗಳ ಉಪಾಸನೆಯನ್ನೇ ಮಾಡಬೇಕೆಂದು ಇಲ್ಲಿ ಹೇಳಿ ಇದೆ. ಹಿಂದೆ ಹೇಳಿದ ವಿಶೇಷ ಕಾರಣವು:ಕೂಡ ವಿಶಿಷ್ಟ ಅಧಿಕಾರಿಗಳ ಧ್ಯಾನಕ್ಕಾಗಿ ಇರುವದೆಂದು ಇಲ್ಲಿ ಮತ್ತೆ ಹೇಳಲಾಗಿದೆ. ಹಾಗಾದರೆ, ವಿಭೂತಿರೂಪಗಳನ್ನು ಕೂಡ (೭–೮, ೯–೧೬) ನೆಯ ಶ್ಲೋಕಗಳಲ್ಲಿ ಹೇಳಿಲ್ಲವೇ, ಎಂದು ಕೇಳಿದರೆ, ಅಹುದು, ಆದಾಗ್ಯೂ ಅವುಗಳನ್ನಿಲ್ಲಿ ವಿಸ್ತಾರವಾಗಿ ಹೇಳುವದರಿಂದ ದೋಷವಿಲ್ಲ. ಆದ್ದರಿಂದಲೇ ಇದಕ್ಕೆ 'ವಿಭೂತಿ' ಅಧ್ಯಾಯವೆಂದು ಹೆಸರು. 'ವಿಭೂತಿ' ಶಬ್ದದ ಅರ್ಥವು ಮುಂದೆ ನಿರೂಪಿಸಲಾಗುವದು. ಅರ್ಜುನನಿಗೆ ಕೇಳಲಿಕ್ಕೆ ಯೋಗ್ಯತೆಯುಂಟೆಂದು ತೋರಿಸಲು ಶ್ರೀಕೃಷ್ಣನು ನುಡಿದದ್ದು:—

**भूय एव महाबाहो शृणु मे परमं वचः ।**
**यत्तेऽहं प्रीयमाणाय वक्ष्यामि हितकाम्यया ॥ १ ॥**

ಅಂ—ಮಹಾಬಾಹುಗಳುಳ್ಳ ಅರ್ಜುನಾ, ನನ್ನ ಮೈಮೆಯನ್ನು ವರ್ಣಿಸುವ ವಚನವನ್ನು ಮತ್ತೆ ಕೇಳಿ, ಅದರಲ್ಲಿ ನಂಬಿಗೆಯನ್ನಿಡು ನೀನು. ನನಗೆ ಪ್ರೀತಿ ವಿಷಯನಾದ್ದರಿಂದ ನಿನಗೆ ಹಿತವಾಗಲೆಂದು ಆ ವಚನವನ್ನು ಹೇಳುವೆನು. ಇದರಿಂದ ಅರ್ಜುನನಿಗೆ ಕೇಳುವ ಯೋಗ್ಯತೆಯುಂಟೆಂದು ಸೂಚಿತವಾಯಿತು.

೨. ಶ್ರೀಕೃಷ್ಣನು ತನ್ನ ಮಹಿಮೆಯನ್ನು ಬಣ್ಣಿಸಿದ್ದು:—

**न मे विदुः सुरगणाः प्रभवं न महर्षयः ।**
**अहमादिर्हि देवानां महर्षीणां च सर्वशः ॥ २ ॥**

ಅಂ—ದೇವತೆಗಳೂ, ಮಹರ್ಷಿಗಳೂ, ನನ್ನ ಮಹಿಮೆಯನ್ನರಿಯರು; ಅಂದರೆ, ಜಗದ ಹುಟ್ಟು ನನ್ನಿಂದಾಗುವದೆಂಬುದು ಅವರಿಗೆ ಗೊತ್ತಿಲ್ಲ. ದೇವತೆ, ಮುಂತಾದ ಜಗತ್ತಿನ ಉತ್ಪತ್ತಿಯು ಪರಮಾತ್ಮನಿಗೆ ಅಧೀನವೆಂದು ದೇವತೆಗಳಿಗೇ ತಿಳಿಯದ ಬಳಿಕ ಅನ್ಯರಿಗೆ ತಿಳಿಯಲು ಸಾಧ್ಯವೇ ! ಅಥವಾ

ಅವರು ನನ್ನ ಹುಟ್ಟನ್ನು ಅರಿಯರು. ಹಾಗಾದರೆ, ಪರಮಾತ್ಮನ ಮಹಿಮೆಯಂತೆಯೂ, ಜಗತ್ತಿನ ಹುಟ್ಟಿನಂತೆಯೂ, ಪರಮಾತ್ಮನಿಗೆ ಇರುವ ಉತ್ಪತ್ತಿಯನ್ನು ಅವರು ತಿಳಿದಿಲ್ಲೇ ಎಂದು ಸಂದೇಹ ಗೊಂಡರೆ, ಜಗದ ಉತ್ಪತ್ತಿಗಳಿದ್ದಂತೆ, ಆತನಿಗೆ ಸರ್ವಥಾ ಉತ್ಪತ್ತಿಯೇ ಇಲ್ಲದ್ದರಿಂದ ಆತನ ಮಹಿಮೆಯನ್ನು ಅರಿಯರು. ನನಗೆ ಉತ್ಪತ್ತಿ ಅದೇಕಿಲ್ಲವೆಂದು ಪ್ರಶ್ನಮಾಡಿದರೆ, ದೇವತೆ, ಮನುಷ್ಯ, ಉಪಲಕ್ಷಣದಿಂದ ಎಲ್ಲ ಜಗತ್ತು, ಇವುಗಳಿಗೆ ನಾನೇ ಆದಿಕಾರಣನಾದ್ದರಿಂದ ನನಗೆ ಹುಟ್ಟು ಇಲ್ಲ. ಸೃಷ್ಟಿಗೆ ನಾನೇ ಜನಕನಾದ್ದರಿಂದ ನನಗೆ ಅನ್ಯ ಜನಕನಿಲ್ಲ. ಏಕೆಂದರೆ, ಅಸತ್ವಕ್ಕೆ ಜನಕತ್ವವು ಸಲ್ಲದು. ಅದರಂತೆಯೇ ಇಲ್ಲಿ ಆತ್ಮಾಶ್ರಯ (ತನ್ನಿಂದ ತಾನೇ ಹುಟ್ಟುವ) ದೋಷವು ಬರುವ ದರಿಂದ ನನ್ನಿಂದಲೇ ನನ್ನ ಉತ್ಪತ್ತಿ ಎಂಬುದು ಅಸಂಭವ. ಈ ವಿಷಯಕ್ಕೆ (೨-೩-೯) ನೆಯ ಸೂತ್ರವು ಪ್ರಮಾಣ.

೩. ತನ್ನ ಜ್ಞಾನದಿಂದ ಮೋಕ್ಷಫಲ ಉಂಟಾಗುವ ಮಹಿಮೆಯನ್ನು ಶ್ರೀಕೃಷ್ಣನು ಹೇಳಿದ್ದು:–

**यो मामजमनादिं च वेत्ति लोकमहेश्वरम् ।**
**असंमूढः स मर्त्येषु सर्वपापैः प्रमुच्यते ॥ ३ ॥**

ಅಂ—ನನಗೆ ಹುಟ್ಟಿಲ್ಲ; ನಾನು ಸರ್ವಚೇಷ್ಟಕನು, ಅಥವಾ ಮುಖ್ಯಪ್ರಾಣನ ಉತ್ಪತ್ತಿಗೆ ಕಾರ ಣನು, ಲೋಕಗಳಿಗೆ ಮಹಾ ಸ್ವಾಮಿಯು, ಎಂದು ತಿಳಿಯುವ ಅಧಿಕಾರಿಯು ಪ್ರಾಣಿಸಮೂಹದಲ್ಲಿ ಭ್ರಾಂತಿಯುಳಿದವನು; ಅವನ ಪಾಪಗಳೆಲ್ಲ ನಾಶವಾಗುವವು.

೪–೫. ಹೀಗೆ ಶ್ರೀಕೃಷ್ಣನು ಮುಕ್ತಿಗೆ ಕಾರಣವಾದ ಜ್ಞಾನಕ್ಕೆ ಪರಮಾತ್ಮನು ವಿಷಯನೆಂಬ ಮಹಿಮೆಯನ್ನು ಹೇಳಿ, ಬುದ್ಧ್ಯಾದಿಗಳು ಕೂಡ ಅವನಿಂದಲೇ ದೊರೆಯುವವೆಂಬ ಮಹಿಮೆಯನ್ನು ವಿಸ್ತರಿಸಿದ್ದು:—

**बुद्धिर्ज्ञानमसंमोहः क्षमा सत्यं दमः शमः ।**
**सुखं दुःखं भवो भावो भयं चाभयमेव च ॥ ४ ॥**

**अहिंसा समता तुष्टिस्तपो दानं यशोऽयशः ।**
**भवंति भावा भूतानां मत्त एव पृथग्विधाः ॥ ५ ॥**

ಅಂ—ಬುದ್ಧಿ, ಅಥವಾ ಕಾರ್ಯಾಕಾರ್ಯನಿಶ್ಚಯ, ಸಾಮಾನ್ಯಜ್ಞಾನ, ಅಕಾರ್ಯದಲ್ಲಿ ಇಚ್ಛೆ ಯಾಗದಿರುವದು, ಅಥವಾ ಮಿಥ್ಯಾಜ್ಞಾನವಾಗದಿರೋಣ, ಕ್ರೋಧವಿಲ್ಲದ್ದರಿಂದ ಅಪಕಾರ ಮಾಡಿದವನಿಗೆ ಅಪಕಾರಮಾಡದಿರುವದು, ಯಥಾರ್ಥ ಜ್ಞಾನಪೂರ್ವಕ ಅನುಷ್ಠಾನ ಅಥವಾ ವಚನ, ಇಂದ್ರಿಯ ನಿಗ್ರಹ, ಪರಮಾತ್ಮನಲ್ಲಿ ಶ್ರದ್ಧೆ, ಸುಖದುಃಖಗಳು, ಉತ್ಪತ್ತಿ, ಸತ್ತಾ, ಭಯ—ಅಭಯ, ಅನ್ಯರ ಪ್ರಾಣ ಹಿಂಸೆ ಮಾಡದಿರುವದು, ದ್ವಂದ್ವಗಳಿಂದ ನಿರ್ವಿಕಾರತ್ವ, ವಿಷಯಗಳಲ್ಲಿ ತೃಪ್ತಿ, ಬ್ರಹ್ಮಚರ್ಯ, ನ್ಯಾಯ ದಿಂದ ಸಂಪಾದಿಸಿದ ದ್ರವ್ಯದಾನವು, ಕೀರ್ತಿ, ಅಪಕೀರ್ತಿ, ಹೀಗೆ ವಿವಿಧ ಧರ್ಮಗಳು ಪ್ರಾಣಿಗಳಿಗೆ ಪರಮಾತ್ಮನಿಂದಲೇ ಪ್ರಾಪ್ತವಾಗುವವು.

೬. ಪ್ರಾಣಿಗಳಿಗೆ ಬೇಕಾದ ಬುದ್ಧ್ಯಾದಿ ಧರ್ಮಗಳಷ್ಟೇ ನನ್ನಿಂದ ಹುಟ್ಟುವವು ಹೀಗೇನಲ್ಲ; ಆದರೆ ಪ್ರಾಣಿಗಳ ಉತ್ಪತ್ತಿಯು ಕೂಡ ನನ್ನಿಂದಲೇ ಆಗುವದೆಂಬ ಬಗ್ಗೆ ಹೇಳಿದ್ದು·—

**महर्षयः सप्त पूर्वे चत्वारो मनवस्तथा ।**
**मद्भावा मानसा जाता येषां लोक इमाः प्रजाः ॥ ६ ॥**

ಅಂ—ಮೋಕ್ಷ ಧರ್ಮದಲ್ಲಿ ಹೇಳಿದ ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ, ಇವರಂಥ ಮಹಾಸಮರ್ಥರು ಮತ್ತು ಹಿಂದಿನ ಮನ್ವಂತರದಲ್ಲಾಗಿ ಹೋದ ಏಳು ಋಷಿಗಳು ಚತುರ್ಮುಖನ ಮಾನಸ ಪುತ್ರರೆಂದು ಹುಟ್ಟಿದ ಮೊದಲನೆಯ ನಾಲ್ವರೆಂದರೆ ಸ್ವಾಯಂಭುವ, ಸ್ವಾರೋಚಿಷ, ರೈವತ, ಉತ್ತಮ ಎಂಬ ಮನುಗಳು, ಅಥವಾ ವಿಪ್ರ, ಕ್ಷತ್ರಿಯ, ವೈಶ್ಯ, ಶೂದ್ರಭೇದಗಳಿಂದ ನಾಲ್ಕು ವಿಧವಾಗಿರುವ ಬ್ರಾಹ್ಮಣಾದಿ ನಾಲ್ಕುಬಗೆಯ ದೇವತೆಗಳು, ಲೋಕದಲ್ಲಿಯ ಪ್ರಜೆಗಳೆಂದರೆ, ಹಿಂದೆ ಹೇಳಿದ ಮನುಗಳ ಮಕ್ಕಳು, ಮೊಮ್ಮಕ್ಕಳು, ಇವರೆಲ್ಲರು ನನ್ನಿಂದಲೇ ಹುಟ್ಟಿರುವರು.

ವಿಂ ಅಂ—ಬೃಹದ್ಭಾಷ್ಯದ ಮೊದಲನೆಯ ಅಧ್ಯಾಯದ ನಾಲ್ಕನೆಯ ಅವ್ಯಾಕೃತ ಬ್ರಾಹ್ಮಣ ಭಾಗದಲ್ಲಿ "ಚತುರ್ಮುಖನು ಬ್ರಾಹ್ಮಣನಾದ್ದರಿಂದ ಪರಮಾತ್ಮನಿಂದ ಹುಟ್ಟಿದನು; ಮುಂದೆ, ಅವನಿಂದ ಕ್ಷತ್ರಿಯಕುಲ ಮೊದಲು ಆಯಿತು; ಅಂದರೆ, ವಾಯು, ರುದ್ರ, ಅನಂತ, ಗರುಡ, ಇಂದ್ರ, ಕಾಮ, ವರುಣ, ಸೋಮ, ಸೂರ್ಯ, ಯಮ, ಈ ಮೊದಲಾದ ಕ್ಷತ್ರಿಯ ದೇವತೆಗಳು ಬ್ರಹ್ಮನಿಂದ ನಿರ್ಮಿಸಲ್ಪಟ್ಟವು, ಅದರಂತೆಯೇ, ವಿವಸ್ವಾನ್, ಇಂದ್ರ, ವರುಣ, ವಿಷ್ಣು, ಇವರಿಂದ ದಿತಿಯ ಬೇರೆ ಮಕ್ಕಳಾದರು; ರುದ್ರನ ಹೊರ್ತು ಅನ್ಯ ರುದ್ರರು, ವಾಯುವಿನ ಹೊರ್ತು ಅನ್ಯ ವಾಯುಗಳು, ಅಗ್ನಿಯ ಹೊರ್ತು ವಸುಗಳು, ಇವರಿಗೆ ವೈಶ್ಯರೆನ್ನುವರು, ಮುಂದೆ, ಅಶ್ವಿನಿಕುಮಾರರು, ಪೃಥ್ವಿ, ಕಾಲ, ಮೃತ್ಯು, ಈ ಶೂದ್ರ ದೇವತೆಗಳು ಹುಟ್ಟಿದರು" ಎಂದು ಹೇಳಿಯಿದೆ. ಇಲ್ಲಿ ವಿವೇಕವೇನಂದರೆ, ವಿವಸ್ವಾನ್, ಇಂದ್ರ, ವರುಣರು ಕ್ಷತ್ರಿಯರಾದ್ದರಿಂದಲೂ, ವಿಷ್ಣುವಿಗೆ ವರ್ಣವಿಲ್ಲದ್ದರಿಂದಲೂ, ಅವರಿಂದ ಭಿನ್ನರಾದ ಎಂಟು ಮಂದಿ ಆದಿತ್ಯರು ಗ್ರಾಹ್ಯರೆಂದು ಹೇಳಲಾಗಿದೆ. ಅಗ್ನಿಯು ಬ್ರಾಹ್ಮಣನಾದ್ದರಿಂದ ಅವನಿಂದ ಅನ್ಯರೆಂದು ಹೇಳಿ ಇದೆ. ಅದುಕಾರಣ ಏಳು ವಸುಗಳೇ ವೈಶ್ಯರು. ರುದ್ರನು ಕ್ಷತ್ರಿಯನಾದ್ದರಿಂದ ಅವನಿಂದ ಅನ್ಯನೆಂದು ಹೇಳಲ್ಪಟ್ಟಿದೆ; ಇದರಿಂದ ರುದ್ರರು ೧೦ ಮಂದಿ ಎಂದು ತಿಳಿಯಬೇಕು. ಹಾಗಾದರೆ, ಭಾಗವತ (೩–೨೧–೪೯) ನೆಯ ಶ್ಲೋಕದಲ್ಲಿ ಸ್ವಾಯಂಭುವಾದಿ ಮನುಗಳು ಚತುರ್ಮುಖನಿಂದ ಹುಟ್ಟಿರುವರೆಂದು ಹೇಳಿದೆಯಷ್ಟೇ ! ಅಂದಬಳಿಕ ಇಲ್ಲಿ ಅವರು ಪರಮಾತ್ಮನಿಂದ ಹುಟ್ಟಿದ್ದು ಸರಿಯೇ ಎಂದು ಹೇಳಿದ್ದು ಯೋಗ್ಯವೇ ! ಎಂದು ಕೇಳಿದರೆ, ಚತುರ್ಮುಖನಲ್ಲಿ ಅಂತರ್ಗತನಾದ ನನ್ನಿಂದಲೇ ಹುಟ್ಟಿದ್ದು, ಚತುರ್ಮುಖನು ಅವರ ಉತ್ಪತ್ತಿಗೆ ದ್ವಾರಮಾತ್ರನು. ಹಾಗಾದರೆ, ಪ್ರಿಯವ್ರತಾದಿಗಳು ಬಾಲ್ಯದಲ್ಲಿದ್ದಾಗ, ಅವರಿಂದ ಹುಟ್ಟಿದವರಿಗೆ ಮನುಸಂಜ್ಞೆ ಇರುವದರಿಂದಲೂ, ಮಾನಸ ದೇಹವಿರುವಾಗ ಅಂತಹ ಸಂಜ್ಞೆ ಇಲ್ಲದ್ದರಿಂದಲೂ, ಅವರಿಗೆ ಮನುಗಳೆಂದು ಹೇಳುವದು ಯೋಗ್ಯವೇ ಎಂದು ಕೇಳಿದರೆ, ಮಾನಸ ದೇಹತ್ಯಾಗದಿಂದಲೇ ಪ್ರಿಯವ್ರತಾದಿಗಳಲ್ಲಿ ಹುಟ್ಟಿದವರಿಗೆ ಎರಡೂ ದೇಹಗಳ ಐಕ್ಯದಿಂದ ಅವರು ಮನುಗಳೆಂದು ಹೇಳುವದು ಯೋಗ್ಯವು.

೭. ಹಿಂದೆ ಹೇಳಿದ ಪರಮಾತ್ಮನ ಮಹಿಮೆಯ ಜ್ಞಾನಕ್ಕೆ ಫಲಹೇಳಿದ್ದು·—

**एतां विभूतिं योगं च मम यो वेत्ति तत्त्वतः ।**
**सोऽविकंपेन योगेन युज्यते नात्र संशयः ॥ ७ ॥**

ಅಂ—ಹಿಂದೆ ೨ನೆಯ ಶ್ಲೋಕದಲ್ಲಿ ಹೇಳಿದ, ದೇವತೆ ಮುಂತಾದವರಿಂದ ತಿಳಿಯಲಶಕ್ಯವಾದ ಮತ್ತು ಮುಂದೆ ಹೇಳುವ ನನ್ನ ವಿಭೂತಿ ರೂಪಗಳನ್ನೂ, ಬುದ್ಧಿ ಮುಂತಾದವುಗಳ ಉತ್ಪತ್ತಿಯನ್ನು ಹೇಳಿದ ನನ್ನ ಸಾಮರ್ಥ್ಯವನ್ನೂ, ಯಥಾರ್ಥವಾಗಿ ತಿಳಿದ ಅಧಿಕಾರಿಯು ನಿಶ್ಚಲವಾಗಿ ಧ್ಯಾನರೂಪ ಉಪಾಯದಿಂದ ಯುಕ್ತನಾಗುವನೆಂಬಲ್ಲಿ ಸಂದೇಹವಿಲ್ಲ.

೮.

अहं सर्वस्य प्रभवो मत्तः सर्वं प्रवर्तते ।
इति मत्वा भजंते मां बुधा भावसमन्विताः ॥ ८ ॥

ಅಂ—ಎಲ್ಲರಿಗೂ ನಾನೇ ಉತ್ಪಾದಕನು. ನನ್ನ ಪ್ರೇರಣೆಯಿಂದಲೇ ಎಲ್ಲರು ತಮಗೆ ಇಷ್ಟ ಪ್ರಾಪ್ತಿಯಾಗಲೆಂತಲೂ, ಅನಿಷ್ಟ ನಿವಾರಣೆಯಾಗಲೆಂತಲೂ, ಅವುಗಳಿಗೆ ಅನುಕೂಲವಾದ ವ್ಯಾಪಾರ ಗಳಲ್ಲಿ ಪ್ರವರ್ತಿಸುವರು. ಲಯವು ಕೂಡ ನನಗೆ ಆಧೀನವಾಗಿದೆ, ಎಂದು ತಿಳಿದು ಜ್ಞಾನಿಗಳು ಭಕ್ತಿ ಪೂರ್ವಕವಾಗಿ ನನ್ನನ್ನು ಭಜಿಸುವರು, ಅಂದರೆ ಪತ್ರಪುಷ್ಪಗಳಿಂದೆನ್ನ ಆರಾಧಿಸಿ ಧ್ಯಾನ ಮಾಡುವರು. ಇಲ್ಲಿ ವಿವೇಕವೇನಂದರೆ, ಶ್ಲೋಕದ ಪೂರ್ವಾರ್ಧದಲ್ಲಿ 'ನನ್ನನ್ನು' ಎಂಬ ಅರ್ಥವು ಸಿದ್ಧವಾಗುವದರಿಂದ ಉತ್ತರಾರ್ಧದಲ್ಲಿ ಮತ್ತೆ 'ನನ್ನನ್ನು' ಎಂದು ಹೇಳಿದ್ದರಿಂದ "ಜೀವೇಶ್ವರರಿಗೆ ಐಕ್ಯವಿದ್ದು, ಜೀವವೇ ಎಲ್ಲಕ್ಕೂ ಉತ್ಪಾದಕವೆಂದು ತಿಳಿದು ಭಜಿಸುವರೆಂದು" ಬರುವ ಸಂದೇಹವು ದೂರಾಯಿತು.

೯. ಪರಮಾತ್ಮನನ್ನು ಜ್ಞಾನಿಗಳು ಆರಾಧಿಸುವ ಬಗೆಯನ್ನು ಮರಳಿ ಹೇಳಿದ್ದು.—

मच्चित्ता मद्गतप्राणा बोधयंतः परस्परम् ।
कथयंतश्च मां नित्यं तुष्यंति च रमंति च ॥ ९ ॥

ಅಂ—ನನ್ನಲ್ಲಿಯೇ ಮನಸ್ಸನ್ನು ಸ್ಥಿರಗೊಳಿಸಿ, ನನ್ನ ಆರಾಧನೆಗಾಗಿಯೇ ಕೆಲಸ ಮಾಡುತ್ತ, ಶಿಷ್ಯರನ್ನು ಕುರಿತು ನನ್ನ ಉದ್ದೇಶವಾಗಿಯೇ ಬೋಧಿಸುತ್ತ, ಯಾವಾಗಲೂ ನನ್ನ ಗುಣಕೀರ್ತನೆಯ ಲ್ಲಿಯೇ ಮುಳುಗಿರುವ ಜ್ಞಾನಿಗಳು ವಿಷಯಗಳಿಗೆ ಹಿಮ್ಮುಖರಾಗುವರು; ಏಕೆಂದರೆ ಅವರಿಗೆ ವಿಷ ಯಗಳಲ್ಲಿ ಆಸಕ್ತಿ ಇಲ್ಲದ್ದರಿಂದ ನನ್ನ ಸುಖದಲ್ಲಿಯೇ ರಮಿಸಿ ಈಸ್ಯಾಡುವರು.

೧೦.

तेषां सततयुक्तानां भजतां प्रीतिपूर्वकम् ।
ददामि बुद्धियोगं तं येन मामुपयांति ते ॥१०॥

ಅಂ—ಜ್ಞಾನಿಗಳು ಸದಾ ಸರ್ವಕಾಲದಲ್ಲಿ ನನ್ನಲ್ಲಿ ಮನನೆಟ್ಟವರಾಗಿ ಬಹು ಅಕ್ಕರತೆಯಿಂದ ನನ್ನನ್ನು ಆರಾಧಿಸುವ ಮೂಲಕ, ನಾನು ಅವರಿಗೆ ಮೋಕ್ಷಸಾಧಕವಾದ ಅಪರೋಕ್ಷಜ್ಞಾನವನ್ನು ದಯಪಾಲಿಸುವೆ, ಅದರಿಂದ ಅವರು ನನ್ನನ್ನು ಹೊಂದುವರು.

೧೧. ಹಾಗಾದರೆ, ಜ್ಞಾನಿಗಳಿಗೆ ಅನಾದಿ ಅಜ್ಞಾನ ಮೂಲಕ ಬಂಧನವಿರುವದರಿಂದ ಅವರು ಪರಮಾತ್ಮನನ್ನು ಹೊಂದುವ ಬಗೆ ಹೇಗೆಂದು ಸಂದೇಹಗೊಂಡರೆ, ಅದಕ್ಕೆ ಸಮಾಧಾನ ಹೇಳಿದ್ದು.—

तेषामेवानुकंपार्थमहमज्ञानजं तमः ।
नाशयाम्यात्मभावस्थो ज्ञानदीपेन भास्वता ॥ ११ ॥

ಅಂ—ಯಾವ ಫಲಾಪೇಕ್ಷೆಯೂ ಇಲ್ಲದೆ ಕೇವಲ ಜ್ಞಾನಿಗಳ ಅನುಗ್ರಹಕ್ಕಾಗಿಯೇ ಅವರ ಅಂತಃಕರಣದಲ್ಲಿ ಅಂತರ್ಗತನಾದ ನಾನು ಅಜ್ಞಾನದಿಂದ ಹುಟ್ಟಿದ ಸುಖದುಃಖಗಳೆಂಬ ಕಗ್ಗತ್ತಲೆಯನ್ನು ಅಜ್ಞಾನಕ್ಕೆ ವಿರೋಧಿಯಾದ ಜ್ಞಾನವೆಂಬ ದೀಪದಿಂದ ಹೋಗಲಾಡಿಸುವೆ.

೧೨–೧೩. ಈ ಬಗೆಯಾಗಿ ವಿಭೂತಿಯನ್ನೂ, ಯೋಗವನ್ನೂ, ಕೇಳಿ ಅವುಗಳನ್ನೇ ವಿಸ್ತಾರವಾಗಿ ಕೇಳಲಿಚ್ಛಿಸುವ ಅರ್ಜುನನು ಶ್ರೀಕೃಷ್ಣನನ್ನು ಸ್ತುತಿಸಿ ಮುಂದಿನ ಏಳು ಶ್ಲೋಕಗಳಿಂದ ಪ್ರಾರ್ಥಿಸಿದ್ದು —

अर्जुन उवाच ।

परं ब्रह्म परं धाम पवित्रं परमं भवान् ।
पुरुषं शाश्वतं दिव्यमादिदेवमजं विभुम् ॥ १२ ॥
आहुस्त्वामृषयः सर्वे देवर्षिर्नारदस्तथा ।
असितो देवलो व्यासः स्वयं चैव ब्रवीषि मे ॥ १३ ॥

ಅಂ—ಚತುರ್ಮುಖ, ರುದ್ರಾದಿ ಸಕಲ ದೇವತೆಗಳಿಗೆ ಸ್ವಾಮಿಯೇ, ನೀನು ಸರ್ವೋತ್ತಮನು, ಸಕಲ ಸದ್ಗುಣ ಪೂರ್ಣನು, ಉತ್ತಮಾಶ್ರಯನು, ಅತಿಪವಿತ್ರನು, ಪೂರ್ಣ ಷಡ್ಗುಣನು. ನೀನು ಐಶ್ವರ್ಯಸಂಪನ್ನನೂ, ನಿರ್ವಿಕಾರನೂ, ಲೋಕ ವಿಲಕ್ಷಣನೂ, ದೇವತೆಗಳಿಗೆ ಆದ್ಯನೂ, ಜನ್ಮಹೀನನೂ, ವಿವಿಧ ವಿಭೂತಿಗಳುಳ್ಳವನಾದ್ದರಿಂದ 'ವಿಭು' ಶಬ್ದವಾಚ್ಯನೂ, ಎಂದು ವಸಿಷ್ಠಾದಿ ಋಷಿಗಳೂ, ದೇವರ್ಷಿಯಾದ ನಾರದ, ಅಸಿತಾದಿಗಳೂ, ಹೇಳುವರು. ಹಾಗೆಯೇ ನೀನಾದರೂ, ಹಿಂದೆ ೮ನೆಯ ಶ್ಲೋಕದಲ್ಲಿ ಅವರೆಲ್ಲರ ಹುಟ್ಟಿಗೆ ನೀನೇ ಕಾರಣನೆಂತಲೂ ಸ್ವಮುಖೇನ ಹೇಳಿರುವಿ.

೧೪.

सर्वमेतदृतं मन्ये यन्मां वदसि केशव ।
न हि ते भगवन्व्यक्तिं विदुर्देवा न दानवाः ॥ १४ ॥

ಅಂ—ಕೇಶವನೇ, ನೀನಾಗಿ ಉಸುರಿದ ನಿನ್ನ ಮೈಮೆ ಎಲ್ಲವೂ ಸತ್ಯವೆಂದೇ ಭಾವಿಸುವೆ. ಷಡ್ಗುಣೈಶ್ವರ್ಯವಂತನೇ, ನಿನ್ನ ಸಾಮರ್ಥ್ಯದ ಹೆಗ್ಗಳಿಕೆಯನ್ನು ದೇವದಾನವರು ಅರಿಯರು. ಇಲ್ಲಿ ಹಿ ಶಬ್ದವು ಈ ಅರ್ಥಪ್ರಸಿದ್ಧಿಯನ್ನು ಸೂಚಿಸಲಿಕ್ಕೆ ಅದೆ.

೧೫. ದೇವತೆಗಳಿಗೂ ಕೂಡ ನಿನ್ನ ಜ್ಞಾನವು ಆಗದ್ದರಿಂದ ನಿನ್ನ ತಿಳಿದವರು ಯಾರೆಂದು ಕೇಳಿದ್ದಕ್ಕೆ ಉತ್ತರ—

स्वयमेवात्मनाऽऽत्मानं वेत्थ त्वं पुरुषोत्तम ।
भूतभावन भूतेश देवदेव जगत्पते ॥ १५ ॥

ಅಂ—ಪುರುಷೋತ್ತಮನೇ, ಸಕಲ ಪ್ರಾಣಿಗಳ ಉತ್ಪಾದಕ ನಿಯಾಮಕನೇ, ಜಗತ್ತಿಗೆ, ದೇವತೆಗಳಿಗೊಡೆಯನೇ, ಅನ್ಯರ ಅಪೇಕ್ಷೆಯಿಲ್ಲದೆ ನೀನು ನಿನ್ನ ಸಾಮರ್ಥ್ಯದಿಂದಲೇ ನಿನ್ನನ್ನು ತಿಳಿಯುವಿ; ಎಂದರೆ ನಿನ್ನ ಯಥಾರ್ಥಜ್ಞಾನವು ನಿನಗೇ ಉಂಟು ಹೊರ್ತು ಅನ್ಯರಿಗಿಲ್ಲ.

೧೬. ಅರ್ಜುನನು ಹೀಗೆ ಸ್ತುತಿಸಿ, ಅವನಿಗೆ ಪ್ರಾರ್ಥಿಸಿಕೊಂಡಿದ್ದು:—

वक्तुमर्हस्यशेषेण दिव्या ह्यात्मविभूतयः ।
याभिर्विभूतिभिर्लोकानिमांस्त्वं व्याप्य तिष्ठसि ॥ १६ ॥

ಅಂ—ಜಗದ್ವಿಲಕ್ಷಣವಾದ ನಿನ್ನ ವಿಭೂತಿಗಳನ್ನು ವಿವರವಾಗಿ ನನಗೆ ನಿರೂಪಿಸು. ಅವುಗಳನ್ನು ವಿವರಿಸಲು ನೀನೇ ಸಮರ್ಥ. ಆ ವಿಭೂತಿರೂಪಗಳಿಂದಲೇ ಈ ಜಗತ್ತನ್ನೆಲ್ಲ ತುಂಬಿಕೊಂಡಿರುವಿ. ಇಲ್ಲಿ ವಿವೇಕವೇನಂದರೆ, ವಿಭೂತಿಗಳೆಂದರೆ, ರಾಮಕೃಷ್ಣಾದಿ ಪ್ರತ್ಯಕ್ಷ ವಿವಿಧ ರೂಪಗಳು ಮತ್ತು ವಸ್ತುಗಳಲ್ಲಿ ಆಯಾ ಜಾತಿಗಳಿಗೆ ಉಂಟಾದ ಶ್ರೇಷ್ಠತ್ವವನ್ನು ಭಗವತ್ ಸನ್ನಿಧಾನ ವಿಶೇಷದಿಂದ ಕೊಡುವ ತಿರೋಧಾನ ರೂಪಗಳು.

೧೭. ನಿತ್ಯದಲ್ಲಿ ಧ್ಯಾನವಾಡುವದರಿಂದ ನಿನ್ನ ವಿಭೂತಿರೂಪಗಳನ್ನು ಅರಿಯಬಹುದು; ಅಂದ ಬಳಿಕ ಅದರ ಉದ್ದಿಶ್ಯ ನಿನ್ನ ಪ್ರಾರ್ಥನೆ ಏಕೆಂದು ಕೇಳಿದರೆ, ಅದಕ್ಕೆ ಉತ್ತರ:—

कथं विद्यामहं योगिंस्त्वां सदा परिचिंतयन् ।
केषु केषु च भावेषु चिन्त्योऽसि भगवन्मया ॥ १७ ॥

ಅಂ—ಅನಂತಶಕ್ತಿಮಯನೇ, ನಿನ್ನನ್ನು ನಾನು ಯಾವಾಗ ಧ್ಯಾನಿಸಿದರೂ, ನೀನು ಹೇಳದೆ ನಾನು ಆ ವಿಭೂತಿರೂಪಗಳನ್ನು ತಿಳಿಯುವ ಬಗೆ ಎಂತು! ಪರಮಾತ್ಮನೇ, ಯಾವ ಯಾವ ಪದಾರ್ಥಗಳಲ್ಲಿ ಆಯಾ ಸ್ವಜಾತಿಗೆ ಮೇಲ್ಮೆಯನ್ನು ಕೊಡುವದಕ್ಕಾಗಿ ನೀನು ಅಂತರ್ಗತನಾಗಿ ಇರುವದನ್ನು ನಾನು ಧ್ಯಾನಮಾಡುವದೆಂತು? ಇಲ್ಲಿ ವಿಭೂತಿಗಳೆಂದರೆ ಐಶ್ವರ್ಯಗಳೆಂತಲ್ಲ, ಆದರೆ ವಿವಿಧರೂಪಗಳೆಂದು ತಿಳಿಯಬೇಕು.

೧೮.

विस्तरेणात्मनो योगं विभूतिं च जनार्दन ।
भूयः कथय तृप्तिर्हि शृण्वतो नास्ति मेऽमृतम् ॥ १८ ॥

ಅಂ—ಸಕಲ ಪ್ರಾಣಿದುಃಖನಾಶಕನೇ, ವಸ್ತುಗಳಿಗೆ ಶ್ರೇಷ್ಠತೆಯನ್ನು ಕೊಡುವ ನಿನ್ನ ವಿಭೂತಿರೂಪಗಳನ್ನೂ, ಸಾಮರ್ಥ್ಯವನ್ನೂ, ವಿಸ್ತಾರಪೂರ್ವಕವಾಗಿ ತಿರುತಿರುಗಿ ನಿರೂಪಿಸು. ನಿನ್ನ ವಚನಾಮೃತವನ್ನು ಕೇಳುವ ನನಗೆ ತೃಪ್ತಿ ಇಲ್ಲದಾಗಿದೆ.

೧೯. ಹಿಂದೆ ೧೬ನೆಯ ಶ್ಲೋಕವಲ್ಲಿ ವಿಭೂತಿರೂಪಗಳನ್ನೆಲ್ಲ ವಿಸ್ತಾರವಾಗಿ ಹೇಳು ಎಂದು ಅರ್ಜುನನು ಕೇಳಿದ್ದಕ್ಕೆ ಉತ್ತರ:—

श्रीभगवानुवाच ।

हंत ते कथयिष्यामि दिव्या ह्यात्मविभूतयः ।
प्राधान्यतः कुरुश्रेष्ठ नास्त्यंतो विस्तरस्य मे ॥ १९ ॥

ಅಂ—ಪರಮಾತ್ಮನು ನುಡಿದದ್ದು:— ಆಗಲೆಪ್ಪ, ಸಂತೋಷ; ಕುರುಕುಲಭೂಷಣನೇ, ವಸ್ತುಗಳಿಗೆ ಹೆಚ್ಚುತನವನ್ನು ಕೊಡುವ ನನ್ನ ಮುಖ್ಯ ಮುಖ್ಯ ವಿಭೂತಿಗಳನ್ನು ನಿನ್ನನ್ನು ಕುರಿತು ವರ್ಣಿಸುವೆನೀಗ. ನನ್ನ ವಿಭೂತಿರೂಪಗಳಿಗೆ ಕೊನೆಯೇ ಇಲ್ಲ; ಅಂದರೆ ಅವುಗಳು ಲೆಕ್ಕವಿಲ್ಲದಷ್ಟು; ಅವುಗಳನ್ನೆಲ್ಲ ಹೇಳುತ್ತ ಕುಳ್ಳಿರುವದು ಸಾಧ್ಯವಲ್ಲ.

೨೦. ೧೭ನೆಯ ಶ್ಲೋಕದಲ್ಲಿ ಯಾವ ಯಾವ ಪದಾರ್ಥಗಳಲ್ಲಿ ನಿನ್ನನ್ನು ಧ್ಯಾನಮಾಡಬೇಕೆಂದು ಅರ್ಜುನನು ಕೇಳಿದ ಪ್ರಶ್ನಕ್ಕೆ "ಸಕಲ ಪದಾರ್ಥಗಳಲ್ಲಿಯೂ ನನ್ನ ಧ್ಯಾನ ಮಾಡಬೇಕು" ಎಂಬ ಅಭಿಪ್ರಾಯದಿಂದ ಎಲ್ಲ ಪ್ರಾಣಿಗಳಲ್ಲಿ ತಾನು ತುಂಬಿಕೊಂಡಿರುವದನ್ನು ಶ್ರೀಕೃಷ್ಣನು ಸಾಮಾನ್ಯವಾಗಿ ವಿವರಿಸಿದ್ದು:—

अहमात्मा गुडाकेश सर्वभूताशयस्थितः ।
अहमादिश्च मध्यं च भूतानामंत एव च ॥ २० ॥

ಅಂ—ನಿದ್ದೆಗೆದ್ದವನೇ, ನಾನು ಎಲ್ಲೆಲ್ಲಿಯೂ ತುಂಬಿಕೊಂಡಿದ್ದಾಗ್ಯೂ, ಎಲ್ಲ ಪ್ರಾಣಿಗಳ ಎದೆಗೂಡಿನಲ್ಲಿ ನನ್ನ ಮನೆಕಟ್ಟಿರುವೆ. ಅಲ್ಲದೆ, ಪ್ರಾಣಿಗಳ ಸೃಷ್ಟಿ, ಸ್ಥಿತಿ, ಸಂಹಾರಗಳು ನನ್ನಿಂದಲೇ ನಡೆಯುವವು.

೨೧. ಪರಮಾತ್ಮನ ವಿಭೂತಿರೂಪಗಳು ಎರಡು ವಿಧ. ಒಂದು, ವಿಷ್ಣು, ಕಪಿಲ, ವ್ಯಾಸ, ವಾಸುದೇವ, ರಾಮ, ಮುಂತಾದ ಪ್ರತ್ಯಕ್ಷರೂಪಗಳು; ಮತ್ತೊಂದು, ಪದಾರ್ಥಗಳಿಗೆ ಹಿರಿತನವನ್ನು ಕೊಡುವ ಕಾಣದ ರೂಪಗಳು. ಇವೆರಡೂ ವಿಭೂತಿರೂಪಗಳನ್ನು ವಿಸ್ತರಿಸಿ ಹೇಳಿದ್ದು:—

आदित्यानामहं विष्णुर्ज्योतिषां रविरंशुमान् ।
मरीचिर्मरुतामस्मि नक्षत्राणामहं शशी ॥ २१ ॥

ಅಂ—ದ್ವಾದಶ ಆದಿತ್ಯರಲ್ಲಿ ನಾನು ವಿಷ್ಣುರೂಪದಿಂದ ಅಡಗಿರುವ ವಿಷ್ಣುನಾಮಕನು. ಹೇಗಂದರೆ, ಎಲ್ಲರಲ್ಲಿಯೂ ಪರಿಪೂರ್ಣನಾಗಿರುವದರಿಂದ ನನಗೆ 'ವಿಷ್ಣು' ಎನ್ನುವರು. ಇನ್ನು, 'ಯಾವ ಯಾವ ಪದಾರ್ಥಗಳಲ್ಲಿ' ಎಂದು ಕೇಳಿದ್ದಕ್ಕೆ ಉತ್ತರ:— ಬೆಳಗುವ ವಸ್ತುಗಳಲ್ಲಿ ಸೂರ್ಯನೊಳಗೆ ಅಡಗಿದ್ದು 'ರವಿ' ಎನಿಸುವೆ, ವೇದಗಳಿಂದಲೇ ನನ್ನ ಜ್ಞಾನವಾಗುವದರಿಂದ 'ರವಿ' ನಾಮದಿಂದ ನನ್ನ ವಿಶಿಷ್ಟ ಸಾನ್ನಿಧ್ಯವು ರವಿಯಲ್ಲಿರುವದು. ೫೧ ಮರುತರಲ್ಲಿ ಮರೀಚಿ ನಾಮಕನು ಹೆಚ್ಚಿನವನು. ಅವನಲ್ಲಿ ನನ್ನ ಸನ್ನಿಧಾನ ವಿಶೇಷವಾದ್ದರಿಂದ ನನಗೆ 'ಮರೀಚಿ' ಎನ್ನುವರು; ನೀರುಳ್ಳ ಮೇಘವು ಕಿರಣವನ್ನು ಚಲಿಸುವದೆಂಬ ವ್ಯುತ್ಪತ್ತಿಗನುಸರಿಸಿ ಆ ಹೆಸರು ಬಂದಿದೆ. ನಕ್ಷತ್ರಗಳಿಗಿಂತ ಚಂದ್ರನು ಹೆಚ್ಚು ಪ್ರಕಾಶವುಳ್ಳವನು. ಈ ಹೆಚ್ಚಿನ ಪ್ರಕಾಶ ಉಂಟಾಗಲು ನಾನೇ ಕಾರಣನಾದ್ದರಿಂದ ನನಗೆ 'ಶಶಿ' ಎನ್ನುವರು. ಏಕೆಂದರೆ, ಎಲ್ಲ ಸುಖಕ್ಕೆ ನಾನೇ ಕಾರಣನು.

೨೨.

वेदानां सामवेदोऽस्मि देवानामस्मि वासवः ।
इन्द्रियाणां मनश्चास्मि भूतानामस्मि चेतना ॥ २२ ॥

ಅಂ—ಸೌಮ್ಯತೆಗೆ ಸಲೆಯಾದ್ದರಿಂದ ವೇದಗಳಲ್ಲಿದ್ದು 'ಸಾಮವೇದ' ಎನಿಸುವೆ. ಎಲ್ಲ ದೇಶಗಳಲ್ಲಿ ಒಳಹೊಕ್ಕವನಾಗಿ ದೇವತೆಗಳಲ್ಲಿ 'ವಾಸವ' ಎನಿಸುವೆ. ಇಂದ್ರಿಯಗಳಲ್ಲಿ ಜ್ಞಾನಕ್ಕೆ

ಕಾರಣವಾದ ಮನಸಿನಲ್ಲಿ ಹುದುಗಿಕೊಂಡಿದ್ದರಿಂದ ' ಮನ ' ಎನಿಸುವೆ. ಸಕಲ ಪ್ರಾಣಿಗಳಿಗೆ ಚೈತನ್ಯವೆಂಬ ಶ್ರೇಷ್ಠಧರ್ಮವನ್ನು ಈಯುವದರಿಂದ ನನಗೆ ' ಚೇತನ ' ಎನ್ನುವರು.

೨೩.

रुद्राणां शंकरश्चास्मि वित्तेशो यक्षरक्षसाम् ।
वसूनां पावकश्चास्मि मेरुः शिखरिणामहम् ॥ २३ ॥

ಅಂ—ಏಕಾದಶರುದ್ರರಲ್ಲಿ ಸುಖಕ್ಕೆ ಕಾರಣನಾದ್ದರಿಂದ ನನಗೆ 'ಶಂಕರ' ಎಂದು ಹೆಸರು. ಯಕ್ಷ ರಾಕ್ಷಸರಲ್ಲಿ ಧನಕ್ಕೆ ಸ್ವಾಮಿಯಾದ್ದರಿಂದ ನನಗೆ ' ಕುಬೇರ ' ಎಂಬ ಹೆಸರು. ಅಷ್ಟ ವಸ್ತುಗಳಲ್ಲಿ ಎಲ್ಲವನ್ನೂ ಪವಿತ್ರಗೊಳಿಸುವದರಿಂದ ನನಗೆ ' ಪಾವಕ ' ಎನ್ನುವರು. ಪರ್ವತಗಳಲ್ಲಿ ' ಮೇರು ಪರ್ವತ ' ಎನಿಸುವೆ ನಾನು; ಏಕೆಂದರೆ, ನನಗೆ ಅನ್ಯ ಪ್ರೇರಕನಿಲ್ಲದ್ದರಿಂದ ಈ ಹೆಸರು.

೨೪.

पुरोधसां च मुख्यं मां विद्धि पार्थ बृहस्पतिम् ।
सेनानीनामहं स्कन्दः सरसामस्मि सागरः ॥ २४ ॥

ಅಂ—ಪುರೋಹಿತರಲ್ಲಿ ಬೃಹಸ್ಪತಿಯೇ ಮೇಲು; ಅವನಲ್ಲಿಯೂ ನಾನು ಇರುವದರಿಂದ ' ಬೃಹಸ್ಪತಿ ' ಎನ್ನುವರು ನನಗೆ. ಸೇನಾಪತಿಗಳಲ್ಲಿ ' ಸ್ಕಂದ ' ನಾಮಕನು ನಾನು; ಏಕೆಂದರೆ, ಈ ಜಗತ್ತನ್ನು ನನ್ನ ಉದರದಿಂದ ಹೊರಿದೆಗೆದಿದ್ದರಿಂದ ನನಗಾಹೆಸರು. ಸರೋವರಗಳಲ್ಲಿ ಸಮುದ್ರವು ಶ್ರೇಷ್ಠವು; ಅದರಲ್ಲಿ ನನ್ನ ವಿಭೂತಿರೂಪವಿದೆ. ಅದರಿಂದ ನಾನು ' ಸಾಗರನು '. ಏಕೆಂದರೆ ಎಲ್ಲ ಪದಾರ್ಥಗಳಲ್ಲಿರುವ ಸಾರಭೋಕ್ತೃವು ನಾನೇ.

೨೫.

महर्षीणां भृगुरहं गिरामस्म्येकमक्षरम् ।
यज्ञानां जपयज्ञोऽस्मि स्थावराणां हिमालयः ॥ २५ ॥

ಅಂ—ಮಹರ್ಷಿಗಳಲ್ಲಿ ಭೃಗುಋಷಿಯು ಶ್ರೇಷ್ಠನು; ಅವನಲ್ಲಿ ಇದ್ದುಕೊಂಡು, ಎದುರಾಳಿಗಳ ಹೊಟ್ಟೆಹಾರಿಸುವದರಿಂದ ' ಭೃಗು ' ಎನಿಸುವೆ. ಎಲ್ಲರಿಗೂ ಮುಖ್ಯನಾದ್ದರಿಂದ ನಾನು ' ಏಕ ' ಎಂತಲೂ, ನಾಲ್ಕು ಬಗೆಯ ನಾಶವಿಲ್ಲದ್ದರಿಂದ ' ಅಕ್ಷರ ' ಎಂತಲೂ, ಹೇಳುವರು ನನಗೆ. ಏಕೆಂದರೆ, ನನ್ನ ವಿಭೂತಿಯು ಪ್ರಣವದಲ್ಲಿರುವದು. ಯಜ್ಞಗಳಲ್ಲಿ ' ಜಪಯಜ್ಞ ' ನಾಮಕ ನಾನು. ಏಕೆಂದರೆ, ನಾನು ಯಾಗಗಳಿಂದ ಆರಾಧಿಸಲ್ಪಡುವೆ. ಹೀಗೆ ಜಪಯಜ್ಞದಲ್ಲಿ ಒಳಗೊಂಡದ್ದರಿಂದ ಜಪಯಜ್ಞ ವೆಂದೇ ನನಗೆ ಅನ್ನುವರು. ಗತಿಯಿಲ್ಲದ ಹಿಮವತ್ಪರ್ವತದಲ್ಲಿ ಇದ್ದುಕೊಂಡು, ಲಕ್ಷ್ಮೀದೇವಿಯ ಹ್ರೀ ಮತ್ತು ಶ್ರೀ ಎಂಬೆರಡು ರೂಪಗಳಿಗೆ ಆಶ್ರಯನಾದ್ದರಿಂದ ' ಹಿಮಾಲಯ ' ಎನ್ನುವರು ನನಗೆ.

೨೬.

अश्वत्थः सर्ववृक्षाणां देवर्षीणां च नारदः ।
गन्धर्वाणां चित्ररथः सिद्धानां कपिलो मुनिः ॥ २६ ॥

ಅಂ—ವೃಕ್ಷಗಳಲ್ಲೆಲ್ಲ ಅಶ್ವತ್ಥವೃಕ್ಷವೇ ಮೇಲು; ಅದರಲ್ಲಿ ನನ್ನ ವಿಭೂತಿರೂಪ ಇರುವದರಿಂದ 'ಅಶ್ವತ್ಥ' ಎನಿಸುವೆ ನಾನು. ದೇವರ್ಷಿಗಳಲ್ಲಿ ನಾರದನೇ ಹೆಚ್ಚಿನವ; ಅವನಲ್ಲಿ ನಾನಿದ್ದುಕೊಂಡು 'ನಾರದ' ಎನಿಸುವೆ. ಏಕೆಂದರೆ, ಪ್ರಾಣಿಗಳು ಬಯಸಿದ್ದನ್ನೆಲ್ಲ ನಾನು ಕೊಡುವೆ. ಗಂಧರ್ವರಲ್ಲಿ ಚಿತ್ರರಥನೇ ಹಿರೇಮಣಿ; ಅವನಲ್ಲಿ ಇದ್ದುಕೊಂಡು 'ಚಿತ್ರರಥ' ಎನಿಸುವೆ ನಾನು. ಸಿದ್ಧರಲ್ಲಿ ಕಪಿಲ ಮುನಿಯು ಮೆರೆಯುವವನು; ಅವನಲ್ಲಿದ್ದುಕೊಂಡು 'ಕಪಿಲ' ಎನಿಸುವೆ, ಹೇಗಂದರೆ, ಸುಖರೂಪವುಳ್ಳವನಾದ್ದರಿಂದ ಕ ಎಂತಲೂ, ಜಗತ್ತನ್ನು ನಾನು ರಕ್ಷಿಸುವದರಿಂದ ಪಿ ಎಂತಲೂ, ಅದು ಪ್ರಳಯಕಾಲದಲ್ಲಿ ನನ್ನ ಹೊಟ್ಟೆಯಲ್ಲಿ ಸೇರುವದರಿಂದ ಲ ಎಂತಲೂ, ಹೇಳುವರು; ಅಥವಾ ನಾನು ಸುಖವನ್ನೇ ಉಪಭೋಗಿಸುವದರಿಂದ 'ಕಪಿಲ' ಎನ್ನುವರು.

೨೭.

उच्चैःश्रवसमश्वानां विद्धि माममृतोद्भवम् ।
ऐरावतं गजेंद्राणां नराणां च नराधिपम् ॥ २७ ॥

ಅಂ—ಕುದುರೆಗಳಲ್ಲಿ उच्चैःश्रवस ಎಂಬುವದು ಬಹು ಶ್ರೇಷ್ಠವು. ಅದು ಕ್ಷೀರಸಮುದ್ರ ಕಡೆಯುವ ಕಾಲಕ್ಕೆ ಹುಟ್ಟಿದ್ದು. ಅದರಲ್ಲಿದ್ದು 'ಉಚ್ಚೈಃಶ್ರವಸ' ಎನಿಸುವೆ. ಮೇಲಾದ ಆನೆಗಳಲ್ಲಿ ಇಂದ್ರನ ವಾಹನವಾದ ಐರಾವತವೇ ಮಿಗಿಲಾದದ್ದು; ಏಕೆಂದರೆ ಮುಕ್ತಿಸ್ಥಾನದಲ್ಲಿರುವ 'ಐರ' ಎಂಬ ಸರೋವರವು ಲಕ್ಷ್ಮೀಸ್ವರೂಪವಿದೆ ಎಂದು ಹೇಳಿದ ಉಕ್ತಿಗನುಸರಿಸಿ ಲಕ್ಷ್ಮೀದೇವಿಯನ್ನು ರಕ್ಷಿಸುವದರಿಂದ ನನಗೆ ಆ ಹೆಸರು ಬಂದಿದೆ. ಪ್ರಾಣಿಗಳಲ್ಲಿ ಚಕ್ರವರ್ತಿಯಾದ ಅರಸನು ಶ್ರೇಷ್ಠನು; ಅವನಲ್ಲಿದ್ದು 'ನರಾಧಿಪ' ಎನಿಸುವೆ ನಾನು.

೨೮.

आयुधानामहं वज्रं धेनूनामस्मि कामधुक् ।
प्रजनश्चास्मि कंदर्पः सर्पाणामस्मि वासुकिः ॥ २८ ॥

ಅಂ—ವಜ್ರಗಳಲ್ಲಿ ಇಂದ್ರನ ಆಯುಧವೇ ಹಿರಿದು, ಅದರಲ್ಲಿದ್ದು ನಾನು 'ವಜ್ರ' ಎನಿಸುವೆನು; ಏಕೆಂದರೆ ಎಲ್ಲ ದೋಷಗಳಿಂದ ಹೀನನೂ, ನನಗೆ ಶತ್ರುಗಳೇ ಇಲ್ಲದವನೂ ನಾನು. ಆದ್ದರಿಂದ ಆ ಹೆಸರು ಬಂದಿದೆ. ಆಕಳುಗಳಲ್ಲಿ ಕಾಮಧೇನುವೇ ಮೇಲು; ಅದರಲ್ಲಿ ಇದ್ದು 'ಕಾಮಧೇನು' ಎನಿಸುವೆ; ಏಕೆಂದರೆ, ಅಪೇಕ್ಷಿಸಿದ ಪದಾರ್ಥಗಳನ್ನೆಲ್ಲ ಕೊಡುವೆ ನಾನು. ಉತ್ಪತ್ತಿಗೆ ಕಾರಣನಾದ ಕಾಮನಲ್ಲಿದ್ದುಕೊಂಡು 'ಕಂದರ್ಪ' ಎನಿಸುವೆ ನಾನು; ಏಕೆಂದರೆ, ಎಲ್ಲ ಬಗೆಯ ಸುಖಾನುಭವವು ನನಗುಂಟು. ಸರ್ಪಗಳಲ್ಲಿ ವಾಸುಕಿಯೇ ಹಿರಿದು; ಅದರಲ್ಲಿದ್ದು 'ವಾಸುಕಿ' ಎನಿಸುವೆ; ಏಕೆಂದರೆ, ನಾನು ಅತಿ ಸುಖಕೊಡುವದರಿಂದ ನನಗೆ ವಾಸುಕಿ ಎನ್ನುವರು.

೨೯.

अनन्तश्चास्मि नागानां वरुणो यादसामहम् ।
पितॄणामर्यमा चास्मि यमः संयमतामहम् ॥ २९ ॥

ಅಂ—ಹಲವು ಹೆಡೆಗಳುಳ್ಳ ಸರ್ಪಗಳಲ್ಲಿ ಶೇಷನು ಶ್ರೇಷ್ಠನು; ಅವನಲ್ಲಿ ಅಂತರ್ಗತನಾಗಿ 'ಅನಂತ' ಎನಿಸುವೆ. ಏಕೆಂದರೆ, ದೇಶ, ಕಾಲ, ಗುಣಗಳಿಂದ ನಾಶರಹಿತನು ನಾನು. ಜಲಚರ ಪ್ರಾಣಿ

ಗಳಲ್ಲಿ ವರುಣನೇ ಹೆಚ್ಚಿನವ; ಅವನಲ್ಲಿದ್ದು 'ವರುಣ 'ನೆನಿಸುವೆ; ಏಕೆಂದರೆ, ಉತ್ತಮಾನಂದ ಕೊಡುವೆ ನಾನು. ಪಿತೃಗಳಲ್ಲಿ ಅರ್ಯಮನು ಶ್ರೇಷ್ಠನು; ಅವನಲ್ಲಿದ್ದು ನಾನು 'ಅರ್ಯಮ' ಎಂದು ಹೆಸರು ಪಡೆಯುವೆ; ಏಕೆಂದರೆ, ಎಲ್ಲ ಬಲ್ಲವ ನಾನು. ನಿಯಮನ ಮಾಡುವವರಲ್ಲಿ ಯಮನೇ ಶ್ರೇಷ್ಠ; ಅವನಲ್ಲಿ ಅಂತರ್ಗತನಾಗಿ 'ಯಮ' ನೆನಿಸುವೆ; ಏಕೆಂದರೆ, ನಿಯಮನ ಮಾಡತಕ್ಕ ಧರ್ಮವನ್ನು ನಾನೇ ಕೊಡುವೆ.

೩೦.

**प्रह्लादश्चास्मि दैत्यानां कालः कलयतामहम् ।**
**मृगाणां च मृगेन्द्रोऽहं वैनतेयश्च पक्षिणाम् ॥ ३० ॥**

ಅಂ—ದೈತ್ಯರಲ್ಲಿ ಪ್ರಲ್ಹಾದನೇ ಶ್ರೇಷ್ಠನು; ಅವನಲ್ಲಿ ಇದ್ದ 'ಪ್ರಲ್ಹಾದ' ನಾಮಕನು ನಾನು; ನನ್ನಲ್ಲಿ ಹೆಚ್ಚಿನ ಸುಖವಿರುವದರಿಂದ ನನಗೆ ಆ ಹೆಸರು ಬಂದಿದೆ. ಬಂಧನಾದಿಗಳಿಗೆ ಕಾಲವೇ ಕಾರಣ; ಅದರಲ್ಲಿ ಇದ್ದವನಾಗಿ 'ಕಾಲ' ಎನಿಸುವೆ, ಏಕೆಂದರೆ, ಸರ್ವಸಂಹಾರಕ್ಕೆ ನಾನೇ ಕಾರಣನು. ಹಿಂಸ್ರ ಪಶುಗಳಲ್ಲಿ ಸಿಂಹವೇ ಅರಸು; ಅದರಲ್ಲಿ ಇದ್ದು ನಾನು 'ಮೃಗೇಂದ್ರ' ಎನಿಸುವೆ, ಏಕೆಂದರೆ, ನನ್ನನ್ನು ಹುಡುಕುವ ಭಕ್ತರಿಗೆ ನಾನು ಸ್ವಾಮಿಯು. ಪಕ್ಷಿಕೋಟಿಗೆಲ್ಲ ಗರುಡನೇ ಹಿರಿಯ; ಆದ್ದರಿಂದ ಅವನಲ್ಲಿದ್ದು 'ವೈನತೇಯ' ಎಂದೆನಿಸುವೆನು. ನನಗೆ ಭಕ್ತಿಯಿಂದ ಬಾಗಿದವರಿಗೆ ನಾನೇ ಆಸರ.

೩೧.

**पवनः पवतामस्मि रामः शस्त्रभृतामहम् ।**
**झषाणां मकरश्चास्मि स्रोतसामस्मि जाह्नवी ॥ ३१ ॥**

ಅಂ—ಪವಿತ್ರಗೊಳಿಸುವ ಅಥವಾ ವೇಗವುಳ್ಳ ಪದಾರ್ಥಗಳಲ್ಲಿ ಪವನವೆಂದರೆ ಗಾಳಿಯೇ ಶ್ರೇಷ್ಠವು; ಅದರಲ್ಲಿ ಅಂತರ್ಗತನಾಗಿ 'ಪವನ' ನೆನಿಸುವೆನು; ಏಕೆಂದರೆ, ಸರ್ವರಿಂದಲೂ ನಾನು ಆರಾಧಿಸಲ್ಪಡುವೆನು. ಧನುರ್ಧಾರಿಗಳಲ್ಲಿ ಶ್ರೀರಾಮನು ಶ್ರೇಷ್ಠನು; ನಾನು ಜಗವನ್ನು ಆನಂದಗೊಳಿಸುವದರಿಂದ 'ರಾಮ' ನೆಂದು ನನಗೆ ಹೆಸರು. ಮೀನಗಳಲ್ಲಿ ಮೊಸಳೆಯು ಹಿರಿದು; ಅದರಲ್ಲಿ ಅಂತರ್ಗತನಾಗಿ 'ಮಕರ' ಎನಿಸುವೆ; ಏಕೆಂದರೆ, ಪ್ರಾಣಿಗಳ ಜ್ಞಾನವನ್ನು ಅಲ್ಪಗೊಳಿಸುವದರಿಂದ ಮಕರನಾಮಕನು. ನದಿಗಳಲ್ಲಿ ಭಾಗೀರಥಿಯು ಶ್ರೇಷ್ಠಳು, ಆಕೆಯಲ್ಲಿ ಅಂತರ್ಗತನಾಗಿ 'ಜಾಹ್ನವಿ' ಎನಿಸುವೆ; ಯಾಕೆಂದರೆ, ಸಂಸಾರವು ಅಸಾರವೆಂದು ತಿಳಿದು ಅದನ್ನು ತ್ಯಾಗಮಾಡುವವರನ್ನು ರಕ್ಷಿಸುವೆ.

೩೨.

**सर्गाणामादिरन्तश्च मध्यं चैवाहमर्जुन ।**
**अध्यात्मविद्या विद्यानां वादः प्रवदतामहम् ॥ ३२ ॥**

ಅಂ—ಅರ್ಜುನಾ, ಸೃಷ್ಟಿಗೆ ಬರಲು ಯೋಗ್ಯರಾದ ಪ್ರಾಣಿಗಳ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ನಾನೇ ಮಾಡುವೆನು. ಜೀವಗಳಿಗೆ ಅಧಿಪತಿಯಾಗಿ ಇರುವದರಿಂದ ಅವುಗಳ ಸ್ವರೂಪವನ್ನು ತಿಳಿಸಿ ಕೊಡುವ ಆತ್ಮವಿದ್ಯೆ ಎಂದರೆ, ಬ್ರಹ್ಮವಿದ್ಯೆಯಲ್ಲಿ ಅಂತರ್ಗತನಾಗಿ 'ಅಧ್ಯಾತ್ಮವಿದ್ಯೆ' ಎನಿಸುವೆನು. ಜಲ್ಪ (ಕೀರ್ತಿಗಾಗಿ ಮಾಡುವ ಕಥೆಯು), ವಿತಂಡ (ವಾಖಂಡಕಥೆ) ಕಥೆಗಳನ್ನು ಮಾಡುವವರಿಗೆ

ವಿಷಯನಾದುದರಿಂದ ಆ ಕಥೆಗಳಲ್ಲಿ ವಾದಕಥೆಯೇ ಶ್ರೇಷ್ಠವಾದ್ದರಿಂದ ಅದರಲ್ಲಿ ಅಂತರ್ಗತನಾಗಿ 'ವಾದಕಥೆ' ಎನಿಸುವೆನು.

೩೩.

अक्षराणामकारोऽस्मि द्वंद्वः सामासिकस्य च ।
अहमेवाक्षयः कालो धाताऽहं विश्वतोमुखः ॥ ३३ ॥

ಅಂ—'ಅ' ಅಕ್ಷರದಿಂದ ಸಂಬೋಧಿಸಲ್ಪಡುವದರಿಂದ ಅಕಾರದಲ್ಲಿ ಅಂತರ್ಗತನಾಗಿ 'ಅ' ಕಾರ ಎನಿಸುವೆ. ಸಮಾಸಸಮೂಹದಲ್ಲಿ ದ್ವಂದ್ವಸಮಾಸವು ಶ್ರೇಷ್ಠವು; ಅದರಲ್ಲಿ ಅಂತರ್ಗತನಾಗಿ 'ದ್ವಂದ್ವ' ನಾಮಕನು; ಏಕೆಂದರೆ, ನನಗೆ ಬಾಹ್ಯ—ಅಂತರಂಗಗಳೆಂಬ ಎರಡು ವಿಧದ ರೂಪಗಳಿವೆ. ನನಗೆ ನಾಶವಿಲ್ಲದ್ದರಿಂದ 'ಅಕ್ಷರ' ವೆಂಬ ಹೆಸರು ಬಂದಿದೆ. ಅದರಂತೆಯೇ, ಎಲ್ಲವನ್ನೂ ಸಂಹರಿಸುವದರಿಂದ ನನಗೆ 'ಕಾಲ' ಎಂತಲೂ ಹೇಳುವರು. ಇದಲ್ಲದೆ, ಅವಧಿ ಇಲ್ಲದ ಕಾಲದಲ್ಲಿಯೂ ಅಂತರ್ಗತನಾಗಿರುವೆನು. ಸಕಲ ಜಗತ್ತಿನ ಧಾರಣ ಪೋಷಣಗಳಿಗೂ ಕರ್ತನು; ಆದ್ದರಿಂದ ನನಗೆ 'ಧಾತಾ' ಎನ್ನುವರು. ಎಲ್ಲ ದಿಕ್ಕುಗಳಲ್ಲಿಯೂ ನನಗೆ ಮುಖಗಳಿರುವ ಮೂಲಕ ಅಥವಾ ಚತುರ್ಮುಖನಲ್ಲಿ ಅಂತರ್ಗತನಾದ್ದರಿಂದ ಅಥವಾ ಎಲ್ಲ ದಿಕ್ಕುಗಳಲ್ಲಿಯೂ ಅವಯವಗಳಿರುವದರಿಂದ ನನಗೆ 'ವಿಶ್ವತೋಮುಖ' ಎನ್ನುವರು.

೩೪.

मृत्युः सर्वहरश्चाह-
मुद्भवश्च भविष्यताम् ।
कीर्तिः श्रीर्वाक्च नारीणां
स्मृतिर्मेधा धृतिः क्षमा ॥ ३४ ॥

ಅಂ—ಎಲ್ಲವನ್ನು ಸಂಹರಿಸುವ ಮೂಲಕ ಮೃತ್ಯುವಿನಲ್ಲಿದ್ದು 'ಮೃತ್ಯು' ಹೆಸರುಳ್ಳವನು. ಮುಂದೆ ಹುಟ್ಟತಕ್ಕವರನ್ನು ಸೃಷ್ಟಿಗೆ ತರುವದರಿಂದ ನಾನು 'ಉದ್ಭವ'ನೆನಿಸುವೆ. ಕೀರ್ತಿ, ಶ್ರೀ, ವಾಣಿ, ಇವುಗಳಲ್ಲಿದ್ದು ಆ ಹೆಸರಿನಿಂದ ನಾನು ಪ್ರಸಿದ್ಧನು. ಸ್ಮರಣದಲ್ಲಿ ವಾಸಮಾಡಿ 'ಸ್ಮೃತಿ' ನಾಮಕನು. ಬುದ್ಧಿ, ಧೈರ್ಯ, ಕ್ಷಮೆ, ಇವುಗಳಲ್ಲಿದ್ದು ಆಯಾ ಹೆಸರುಗಳಿಂದ ಪ್ರಸಿದ್ಧನು.

೩೫.

बृहत्साम तथा साम्नां गायत्री छंदसामहम् ।
मासानां मार्गशीर्षोऽहमृतूनां कुसुमाकरः ॥ ३५ ॥

ಅಂ—ಅತಿಬಲವುಳ್ಳವನಾದ್ದರಿಂದ 'ಬೃಹತ್' ತಿಳಿಯಲಿಕ್ಕೆ ಅಶಕ್ಯನಾದ್ದರಿಂದ 'ಅಮೇಯ' ಹೀಗೆ 'ಬೃಹತ್ಸಾಮ'ನೆನಿಸುವೆನು; ಅಥವಾ ರಥಂತರ, ವೈರೂಪ, ವೈರಾಜ, ಶಾಕ್ವರ, ಮುಂತಾದ ಸಾಮವೇದಗಳಲ್ಲಿ ಬೃಹತ್ಸಾಮವು ಶ್ರೇಷ್ಠವಾದ್ದರಿಂದ, ಆ ಹೆಸರು ನನಗೆ ಬಂದಿದೆ. ನನ್ನ ಛಾಯೆಯನ್ನ

ಮಾಡುವವರನ್ನು ರಕ್ಷಿಸುವದರಿಂದ ನನಗೆ 'ಗಾಯತ್ರಿ' ಹೆಸರು ಬಂದಿದೆ. ತ್ರಿಷ್ಟುಪ, ಜಗತಿ, ಮುಂತಾದ ಛಂದಸ್ಸುಗಳಲ್ಲಿ ಗಾಯತ್ರಿಛಂದಸ್ಸು ಶ್ರೇಷ್ಠ; ಅದರಲ್ಲಿ ನನ್ನ ವಿಭೂತಿರೂಪವಿರುವದರಿಂದ 'ಗಾಯತ್ರಿ' ಎನಿಸುವೆ. ತಿಂಗಳಲ್ಲಿ ಮಾರ್ಗಶೀರ್ಷವು ಶ್ರೇಷ್ಠವಾದ್ದರಿಂದ 'ಮಾರ್ಗಶೀರ್ಷ' ನಾಮಕನು; ಋತುಗಳಲ್ಲಿ ವಸಂತಋತು ಶ್ರೇಷ್ಠವು; ಅದರಲ್ಲಿದ್ದು 'ಕುಸುಮಾಕರ' ಎನಿಸುವೆ; ಏಕೆಂದರೆ, ಕೆಟ್ಟ ಮತ್ತು ಚಲೋ ಜ್ಞಾನಗಳನ್ನು ಕೊಡುವೆ.

೩೬.

द्यूतं छलयतामस्मि तेजस्तेजस्विनामहम् ।
जयोऽस्मि व्यवसायोऽस्मि सत्त्वं सत्त्ववतामहम् ॥ ३६ ॥

ಅಂ—ಕಪಟವನ್ನಾಚರಿಸುವಲ್ಲಿ ದ್ಯೂತವು ಶ್ರೇಷ್ಠವು; ಅದರಲ್ಲಿದ್ದು 'ದ್ಯೂತ' ಎನಿಸುವೆ. ಎಲ್ಲವನ್ನು ಪ್ರಕಾಶಿಸುವದರಿಂದ ತೇಜಸ್ವಿನಲ್ಲಿದ್ದು 'ತೇಜೋ' ನಾಮಕನು. ಜಯಶಾಲಿಗಳಿಗೆ ಜಯಕ್ಕೆ ಬೇಕಾದ ಸಾಮರ್ಥ್ಯವನ್ನು ಕೊಡುವದರಿಂದ ಅದರಲ್ಲಿದ್ದು 'ಜಯ' ಎನಿಸುವೆ. ವ್ಯವಸಾಯವುಳ್ಳವರಲ್ಲಿ ವ್ಯವಸಾಯಕ್ಕೆ ಬೇಕಾದ ಸಾಮರ್ಥ್ಯವನ್ನು ಕೊಡುವದರಿಂದ ಅವರಲ್ಲಿದ್ದು 'ವ್ಯವಸಾಯ' ಎನಿಸುವೆ. ಬಲವುಳ್ಳವರಲ್ಲಿ ನಿಯಾಮಕನಾಗಿ ಅವರಿಗೆ ಹಿರಿದಾದ ಬಲ ಕೊಡುವದರಿಂದ ನನಗೆ 'ಸತ್ತ್ವ' ಎಂದು ಹೆಸರು ಬಂದಿದೆ.

೩೭.

वृष्णीनां वासुदेवोऽस्मि पांडवानां धनंजयः ।
मुनीनामप्यहं व्यासः कवीनामुशना कविः ॥ ३७ ॥

ಅಂ—ವೃಷ್ಣಿಕುಲದಲ್ಲಿ ಅಂತರ್ಗತನಾಗಿದ್ದು 'ವಾಸುದೇವ' ಎನಿಸುವೆ; ಏಕೆಂದರೆ, ನಾನು ಎಲ್ಲವನ್ನು ತುಂಬಿಕೊಂಡಿರುವದರಿಂದ ಎಲ್ಲರೂ ನನ್ನ ಆಶ್ರಯದಿಂದಿರುವರು. ಪಾಂಡವರಲ್ಲಿ ಧನಂಜಯನೇ ಶ್ರೇಷ್ಠನು; ಅವನಲ್ಲಿದ್ದು ಧನವನ್ನು ಜಯಿಸುವದರಿಂದ 'ಧನಂಜಯ'ನೆಂದು ಹೆಸರು. ಮುನಿಗಳಲ್ಲಿ ವ್ಯಾಸನು ಶ್ರೇಷ್ಠನು; ಅವನಲ್ಲಿದ್ದು 'ವ್ಯಾಸ'ನೆನಿಸುವೆ; ಏಕೆಂದರೆ, ಎಲ್ಲರಿಗಿಂತ ಸರ್ವೋತ್ತಮನಿದ್ದು, ಎಲ್ಲ ಕಡೆಗೂ ವ್ಯಾಪಿಸಿರುವೆನು. ಕವಿಗಳಲ್ಲಿ ಉಶನಾಕವಿಯು ಶ್ರೇಷ್ಠನು; ಅವನಲ್ಲಿದ್ದು 'ಉಶನಾ' ಕವಿ ಎನಿಸುವೆ; ಏಕೆಂದರೆ, ಸೃಷ್ಟಿ ಮೊದಲಾದ ಎಂಟು ವಿಧದ ಕಾರ್ಯಗಳನ್ನು ಮಾಡುವ ಇಚ್ಛೆ ನನ್ನಲ್ಲಿದೆ.

೩೮.

दंडो दमयतामस्मि नीतिरस्मि जिगीषताम् ।
मौनं चैवास्मि गुह्यानां ज्ञानं ज्ञानवतामहम् ॥ ३८ ॥

ಅಂ—ಶಾಸನ ಮಾಡುವವರಲ್ಲಿದ್ದು ಶಾಸನ ಧರ್ಮಗಳನ್ನು ಕೊಡುವದರಿಂದ ನನಗೆ 'ದಂಡ' ಎಂಬ ಹೆಸರು. ಜಯಬಯಸುವವನಲ್ಲಿ ಇದ್ದು, ನೀತಿಧರ್ಮವನ್ನು ಪ್ರೇರಿಸುವದರಿಂದ ನಾನು 'ನೀತಿ' ಶಬ್ದವಾಚ್ಯನು. ಶಾಸ್ತ್ರರಹಸ್ಯವನ್ನು ಬಚ್ಚಿಡುವ ಮುನಿಗಳಲ್ಲಿದ್ದುಕೊಂಡು ನಾನು 'ಮೌನ' ಎನಿ

ಸುವೆ. ಜ್ಞಾನಿಗಳಿಗೆ ಜ್ಞಾನವೆಂಬ ಶ್ರೇಷ್ಠಧರ್ಮವನ್ನು ಕೊಡುವದರಿಂದ ಅಥವಾ ನಾನು ಜ್ಞಾನ ಸ್ವರೂಪಿಯಾದ್ದರಿಂದ ನನಗೆ 'ಜ್ಞಾನ' ಎಂದು ಹೇಳುವರು.

ವಿ೦ ಅಂ—ಇಲ್ಲಿ ವಿವೇಕವೇನಂದರೆ, ಚಂದ್ರ ಮುಂತಾದವರಲ್ಲಿ ಇರುವ ವಿಜಾತಿಯ ಮೇಲ್ಮೆಯನ್ನೀಯುವ ವಿಭೂತಿರೂಪವು ಹೇಳಲ್ಪಟ್ಟಿದೆ; ಏಕೆಂದರೆ, ನಕ್ಷತ್ರ ಮುಂತಾದವುಗಳು ವಿಜಾತಿಯ ಆಗಿವೆ. सत्वं सत्ववताम् ಎಂಬಲ್ಲಿ ಬಲ್ಲವುಳ್ಳವರಲ್ಲಿ ಶ್ರೇಷ್ಠ ಬಲಕೊಡುವ ವಿಭೂತಿರೂಪವು, रुद्राणां शङ्करः ಎಂಬಲ್ಲಿ ಸಜಾತಿಯ ಶ್ರೇಷ್ಠತ್ವವನ್ನು ಕೊಡುವ ವಿಭೂತಿರೂಪವು ಹೇಳಿಯಿದೆ; ಆದರೆ, ಇಂದ್ರ, ಉಶನಾ, ಧನಂಜಯ, ಯಜ್ಞ, ವಜ್ರ, ಸಾಮವೇದಗಳಲ್ಲಿ ಇರುವ ಕೆಲವಂಶದಿಂದ ಶ್ರೇಷ್ಠತ್ವವನ್ನು ಕೊಡುವ ವಿಭೂತಿರೂಪ ಹೇಳಿ ಇದೆ, ಏಕೆಂದರೆ, ಅವರು ಸಜಾತಿಯ ವರ್ಗದಲ್ಲಿ ಎಲ್ಲ ವಿಧದಿಂದ ಶ್ರೇಷ್ಠರಲ್ಲ. ಅದರಂತೆಯೇ, ದೇವತೆಗಳಲ್ಲಿಯೂ, ಕವಿತ್ವಾದಿ ಗುಣಗಳಲ್ಲಿಯೂ, ಚತುರ್ಮುಖನು, ಪಾಂಡವರಲ್ಲಿ ಭೀಮನು, ಯಜ್ಞಗಳಲ್ಲಿ ಜ್ಞಾನಯಜ್ಞ, ಆಯುಧಗಳಲ್ಲಿ ಚಕ್ರ, ವೇದಗಳಲ್ಲಿ ಋಗ್ವೇದ ಶ್ರೇಷ್ಠ.

೩೯.

यच्चापि सर्वभूतानां बीजं तदहमर्जुन ।
न तदस्ति विना यत्स्यान्मया भूतं चराचरम् ॥ ३९ ॥

ಅಂ—ಸಕಲ ಪ್ರಾಣಿಗಳ ಉತ್ಪತ್ತಿಗೆ ನಾನೇ ಕಾರಣನು. ಅವರಲ್ಲಿದ್ದ ಶ್ರೇಷ್ಠತ್ವವು ನನ್ನಿಂದಲೇ. ಹಾಗಾದರೆ, ಪರಮಾತ್ಮನು ಎಲ್ಲವನ್ನು ತೀವಿಕೊಂಡಿರುವನೆಂದು ಹೇಳಲು ಪ್ರಮಾಣವೇನೆಂದು ಕೇಳಿದರೆ, ನನ್ನ ಹೊರ್ತು ಚೇತನಾಚೇತನ ಪ್ರಾಣಿಗಳು ಎಲ್ಲಿಯೂ ಎಂದೂ ಇರಲಾರವು. ಆದ್ದರಿಂದ ಎಲ್ಲ ಕಡೆಯಲ್ಲಿಯೂ ನನ್ನ ವ್ಯಾಪ್ತಿ; ಅಥವಾ, ಹಿಂದೆ ಪ್ರಕಾಶಿಸುವ ವಸ್ತುಗಳಲ್ಲಿ ಸೂರ್ಯನು ಅರಸನಾದ್ದರಿಂದ ಅವನಲ್ಲಿಯ ಶ್ರೇಷ್ಠತ್ವಕ್ಕೆ ನನ್ನ ವಿಭೂತಿ ರೂಪವೇ ಕಾರಣವೆಂದು ಹೇಳಿದ್ದರಿಂದ ಜ್ಯೋತಿರಾದಿಗಳಲ್ಲಿ ನನ್ನ ವಾಸವಿಲ್ಲೆಂದು ಕಂಡುಬರುವದು; ಹೀಗೆ ಬರುವ ಸಂದೇಹನಿರಸನೆಗಾಗಿ ಇದೇ ಶ್ಲೋಕಾರ್ಥವು ಉತ್ತರವಾಗಿದೆ. ಈ ಪಕ್ಷದಲ್ಲಿ ಅರ್ಥವು ಹಿಂದಿನಂತೆ.

೪೦. ವಿಭೂತಿರೂಪಗಳ ವರ್ಣನೆ ಮುಗಿಸಿದ್ದು.—

नांतोऽस्ति मम दिव्यानां विभूतीनां परंतप ।
एष तूद्देशतः प्रोक्तो विभूतेर्विस्तरो मया ॥ ४० ॥

ಅಂ—ಶತ್ರು ತಾಪನೇ, ನನ್ನ ದಿವ್ಯ ವಿಭೂತಿ ರೂಪಗಳಿಗೆ ಕೊನೆಯಿಲ್ಲ. ಆದ್ದರಿಂದ, ವಿಭೂತಿಗಳ ವಿಸ್ತಾರವು ಇಲ್ಲಿಗೆ ಮುಗಿಯಿತೆಂದು ಹೇಳಲಿಕ್ಕೆ ಇಲ್ಲ.

೪೧. ವಿಭೂತಿಯ ವರ್ಣನೆಯ ಲಕ್ಷಣ ಹೇಳಿ ಮುಗಿಸಿದ್ದು.—

यद्यद्विभूतिमत्सत्वं श्रीमदूर्जितमेव वा ।
तत्तदेवावगच्छ त्वं मम तेजोंऽशसंभवम् ॥ ४१ ॥

ಅಂ—ಅರ್ಜುನಾ, ಒಂದು ಮಾತ್ರ ಬೀಜಮಾತನ್ನು ಮನಸಿನಲ್ಲಿಡು. ತನ್ನ ತನ್ನ ವರ್ಗದಲ್ಲಿ ಶ್ರೇಷ್ಠತ್ವವನ್ನು ಹೊಂದಿರುವ, ಸಂಪತ್ತಿಯಿಂದ ಅಭಿವೃದ್ಧಿಹೊಂದಿರುವ ಆಯಾ ವಸ್ತುವು ನನ್ನ

ವಿಭೂತಿರೂಪದ ಸಾನ್ನಿಧ್ಯವುಳ್ಳದ್ದೆಂದು ತಿಳಿಯುವದಲ್ಲದೆ, ಅವುಗಳ ಶ್ರೇಷ್ಠತ್ವವು ನನ್ನ ಸಾಮರ್ಥ್ಯದ ಅಂಶದಿಂದಲೇ ಬಂದದ್ದು.

೪೨.

अथवा बहुनैतेन किं ज्ञातेन तवार्जुन ।
विष्टभ्याहमिदं कृत्स्नमेकांशेन स्थितो जगत् ॥ ४२ ॥

ಅಂ—ಅಥವಾ ಅರ್ಜುನಾ, ಹೆಚ್ಚಿನ ಮಾತಿನಿಂದೇನು! ವಿಭೂತಿಗಳಿಂದ ಯುಕ್ತವಾದ ಸೂರ್ಯ ಮೊದಲ್ಗೊಂಡು ಆಯಾ ವಸ್ತುಗಳಲ್ಲಿದ್ದ ಪರಿಚ್ಛಿನ್ನ ವಿಭೂತಿರೂಪ ವಿಸ್ತಾರದ ಜ್ಞಾನದಿಂದ ನಿನಗಾಗುವ ಫಲವೇನು? ಏನೂ ಇಲ್ಲ. ಹಾಗಾದರೆ, ವಿಭೂತಿಯ ಜ್ಞಾನವು ನಿಷ್ಫಲವೇ ಎಂದು ಕೇಳಿದರೆ, ಅಲ್ಲ, ಮುಂದೆ ಹೇಳುವ ಪರಮಾತ್ಮನ ವ್ಯಾಪ್ತಿಯ ಜ್ಞಾನದಿಂದ ಹುಟ್ಟುವ ಫಲಕ್ಕಿಂತ ಆ ಜ್ಞಾನದ ಫಲವು ಅಲ್ಪವೆಂಬ ಅಭಿಪ್ರಾಯದಿಂದ ಆಕ್ಷೇಪಿಸಿದ್ದು. ಆದರೆ, ನನ್ನ ವಿಷಯಕ್ಕೆ ತಿಳಿಯು ವದೇನೆಂದು ಕೇಳಿದರೆ, ಪ್ರಮಾಣದಿಂದ ಸಿದ್ಧವಾಗಿದ್ದು ಕಣ್ಣಿಗೆ ತೋರುವ ಈ ಜಗವನ್ನು ನನ್ನ ಅನಂತಾಂಡಗಳಲ್ಲಿ ಒಂದಂಶದಿಂದ ವ್ಯಾಪಿಸಿರುವೆ, ಏಕೆಂದರೆ, ನನ್ನ ಎಲ್ಲ ಅಂಶಗಳಿಂದ ವ್ಯಾಪಿಸಿರುವ ದಾದರೆ, ಸಾವಿರಾರು ಜಗಗಳು ಕೂಡ ಸಾಲಲಾರವು. ನನ್ನ ವ್ಯಾಪ್ತಿ ಅಪರಿಮಿತ; ಅದರಿಂದಲೇ ಅಂತಹ ಜ್ಞಾನವು ಅವಶ್ಯ. ಹಾಗಾದರೆ, ಇಂಥ ಜ್ಞಾನದಿಂದಲೇ ಮೋಕ್ಷ ದೊರೆಯುಲು ಹಿಂದೆ ಹೇಳಿದ ವಿಭೂತಿ ರೂಪಗಳ ಜ್ಞಾನವು ವ್ಯರ್ಥವಲ್ಲೇ ಎಂದು ಸಂದೇಹಗೊಂಡರೆ, "ಪರಮಾತ್ಮನ ವಿಷಯಕ್ಕೆ ಸಾಮಾನ್ಯ ವಿಶೇಷ ಜ್ಞಾನಗಳಿಲ್ಲದೆ ಯಾವನಿಗೆ ಮುಕ್ತಿಯಾಗುವದು" ಎಂಬ ಶ್ರುತಿ ವಚನಕ್ಕನುಸರಿಸಿ ವಿಭೂತಿರೂಪಗಳ ಜ್ಞಾನ ಅವಶ್ಯ. ಅರ್ಜುನಾ, ನೀನಂತೂ ಮಹಾಪದಕ್ಕೆ ಅಧಿ ಕಾರಿಯಾದ್ದರಿಂದ ನಿನಗೆ ಎರಡೂ ವಿಧದ ಜ್ಞಾನವು ಅವಶ್ಯ. ವಿಶೇಷ ಜ್ಞಾನವಷ್ಟೇ ಸಾಕಲ್ಲ ಎಂಬ ಅಭಿಪ್ರಾಯದಿಂದ ವಿಭೂತಿಗಳ ಜ್ಞಾನದಿಂದಷ್ಟೇ ನಿನಗೆ ಫಲವೇನೆಂದು ಮೊದಲಿನ ಅರ್ಧ ಋಚೆಯಲ್ಲಿ ಹೇಳಿ ಇದೆ.

इति श्रीमद्भगवद्गीतासूपनिषत्सु ब्रह्मविद्यायां योगशास्त्रे श्रीकृष्णार्जुनसंवादे
विभूतियोगो नाम दशमोऽध्यायः ॥ १० ॥

ಅಂ—ಈ ಮೇರೆಗೆ, ಷಡ್ಗುಣೈಶ್ವರ್ಯ ಸಂಪನ್ನನಾದ ಪರಮಾತ್ಮನಿಂದ ಮನೋಹರ,
ಅಲಂಕಾರಿಕ ಮತ್ತು ಇಷ್ಟ ಶಬ್ದಗಳಿಂದ ಉಪದೇಶಿಸಲ್ಪಟ್ಟದ್ದೂ ಉಪನಿಷತ್ತಿಗೆ
ಸಮಾನವೂ ಪರಬ್ರಹ್ಮವಿಷಯಕ ವಿದ್ಯೆಯೂ ಎನಿಸುವ ಮತ್ತು ಕರ್ಮ
ಯೋಗಾದಿಗಳನ್ನು ಪ್ರತಿಪಾದಿಸುವ, ಶ್ರೀಕೃಷ್ಣನಿಗೂ ಅರ್ಜುನ
ನಿಗೂ ನಡೆದ ಸಂವಾದರೂಪವಾದ **ಗೀತಾಶಾಸ್ತ್ರದಲ್ಲಿಯ**
**ವಿಭೂತಿಯೋಗ** ಎಂಬ **ಹತ್ತನೆಯ** ಅಧ್ಯಾಯವು
ಮುಗಿಯಿತು.



# ೧೧ನೆಯ ಅಧ್ಯಾಯವು

೧. ಹಿಂದಿನ ಅಧ್ಯಾಯದ ಕೊನೆಯ ಶ್ಲೋಕದಲ್ಲಿ ಪರಮಾತ್ಮನು ಸಕಲ ಜಗತ್ತನ್ನು ವ್ಯಾಪಿಸಿರುವನು. ಆದ್ದರಿಂದ ಅವನ ವ್ಯಾಪ್ತರೂಪ ಉಪಾಸನೆಯು ಸಂಕ್ಷೇಪವಾಗಿ ವಿವರಿಸಲ್ಪಟ್ಟಿತು. ಆದರೆ, ಸಂಕ್ಷೇಪದಿಂದ ಹೇಳಿದ ರೂಪದ ಉಪಾಸನೆಯು ಬುದ್ಧಿಗೆ ಸುಲಭವಾಗಿ ನಿಲುಕದ್ದರಿಂದ ಅದರ ಧ್ಯಾನವು ಅಶಕ್ಯವಾಗುವದು. ಆದ್ದರಿಂದ ಧ್ಯಾನದ ಸೌಕರ್ಯಕ್ಕಾಗಿ ಸಾರಾಂಶವಾಗಿ ಹೇಳಿದ ವಿಶ್ವರೂಪಸ್ಥಿತಿಯು ಪ್ರಕೃತ ಅಧ್ಯಾಯದಲ್ಲಿ ವಿಸ್ತಾರಪೂರ್ವಕವಾಗಿ ಹೇಳಲ್ಪಡುವದು. ಇದರಿಂದ, ಹಿಂದಿನ ಮತ್ತು ಈಗಿನ ಅಧ್ಯಾಯಗಳ ಅರ್ಥ ಭೇದವನ್ನು ಹೇಳಿದಂತಾಯಿತು. ವಿಶ್ವರೂಪದ ಬಗ್ಗೆ ತಿಳಿಯಲಿಚ್ಛಿಸುವ ಅರ್ಜುನನು ಹಿಂದೆ ಹೇಳಿದ್ದನ್ನೇ ಮುಂದಿನ ಎರಡು ಶ್ಲೋಕಗಳಿಂದ ಅನುವಾದಿಸಿದ್ದು:—

**अर्जुन उवाच ।**

**मदनुग्रहाय परमं गुह्यमध्यात्मसंज्ञितम् ।**
**यत्त्वयोक्तं वचस्तेन मोहोऽयं विगतो मम ॥ १ ॥**

**ಅಂ**—ಶ್ರೀಕೃಷ್ಣಾ, ಪರಮಾತ್ಮನ ವಿಷಯಕ್ಕೆ ಅತಿಗೌಪ್ಯವಾದ ಅಧ್ಯಾತ್ಮವಿಷಯಕ ವಚನವನ್ನು ನೀನು ನನ್ನ ಅನುಗ್ರಹಕ್ಕಾಗಿ ಹೇಳಿರುವಿ. ಆದರಿಂದ ನನ್ನ ಬಾಂಧವರಾದ ಭೀಷ್ಮದ್ರೋಣಾದಿಗಳ ವಿಷಯಕ್ಕೆ ಹುಟ್ಟಿದ ನನ್ನ ಮೋಹವು ನಾಶವಾಯಿತು. ಇಲ್ಲಿ ವಿವೇಕವೇನಂದರೆ, ಅರ್ಜುನನು ಇಂದ್ರನ ಅಂಶದಿಂದ ಅವತರಿಸಿದ್ದರಿಂದ, ಅವನಿಗೆ ಇಂಥ ಮೋಹ ಮುಸುಕದು, ಆದರೆ, ಲೋಕೋದ್ಧಾರಕ್ಕಾಗಿ ಮೋಹಗೊಂಡವನಂತೆ ತೋರಿಸಿ ಹಾಗೆ ಹೇಳಿದನು.

**ವಿಂ ಅಂ**—ಹಿಂದಣ ಅಧ್ಯಾಯದಲ್ಲಿ ವ್ಯಾಪ್ತೋಪಾಸನೆಯು ಸಂಕ್ಷೇಪದಿಂದ ಹೇಳಲಾಗಿದೆ; ಆದರೆ, ಸಂಕ್ಷೇಪದಿಂದ ಹೇಳಿದ್ದರ ಧ್ಯಾನವು ಬುದ್ಧಿಗೆ ತೋಚದ್ದರಿಂದ ಧ್ಯಾನಮಾಡಲು ಸಾಧ್ಯವಲ್ಲ. ವಿಸ್ತಾರವಾಗಿ ಹೇಳಲ್ಪಟ್ಟ ರೂಪವೇ ಧ್ಯಾನಕ್ಕೆ ಸಾಧ್ಯ. ಆದುದರಿಂದ ಅರ್ಜುನನಿಗೆ ತೋರಿಸಿದ ವಿಶ್ವರೂಪವನ್ನು ವಿಸ್ತರಿಸುತ್ತ ಪ್ರಕೃತ ಅಧ್ಯಾಯದಲ್ಲಿ ವರ್ಣಿಸಲಾಗುವದು. ಇಲ್ಲಿ ವಿಶ್ವರೂಪ ಎಂದು ಹೇಳಿದ್ದರಿಂದ ಶ್ರೀಕೃಷ್ಣನು ವಿಶ್ವರೂಪವನ್ನು ಮಾಯೆಯಿಂದ ನಿರ್ಮಿಸಿ ಆಗಲೇ ತೋರಿಸಿದನು ಎಂಬ ಸಂದೇಹವು ದೂರಾಯಿತು.

೨.

**भवाप्ययौ हि भूतानां श्रुतौ विस्तरशो मया ।**
**त्वत्तः कमलपत्राक्ष माहात्म्यमपि चाव्ययम् ॥ २ ॥**

**ಅಂ**—ಕಮಲದೆಲೆಯಂತಿರುವ ಕಣ್ಣುಳ್ಳವನೇ, ೭ನೆಯ ಅಧ್ಯಾಯದ ೬ನೆಯ ಶ್ಲೋಕ ಮೊದಲ್ಗೊಂಡು ಹಿಂದಿನ ಅಧ್ಯಾಯಗಳಲ್ಲಿ ಪ್ರಾಣಿಗಳ ಉತ್ಪತ್ತಿ ನಾಶಗಳನ್ನು ವಿಸ್ತಾರ ಪೂರ್ವಕವಾಗಿ ನಿನ್ನಿಂದ ಕೇಳಿರುವೆ. ಅದರಂತೆಯೇ, ನಾಶವಿಲ್ಲದ ನಿನ್ನ ಮಹಿಮೆಯನ್ನೂ ಕೇಳಿರುವೆ.

೩. ಅರ್ಜುನನು ಪರಮಾತ್ಮನು ಹೇಳಿದ ಮಾತನ್ನು ಸ್ತುತಿಸುತ್ತ ತಿಳಿದುಕೊಳ್ಳಲು ಯೋಗ್ಯವಾದ ವಿಶ್ವರೂಪದ ದರ್ಶನವನ್ನು ಮುಂದಿನ ಎರಡು ಶ್ಲೋಕಗಳಿಂದ ಪ್ರಾರ್ಥಿಸಿದ್ದು:—

एवमेतद्यथाऽऽत्थ त्वमात्मानं परमेश्वर।
द्रष्टुमिच्छामि ते रूपमैश्वरं पुरुषोत्तम ॥ ३ ॥

ಅಂ—ಪರಮೈಶ್ವರ್ಯವುಳ್ಳ ಕೃಷ್ಣ, ನೀನು ಹೇಳಿದಂತೆ ನಿನ್ನ ಸ್ವರೂಪವು ಇರುವದು ನಿಜ. ಸರ್ವೋತ್ತಮನೇ, ಅಚಿಂತ್ಯಸಾಮರ್ಥ್ಯವುಳ್ಳ ನಿನ್ನ ರೂಪವನ್ನು ನೋಡಲಿಚ್ಛಿಸುವೆ.

೪.

मन्यसे यदि तच्छक्यं मया द्रष्टुमिति प्रभो ।
योगेश्वर ततो मे त्वं दर्शयात्मानमव्ययम् ॥ ४ ॥

ಅಂ—ಸಮರ್ಥನೇ, ನಿನ್ನ ರೂಪವನ್ನು ನಾನು ನೋಡುವದು ಶಕ್ಯವಾದರೆ, ಸರ್ವೋಪಾಯ ಬಲ್ಲವನೇ, ನಾಶವಿಲ್ಲದ ನಿನ್ನ ಸ್ವರೂಪವನ್ನು ನನಗೆ ತೋರಿಸು ಕಂಡಿಯಾ! ಇಲ್ಲಿ ಪ್ರಭೋ ಸಮರ್ಥನೇ ಎಂಬುದರಿಂದ ನೀನು ಅತಿಸಮರ್ಥನಾದುದರಿಂದ ನಿನ್ನ ಸಾಮರ್ಥ್ಯದಿಂದಲೇ, ಇಂದ್ರಿಯಗೋಚರವಾಗದ್ದರ ದರ್ಶನವು ಸುಲಭವೆಂದು ಸೂಚಿತವಾಗುವದು.

೫. ಈ ಮೇರೆಗೆ, ಕುತೂಹಲವುಳ್ಳ ಪಾರ್ಥನಿಂದ ಪ್ರಾರ್ಥಿಸಲ್ಪಟ್ಟ ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀಕೃಷ್ಣನು ತನ್ನ ಸ್ವರೂಪವನ್ನು ತೋರಿಸುವ ಇಚ್ಛೆಯಿಂದ ಅವನಿಗೆ ಅದನ್ನು ನೋಡೆಂದು ಮುಂದಿನ ನಾಲ್ಕು ಶ್ಲೋಕಗಳಿಂದ ಹೇಳಿದ್ದು:—

श्रीभगवानुवाच ।
पश्य मे पार्थ रूपाणि शतशोऽथ सहस्रशः ।
नानाविधानि दिव्यानि नानावर्णाकृतीनि च ॥ ५ ॥

ಅಂ—ಅರ್ಜುನನು ಒಂದೇ ರೂಪದ ದರ್ಶನಕ್ಕಾಗಿ ಬಿನ್ನವಿಸಿಕೊಂಡಿದ್ದರೂ, ಶ್ರೀಕೃಷ್ಣನು ಅಂದದ್ದು:—ಅರ್ಜುನಾ, ನನ್ನ ಈ ಸಾವಿರಾರು ರೂಪಗಳನ್ನು ನೋಡು; ಅವು ಅಸಂಖ್ಯ, ಅಪ್ರಾಕೃತಗಳಾಗಿವೆ; ಅಲ್ಲದೆ, ಅವು ಬಿಳಿ ಮುಂತಾದ ವರ್ಣಗಳಿಂದಲೂ, ಆಕಾರಗಳಿಂದಲೂ, ಕೂಡಿರುವವು. ಇಲ್ಲಿ ವಿವೇಕವೇನಂದರೆ, ಪರಮಾತ್ಮನ ಒಂದೇ ರೂಪವು ಕೂಡ ಅಚಿಂತ್ಯ ಸಾಮರ್ಥ್ಯವುಳ್ಳದ್ದರಿಂದ ಅನೇಕ ರೂಪಗಳ ದರ್ಶನವನ್ನು ಅರ್ಜುನನಿಗೆ ತೋರಿಸಿದ್ದು ಅನಂತ ರೂಪಗಳ ಸಮುದಾಯದ ಅಭಿಪ್ರಾಯದಿಂದ ಹೇಳಿ ಇದೆ.

೬. ನಿನ್ನ ಅನಂತರೂಪಗಳನ್ನು ನೋಡೆಂದು ಹೇಳಿದಿ; ಆದರೆ, ಅದರಲ್ಲಿ ವಿಶೇಷವೇನೆಂದು ಕೇಳಿದ್ದಕ್ಕೆ ಶ್ರೀಕೃಷ್ಣನ ಉತ್ತರ:—

पश्यादित्यान्वसून्रुद्रानश्विनौ मरुतस्तथा ।
बहून्यदृष्टपूर्वाणि पश्याश्चर्याणि भारत ॥ ६ ॥

ಅಂ—ಭರತಕುಲೋತ್ಪನ್ನನೇ, ನನ್ನ ವಿಶ್ವರೂಪದಲ್ಲಿ ದ್ವಾದಶ ಆದಿತ್ಯರೂ, ಅಷ್ಟ ವಸುಗಳೂ, ಏಕಾದಶ ರುದ್ರರೂ, ಐವತ್ತು ಮರುದ್ಗಣರೂ, ಇರುವದಲ್ಲದೆ ನೀನು ಮೊದಲು ಎಂದೂ ಕಾಣದ ಅತ್ಯಾಶ್ಚರ್ಯಕರವಾದ ವಸ್ತುಗಳನ್ನು ನೋಡು.

೭.

**इहैकस्थं जगत्कृत्स्नं पश्याद्य सचराचरम् ।**
**मम देहे गुडाकेश यच्चान्यद्द्रष्टुमिच्छसि ॥ ७ ॥**

ಅಂ—ನನ್ನೀ ದೇಹದಲ್ಲಿ ಚೇತನಾಚೇತನಾತ್ಮಕ ಜಗತ್ತನ್ನು ನೋಡು. ನಿದ್ದೆಯನ್ನು ಈಡಾಡಿದವನೇ, ಈ ಜಗವೆಲ್ಲ ನನ್ನ ದೇಹದಲ್ಲಿ ಒಂದು ಭಾಗದಲ್ಲಿ ಅಡಗಿರುವದು; ಮೇಲಾಗಿ, ನೀನು ನೋಡಬೇಕೆಂದು ಬಯಸುವದನ್ನೆಲ್ಲ ನನ್ನಲ್ಲಿ ನೋಡು

೮.

**न तु मां शक्यसे द्रष्टुमनेनैव स्वचक्षुषा ।**
**दिव्यं ददामि ते चक्षुः पश्य मे योगमैश्वरम् ॥ ८ ॥**

ಅಂ—ಪಾರ್ಥ, ನೀನಂತೂ ನನ್ನ ಸ್ವರೂಪವನ್ನು ನೋಡಲಿಚ್ಛಿಸುವಿ. ನಾನು ಕೂಡ ಆಗಲಿ ಎಂದು ಹೇಳಿದೆ; ಆದರೂ, ನಿನ್ನ ಕಣ್ಣುಗಳಿಂದ ನನ್ನ ಸ್ವರೂಪವನ್ನು ನೋಡುವದು ಶಕ್ಯವಲ್ಲವಾದ್ದರಿಂದ ನಾನು ನಿನಗೆ ದಿವ್ಯ ನೇತ್ರಗಳನ್ನು ಕೊಡುವೆ; ಅಂದರೆ, ನಿನಗೆ ಅಂತಹ ಸ್ವರೂಪವನ್ನು ನೋಡುವ ಸಾಮರ್ಥ್ಯವನ್ನೀಯುವೆ. ಅದರಿಂದ ನೀನು ಈಶ್ವರಸಂಬಂಧವಾದ ನನ್ನ ಬಲವನ್ನು ನೋಡು.

೯. ಸಂಜಯನು ಧೃತರಾಷ್ಟ್ರನನ್ನು ಕುರಿತು ಮುಂದೆ ನಡೆದ ಸಂಗತಿಯನ್ನು ಹೇಳಿದ್ದು:—

**संजय उवाच ।**
**एवमुक्त्वा ततो राजन् महायोगेश्वरो हरिः ।**
**दर्शयामास पार्थाय परमं रूपमैश्वरम् ॥ ९ ॥**

ಅಂ—ಅರಸನೇ, ಮಹಾ ಸಮರ್ಥನಾದ ಪರಮಾತ್ಮರೂಪಿ ಶ್ರೀಕೃಷ್ಣನು “ಅರ್ಜುನಾ, ನನ್ನ ಅನಂತ ರೂಪಗಳನ್ನು ನೋಡು” ಎಂದು ಹೇಳಿದ ಬಳಿಕ ಅವನಿಗೆ ಬೆರಗುಗೊಳಿಸುವ ತನ್ನ ಸ್ವರೂಪವನ್ನು ತೋರಿಸಿದನು. ಇಲ್ಲಿ ವಿವೇಕವೇನಂದರೆ, ಮಾಡುವ ಯಜ್ಞಗಳಲ್ಲಿ ತನ್ನ ಭಾಗವನ್ನು ಸ್ವೀಕರಿಸುವದರಿಂದ ಅವನಿಗೆ ‘ಹರಿ’ ಎಂದರೆ ಅನೇಕ ಐಶ್ವರ್ಯಗಳುಳ್ಳ ನಾಮವು ಬಂದಿದೆ. ಈ ವಿಷಯಕ್ಕೆ ಮೋಕ್ಷಧರ್ಮದ ವಚನವು ಪ್ರಮಾಣವಾಗಿದೆ. ಪರಮಾತ್ಮನು ಅಪ್ರಾಕೃತಸ್ವರೂಪವುಳ್ಳವನಾದರೂ, ಅನೇಕ ರೂಪಗಳನ್ನು ಧರಿಸಿ, ಅನಂತ ಪೂಜಾಸ್ಥಾನಗಳಲ್ಲಿ ಒಂದೇ ಕಾಲಕ್ಕೆ ಬಂದು ಅಲ್ಲಲ್ಲಿಯ ತನ್ನ ಭಾಗಗಳನ್ನು ಸ್ವೀಕರಿಸುವನಲ್ಲ; ಅಂದಬಳಿಕ, ಅವನ ಮಹಿಮೆ ಎಷ್ಟೆಂತು ಬಣ್ಣಿಸಬೇಕು !

೧೦–೧೧. ಶ್ರೀಕೃಷ್ಣನ ವಿಶ್ವರೂಪವನ್ನು ವರ್ಣಿಸಿದ್ದು:—

**अनेकवक्त्रनयनमनेकाद्भुतदर्शनम् ।**
**अनेकदिव्याभरणं दिव्यानेकोद्यतायुधम् ॥ १० ॥**
**दिव्यमाल्यांबरधरं दिव्यगंधानुलेपनम् ।**
**सर्वाश्चर्यमयं देवमनंतं विश्वतोमुखम् ॥ ११ ॥**

ಅಂ—ಇಲ್ಲಿ ಅನೇಕ ಶಬ್ದವು ಅನಂತವೆಂಬ ಅರ್ಥವನ್ನು ಹೇಳುವದು. ಹಲವು ಮುಖ ಕಣ್ಣುಗಳುಳ್ಳ, ಅನಂತ ಆಭರಣ ಹಾಗೂ ಎತ್ತಿದ ಆಯುಧಗಳುಳ್ಳ, ಅತ್ಯದ್ಭುತ ನೋಟವದು! ದಿವ್ಯ ಮಾಲ್ಯ ಹಾಗು ಉಡುಪುಗಳನ್ನು ತೊಟ್ಟ, ಮಘಮಘಿಸುವ ಗಂಧವನ್ನು ಲೇಪಿಸಿಕೊಂಡ, ಜಗತ್ತಿನಲ್ಲಿ ಆಶ್ಚರ್ಯವುಳ್ಳ ಎಲ್ಲ ಪದಾರ್ಥಗಳುಳ್ಳ, ಕ್ರೀಡಾದಿ ಗುಣಗಳುಳ್ಳ, ದೇಶಕಾಲಗಳಿಂದ ಮಿತಿ ಇಲ್ಲದ, ಎಲ್ಲ ದಿಕ್ಕುಗಳಲ್ಲಿ ಮುಖವುಳ್ಳವನಾದ ಭಗವಂತನ ಇಂಥ ರೂಪವನ್ನು ಅರ್ಜುನನು ಕಣ್ಣಾರೆ ಕಂಡನು.

೧೨.

दिवि सूर्यसहस्रस्य भवेद्युगपदुत्थिता ।
यदि भाः सदृशी सा स्याद्भासस्तस्य महात्मनः ॥ १२ ॥

ಅಂ—ಇದಲ್ಲದೆ, ಆಕಾಶದಲ್ಲಿ ಅನಂತ ಸೂರ್ಯರ ಸಮುದಾಯವು ಒಂದೇ ಕಾಲಕ್ಕೆ ಬೆಳಗಿದರೂ, ಮೇಲೆ ಹೇಳಿದ ಭಗವಂತನ ವಿಶ್ವರೂಪದ ಕಾಂತಿಗೆ ಸರಿಯಾಗದು. ಇದರಿಂದ ಆ ರೂಪದ ಕಾಂತಿಗೆ ಉಪಮೆಯೇ ಇಲ್ಲವೆಂದು ಹೇಳಿದಂತಾಯಿತು.

೧೩. ಮುಂದೇನಾಯಿತೆಂಬುದನ್ನು ಕುರಿತು ಹೇಳಿದ್ದು :—

तत्रैकस्थं जगत्कृत्स्नं प्रविभक्तमनेकधा ।
अपश्यद्देवदेवस्य शरीरे पांडवस्तदा ॥ १३ ॥

ಅಂ—ದೇವತೆಗಳಿಗೆ ಒಡೆಯನಾದ ಶ್ರೀಕೃಷ್ಣನು ಅರ್ಜುನನಿಗೆ ವಿಶ್ವರೂಪವನ್ನು ತೋರಿಸಲು ಅದರಲ್ಲಿ ದೇವ, ದಾನವ, ಮಾನವ, ಮುಂತಾದ ಭೇದಗಳುಳ್ಳ ಈ ಜಗತ್ತು ಒಂದು ಮೂಲೆಯಲ್ಲಿ ಇರುವದಾಗಿ ಅರ್ಜುನನು ಕಂಡನು.

೧೪.

ततः स विस्मयाविष्टो हृष्टरोमा धनंजयः ।
प्रणम्य शिरसा देवं कृतांजलिरभाषत ॥ १४ ॥

ಅಂ—ವಿಶ್ವರೂಪದ ದರ್ಶನವಾದಬಳಿಕ ಬೆರಗುಗೊಂಡವನಾದ ಅರ್ಜುನನ ಮೈಮೇಲೆ ಹರ್ಷಾತಿರೇಕದಿಂದ ರೋಮಾಂಚಗಳೆದ್ದವು; ಬಳಿಕ ಅವನು ತಲೆಬಾಗಿ–ಕೈಮುಗಿದು ನುಡಿದದ್ದು.

೧೫. ಅರ್ಜುನನು ತಾನು ಕಂಡ ವಿಶ್ವರೂಪವನ್ನು ಅನುವಾದಿಸುತ್ತ ಶ್ರೀಕೃಷ್ಣನನ್ನು ಮನವಾರೆ ಹೊಗಳಿದ್ದು :—

अर्जुन उवाच ।
पश्यामि देवांस्तव देवदेहे
सर्वांस्तथा भूतविशेषसंघान् ।
ब्रह्माणमीशं कमलासनस्थ-
मृषींश्च सर्वानुरगांश्च दिव्यान् ॥ १५ ॥

ಅಂ—ಕ್ರೀಡಾದಿಗುಣಗಳಿಂದ ಯುಕ್ತನೇ, ನಿನ್ನ ದೇಹದಲ್ಲಿ ಸಕಲ ದೇವತೆ, ಪ್ರಾಣಿಕೋಟಿ, ಚತುರ್ಮುಖ, ಅವನ ತೊಡೆಯಮೇಲೆ ಕುಳಿತ ರುದ್ರ, ಋಷಿ, ದಿವ್ಯಸರ್ಪ, ಇವರೆಲ್ಲರನ್ನೂ ಕಂಡೆ. ಪದ್ಮಪುರಾಣದಲ್ಲಿ "ಚತುರ್ಮುಖನು ಶ್ರೀವಿಷ್ಣುವಿನನ್ನೂ, ರುದ್ರನು ಚತುರ್ಮುಖನನ್ನೂ, ದೇವತೆಗಳು ರುದ್ರನನ್ನೂ, ಹೀಗೆ ಅವರವರ ಅವಯವಗಳನ್ನಾಶ್ರಯಿಸಿ ಇರುವರು" ಎಂದು ಉಕ್ತವಾಗಿದೆ.

೧೬.

अनेकबाहूदरवक्त्रनेत्रं
पश्यामि त्वां सर्वतोऽनंतरूपम् ।
नांतं न मध्यं न पुनस्तवादिं
पश्यामि विश्वेश्वर विश्वरूप ॥ १६ ॥

ಅಂ—ಜಗದೊಡೆಯನೇ, ಪೂರ್ಣನೇ, ನೀನು ಲೆಖ್ಖವಿಲ್ಲದಷ್ಟು ಕೈ, ಹೊಟ್ಟೆ, ಬಾಯಿ, ಕಣ್ಣುಗಳುಳ್ಳವ; ಎಲ್ಲೆಲ್ಲಿ ನೋಡಿದರೂ, ನಿನ್ನ ರೂಪವೇ; ತುದಿ ಮೊದಲಿಲ್ಲದವ. ಇಲ್ಲಿ ವಿವೇಕವೇನಂದರೆ, ಹಿಂದಿನ 'ಅನೇಕ' ಶಬ್ದವು ೧೦ನೆಯ ಶ್ಲೋಕದಲ್ಲಿ ಹೇಳಿದಂತೆ, ಅನಂತಪರವಾದುದರಿಂದ ಹಿಂದೆ ಹೇಳಿದ್ದರ ಅನುವಾದವನ್ನು ಇಲ್ಲಿ ಮಾಡಿದ್ದರಿಂದ ಪುನರುಕ್ತಿಯು ದೋಷವಿಲ್ಲ. ಇಲ್ಲಿ ನಿಷೇಧಾರ್ಥ ಪ್ರದರ್ಶಕ ನ ಶಬ್ದವನ್ನು ಮೂರಾವರ್ತಿ ಹೇಳಿದ್ದರಿಂದ ಆದರ ಸೂಚಿಸುವದು. ತುದಿಮೊದಲಿಲ್ಲವೆಂದು ಹೇಳಿದ್ದರಿಂದ ಮಧ್ಯಮಾವಸ್ಥೆಯು ಸಿದ್ಧವಾದರೂ, ಮತ್ತೆ ಆ ಅವಸ್ಥೆ ಇಲ್ಲೆಂದು ಹೇಳಿದ್ದು ಉಪಚಾರಕ್ಕಾಗಿ ಅಲ್ಲೆಂದು ಸೂಚಿಸಲು.

೧೭.

किरीटिनं गदिनं चक्रिणं च
तेजोराशिं सर्वतो दीप्तिमंतम् ।
पश्यामि त्वां दुर्निरीक्ष्यं समंताद्
दीप्तानलार्कद्युतिमप्रमेयं ॥ १७ ॥

ಅಂ—ನೀನು ಕಿರೀಟ, ಗದಾ, ಚಕ್ರಗಳಿಂದ ಯುಕ್ತನು. ಎಲ್ಲೆಡೆಯಲ್ಲಿ ಬೆಳಕಿನ ಹೊಯ್ಲನ್ನು ಹೊರಚಲ್ಲುವ ತೇಜಃಪುಂಜನು. ಆದ್ದರಿಂದ ನಿನ್ನನ್ನು ಕಣ್ದೆರೆದು ನೋಡುವದು ಅಸಾಧ್ಯವು. ಏಕೆಂದರೆ, ನಿನ್ನ ಕಾಂತಿಯು ಅಗ್ನಿಸೂರ್ಯರನ್ನು ಮೀರಿದ್ದು. ಅದರಿಂದಲೇ ಅಮಿತ ತೇಜೋರಾಶಿಯು. ಇಲ್ಲಿ ಅಗ್ನಿ ಸೂರ್ಯರ ಕಾಂತಿಯು ದೃಷ್ಟಾಂತದಿಂದ ಹೇಳಿದ ಕಾಂತಿಯು ಇಷ್ಟೇ ಎಂದು ಹೇಳಿದ್ದರ ಮಿತಿಯು ದೂರಾಯಿತು.

೧೮.

त्वमक्षरं परमं वेदितव्यं
त्वमस्य विश्वस्य परं निधानम् ।
त्वमव्ययः शाश्वतधर्मगोप्ता
सनातनस्त्वं पुरुषो मतो मे ॥ १८ ॥

ಅಂ—ನೀನು ನಾಶರಹಿತನೂ, ಸರ್ವೋತ್ತಮನೂ, ತಿಳಿಯತಕ್ಕ ಪರಮವಸ್ತುವೂ, ಈ ಜಗಕ್ಕೆ ಮುಖ್ಯಾಶ್ರಯನೂ, ಇರುವಿ; ನಾಲ್ಕು ಬಗೆಯ ನಾಶಗಳಿಂದ ಶೂನ್ಯನು, ಅನಾದಿ ಪರಂಪರೆಯಿಂದ ನಡೆದುಬಂದ ಧರ್ಮರಕ್ಷಕನು, ಅನಾದಿನಿತ್ಯನು, ಜೀವರಾಶಿಗಳಲ್ಲಿ ಅಂತರ್ಗತನಾದ್ದರಿಂದ 'ಪುರುಷ' ಶಬ್ದವಾಚ್ಯನು ಎಂದು ಬಲ್ಲೆ.

೧೯.

अनादिमध्यांतमनंतवीर्य-
मनंतबाहुं शशिसूर्यनेत्रं ।
पश्यामि त्वां दीप्तहुताशवक्त्रं
स्वतेजसा विश्वमिदं तपंतम् ॥ १९ ॥

ಅಂ—ನೀನು ಗುಣಗಳಿಂದ ಆದಿ, ಮಧ್ಯ, ಅಂತರಹಿತನು. ( ಹಿಂದೆ ೧೬ನೆಯ ಶ್ಲೋಕದಲ್ಲಿ ಆದಿ, ಮಧ್ಯ, ಅಂತಗಳಿಲ್ಲ ಎಂದು ಹೇಳಿದೆ. ಆದ್ದರಿಂದ ಪುನರುಕ್ತಿಯು ದೋಷವಿಲ್ಲ. ) ಅನಂತ ಬಾಹುಗಳುಳ್ಳನೀನು. ಚಂದ್ರಸೂರ್ಯರೇ ನಿನ್ನ ಕಣ್ಣುಗಳು. ( ಇಲ್ಲಿ ಜನ್ಯಜನಕ ಸಂಬಂಧದಿಂದ ಅಭೇದ ವಚನವೆಂದು ತಿಳಿಯಬೇಕು. ಈ ಬಗ್ಗೆ ಋಗ್ವೇದದಲ್ಲಿ **चंद्रमा मनसो** जातः ಎಂಬ ಮಂತ್ರವು ಪ್ರಮಾಣ ). ಧಗಧಗಿಸುವ ಕೆಂಡದಿಂದ ಉಗಿಯುವ ಮುಖವು. ನಿನ್ನ ತೇಜಸ್ಸಿನಿಂದ ಈ ವಿಶ್ವವೆಲ್ಲ ಸುಡುತ್ತಿದೆ. ಹಾಗಾದರೆ, ಪುರುಷಸೂಕ್ತ ಮಂತ್ರದಲ್ಲಿ ಚಂದ್ರನು ಅವನ ಮನಸಿನಿಂದ ಹುಟ್ಟಿರುವನೆಂದು ಹೇಳಿದ್ದು, ಇಲ್ಲಿ ಕಣ್ಣಿನಿಂದ ಉತ್ಪತ್ತಿ ಹೇಳಿದ್ದರಿಂದ ವಿರೋಧಬರಲಿಲ್ಲವೇ ಎಂದು ಕೇಳಿದರೆ, ಅವನಿಗೆ ಅನಂತರೂಪಗಳಿರುವದರಿಂದ ಯಾವ ವಿರೋಧವೂ ಇಲ್ಲ.

೨೦.

द्यावापृथिव्योरिदमंतरं हि
व्याप्तं त्वयैकेन दिशश्च सर्वाः ।
दृष्ट्वाद्भुतं रूपमुग्रं तवेदं
लोकत्रयं प्रव्यथितं महात्मन् ॥ २० ॥

ಅಂ—ನೀನು ಒಂದೇ ರೂಪದಿಂದ ನೆಲ, ಮುಗಿಲಿನ ಭಾಗವನ್ನೂ, ಬೇರೆ ರೂಪದಿಂದ ಎಲ್ಲ ದಿಕ್ಕುಗಳನ್ನೂ, ವ್ಯಾಪಿಸಿರುವಿ. ಮಹಾಮಹಿಮನೇ, ಇಂಥ ನಿನ್ನ ಅದ್ಭುತ ವಿರಾಟ ರೂಪವನ್ನು ಕಂಡು ಮೂರು ಲೋಕಗಳು ಭಯದಿಂದ ಗಡಗಡ ನಡುಗುತ್ತಿರುವಂತೆ ಕಾಣಿಸುತ್ತದೆ. ಇಲ್ಲಿ ವಿವೇಕವೇನಂದರೆ, ಈ ರೂಪವು ಭೂಮಿಯ ಭಾರವನ್ನು ಇಳಿಸಲು ಅವತಾರ ಹೊಂದಿದ್ದರಿಂದ ಉಗ್ರವಿದ್ದಂತೆ ತೋರುವದೇ ಹೊರ್ತು ಸ್ವರೂಪದಿಂದ ಉಗ್ರವಲ್ಲ. ಕೆಲವು ದುಷ್ಟರ ಸಂಹಾರವೆಂಬ ವಿಶೇಷ ಕಾರಣದಿಂದ ಅಥವಾ ಅದು ಪದೆಪದೆ ಯಾರಿಗೂ ದೃಗ್ಗೋಚರವಾಗದ್ದರಿಂದ ಉಗ್ರವಾಗಿ ತೋರುವದು. ಆದರೆ, ಧ್ಯಾನಭಕ್ತಿಗಳಿಂದ ಸಾಕ್ಷಾತ್ಕರಿಸಿದರೆ, ಅದರಿಂದಲೇ ಆನಂದವೆಂಬುದರಲ್ಲಿ ಸಂದೇಹವಿರಕೂಡದು. ಇಲ್ಲಿ 'ಲೋಕತ್ರಯ' ಎಂಬ ಪದದಿಂದ ಮೂರು ಲೋಕಗಳಲ್ಲಿರುವ ಭಕ್ತರ ವರ್ಗವು ಗ್ರಾಹ್ಯವು. ಏಕೆಂದರೆ, ಅಭಕ್ತರಿಗೆ ಅಂಥ ರೂಪದ ದರ್ಶನವು ಅಶಕ್ಯವು; ಅಥವಾ ಪ್ರಾಣಿಗಳು ಅಂತಹ ರೂಪವನ್ನು ಕಾಣದೆ ಕೂಡ ಎಡಮ್ಮ ಮನಸಿನಲ್ಲಿಯ ಅನುಸಂಧಾನದಿಂದ ಧೇನಿಸಿ

ಅಂಜುವದನ್ನು ಕಂಡು ಜನಸಮೂಹವು ಕೂಡ ತನ್ನಂತೆ ಅದನ್ನು ನೋಡಿ ಅಂಜಬಹುದೆಂಬ ಆಲೋಚನೆಯಿಂದ ಮೂರು ಲೋಕಗಳು ಅಂಜಿರುವವೆಂದು ಅರ್ಜುನನು ನುಡಿದನೆಂದು ತಿಳಿಯಬೇಕು. ಹೀಗೆ ಅರ್ಥಮಾಡಿದರೆ, 'ಲೋಕತ್ರಯ' ಶಬ್ದವು ಭಕ್ತ-ಅಭಕ್ತಪರವಾಗಿದ್ದುದು ಸ್ಪಷ್ಟವಾಗುವದು.

**ವಿಂ ಅಂ**— ಇಲ್ಲಿ ವಿವೇಕವೇನಂದರೆ, ಪೃಥ್ವಿ ಅಂತರಿಕ್ಷ ಲೋಕಗಳನ್ನು ಒಂದು ರೂಪದಿಂದಲೂ, ಎಲ್ಲ ದಿಕ್ಕುಗಳನ್ನು ಅನ್ಯರೂಪಗಳಿಂದಲೂ, ವ್ಯಾಪಿಸಿರುವನೆಂತಲೂ ತಿಳಿಯಬೇಕು. ಆದಾಗ್ಯೂ, ಆ ರೂಪಗಳಿಗೆ ಭೇದವಿಲ್ಲ. ಮೇಲಾಗಿ, ಪರಮಾತ್ಮನ ಸ್ವರೂಪವು ಎಲ್ಲರಿಗೂ ಎಲ್ಲಕಾಲಕ್ಕೂ ಭೀತಿದಾಯಕವಲ್ಲ; ಆದರೆ, ಅಭ್ಯಾಸದಿಂದ ಆ ರೂಪವು ಆನಂದದಾಯಕವೇ ಸೈ. ಅವನು ಎಲ್ಲರಿಗೆ ದೃಷ್ಟಿಗೋಚರನಾಗದ್ದರಿಂದ ಭೀತಿದಾಯಕನೆಂದು ತೋರುವನು ಹೊರ್ತು ಭಕ್ತರಿಗೆ ಹಾಗೆ ತೋರುವದಿಲ್ಲ.

೨೧. ಅರ್ಜುನನು ವಿಶ್ವರೂಪದಲ್ಲಿ ಕಂಡ ಅನ್ಯದನ್ನು ಕೂಡ ಹೇಳಿದ್ದು :—

अमी हि त्वा सुरसंघा विशंति
केचिद्भीताः प्रांजलयो गृणंति ।
स्वस्तीत्युक्त्वा महर्षिसिद्धसंघाः
स्तुवंति त्वां स्तुतिभिः पुष्कलाभिः ॥ २१ ॥

**ಅಂ**—ಇದೋ! ಈ ಮುಕ್ತದೇವತೆಗಳ ಸಂಘವು ನಿನ್ನಲ್ಲಿ ಧುಮುಕುತ್ತಿರುವದು. ಈ ವಿಷಯಕ್ಕೆ "ಮುಕ್ತರು ಒಳಸೇರುವದು, ಹೊರಬರುವದು ಅವರ ಸ್ವೇಚ್ಛೆಯ ಕೆಲಸ" ಎಂಬ ಪುರಾಣ ವಚನವು ಪ್ರಮಾಣ. ಇದರಿಂದ, ಹಿಂದೆ ೧೫ನೆಯ ಶ್ಲೋಕದಲ್ಲಿ ಹೇಳಿದ್ದಕ್ಕೆ ಪುನರುಕ್ತಿಯು ದೋಷವಿಲ್ಲ, ಏಕೆಂದರೆ ಅಲ್ಲಿ ಅಮುಕ್ತರ ವಿಷಯಕ್ಕೂ, ಇಲ್ಲಿ ಮುಕ್ತರ ವಿಷಯಕ್ಕೂ, ಹೇಳಿಇದೆ. ನಿನ್ನಲ್ಲಿ ಪ್ರವೇಶಿಸುವವರಲ್ಲಿ ಕೆಲವರು ಭಯಭೀತರಾಗಿ ಕೈಜೋಡಿಸಿ ಸ್ತುತಿಸುತ್ತಿರುವರು. ನೀನು ಗುಣಪೂರ್ಣನೆಂದು ಮಹರ್ಷಿ-ಸಿದ್ಧವರ್ಗದವರು ಸ್ವಸ್ತಿ ಎಂದು ನಿನ್ನ ಜಯ ಜಯಕಾರ ಪೂರ್ವಕ ಹೊಗಳಿಕೆಯ ಮಳೆಗರಿಯುತ್ತಿಹರು.

೨೨.

रुद्रादित्या वसवो ये च साध्या
विश्वेऽश्विनौ मरुतश्चोष्मपाश्च ।
गंधर्वयक्षासुरसिद्धसंघा
वीक्षंते त्वां विस्मिताश्चैव सर्वे ॥ २२ ॥

**ಅಂ**—ಏಕಾದಶ ರುದ್ರರು, ಅಷ್ಟ ವಸುಗಳು, ಸಾಧ್ಯರು. ಅಶ್ವಿನಿಗಳು, ಐವತ್ತು ಮರುದ್ಗಣಗಳು, ಗಂಧರ್ವರು, ಯಕ್ಷರು, ಅಸುರರು, ಸಿದ್ಧರು, ಇವರ ಸಮೂಹವೆಲ್ಲ ನಿನ್ನನ್ನೇ ಬೆಪ್ಪರಾಗಿ ನೋಡುತ್ತಿಹರು.

೨೩.

रूपं महत्ते बहुवक्त्रनेत्रं
महाबाहो बहुबाहूरुपादम् ।
बहूदरं बहुदंष्ट्राकरालं
दृष्ट्वा लोकाः प्रव्यथितास्तथाऽहम् ॥ २३ ॥

ಅಂ—ಲೆಕ್ಕವಿಲ್ಲದ ಮುಖ, ಕಣ್ಣು, ಬಾಹು, ತೊಡೆ, ಪಾದ, ಹೊಟ್ಟೆ, ಹಲ್ಲು, ದವಡೆ, ಇವುಗಳುಳ್ಳ ನಿನ್ನ ಅದ್ಭುತರೂಪವನ್ನು ಕಂಡು ಮೂರು ಲೋಕಗಳು ಬೆದರಿಬೆಚ್ಚಿರುವಂತೆ ನನ್ನ ದುಸ್ಥಿತಿಯಾಗಿರುವದು.

೨೪.

नभःस्पृशं दीप्तमनेकवर्णं
व्यात्ताननं दीप्तविशालनेत्रम् ।
दृष्ट्वा हि त्वां प्रव्यथितांतरात्मा
धृतिं न विंदामि शमं च विष्णो ॥ २४ ॥

ಅಂ—ಸರ್ವವ್ಯಾಪಕ ಪರಮಾತ್ಮನೇ, ಮುಗಿಲುಮುಟ್ಟುವ, ಹಲವು ಬಣ್ಣಗಳಿಂದ ಝುಗಝುಗಿಸುವ, ಬಾಯ್ದೆರೆದ, ಪ್ರಕಾಶಿಸುವ ವಿಶಾಲ ಕಣ್ಣುಗಳುಳ್ಳ, ನಿನ್ನ ರೂಪವನ್ನು ಕಂಡು ನನಗೆ ದಿಕ್ಕುತೋಚದಂತಾಗಿ ಧೈರ್ಯಗುಂದಿ ಬಳಲುತ್ತಿರುವೆ. ಸಮಾಧಾನ ಎಷ್ಟೂ ಇಲ್ಲ.

೨೫.

दंष्ट्राकरालानि च ते मुखानि
दृष्ट्वैव कालानलसंनिभानि ।
दिशो न जाने न लभे च शर्म
प्रसीद देवेश जगन्निवास ॥ २५ ॥

ಅಂ—ಪ್ರಲಯಕಾಲದ ಜ್ವಾಲೆಯಂತೆ ಭುಗಿಲೆನ್ನುವ ಕೋರೆ–ದವಡೆಗಳುಳ್ಳ ನಿನ್ನ ಮುಖವನ್ನು ಕಂಡಂತೂ ನಾನು ದಿಗ್ಗೆಟ್ಟಿರುವೆ. ಸುಖದ ಸುದ್ದಿಯಂತೂ ದೂರೇ ಸರಿ. ಜಗದಾಧಾರನೇ, ದೇವತೆಗಳ ಒಡೆಯನೇ, ಪ್ರಸನ್ನನಾಗಿ ನನ್ನ ಮೇಲೆ ಅನುಗ್ರಹಮಾಡು.

೨೬–೨೭

अमी च त्वां धृतराष्ट्रस्य पुत्राः
सर्वे सहैवावनिपालसंघैः ।
भीष्मो द्रोणः सूतपुत्रस्तथाऽसौ
सहास्मदीयैरपि योधमुख्यैः ॥ २६ ॥

वक्त्राणि ते त्वरमाणा विशंति
दंष्ट्राकरालानि भयानकानि ।
केचिद्विलग्ना दशनांतरेषु
संदृश्यंते चूर्णितैरुत्तमांगैः ॥ २७ ॥

ಅಂ—ಅದೋ! ನೋಡು ಧೃತರಾಷ್ಟ್ರನ ಮಕ್ಕಳು. ಎಲ್ಲ ಅರಸರ ಗುಂಪಿನೊಡಗೂಡಿದ ಭೀಷ್ಮ, ದ್ರೋಣ, ಕರ್ಣರು, ಯುದ್ಧದಲ್ಲಿ ಹಿರಿದಾದ ನಮ್ಮ ಯೋಧರು, ಇವರೆಲ್ಲರು ಹಲ್ಲು-ದವಡೆಗಳಿಂದ ಭೀಕರವಾಗಿರುವ ನಿನ್ನ ಬಾಯುಲ್ಲಿ ಭರದಿಂದ ನುಗ್ಗುತ್ತಿರುವರು. ಅದೇ ಕಾಲಕ್ಕೆ, ಸಾವಿಗೆ ತುತ್ತಾದ ಕೆಲವರ ರುಂಡಗಳು ನುಚ್ಚುನುರಿಯಾಗಿ ನಿನ್ನ ಹಲ್ಲುಸಂದುಗಳಲ್ಲಿ ಅಂಟಿಕೊಂಡಂತೆ ಕಾಣುವವು. ಇಲ್ಲಿ ವಿಶೇಷವೇನಂದರೆ, ಮೇಲ್ಕಾಣಿಸಿದ ಧೃತರಾಷ್ಟ್ರಪುತ್ರ ಮೊದಲಾದವರು ಪರಮಾತ್ಮನ ಮುಖವನ್ನು ತಾವಾಗಿ ಸೇರದಿದ್ದರೂ, ಅವನು ತನ್ನ ಹಲವು ಮುಖಗಳಿಂದ ಎರಡೂ ಸೇನೆಗಳಲ್ಲಿಯ ಸೇನಾನಾಯಕರನ್ನು ನುಂಗುತ್ತಿರುವಂತೆ ತೋರುವನೆಂದು ತಿಳಿಯಬೇಕು. ಅರ್ಜುನನು ಕಂಡಂತೆ ಅನ್ಯರಿಗೂ ಹಾಗೆ ಕಾಣಿಸಿತೇ ಎಂದು ಕೇಳಿದರೆ, ಅರ್ಜುನನಿಗೆ ದಿವ್ಯದೃಷ್ಟಿಯಮೂಲಕ ಹಾಗೆ ಕಂಡದ್ದು ಯೋಗ್ಯ; ಅನ್ಯರಿಗೆ ಅಂಥ ದೃಷ್ಟಿ ಇಲ್ಲದ್ದರಿಂದ ಅವರಿಗೆ ಕಾಣಿಸಲಿಲ್ಲೆಂಬುದನ್ನು ನಾವು ಹೇಳಲಿಕ್ಕೇಬೇಡ.

೨೮.

यथा नदीनां बहवोऽम्बुवेगाः
समुद्रमेवाभिमुखा द्रवंति ।
तथा तवामी नरलोकवीरा
विशंति वक्त्राण्यभिविज्वलंति ॥ २८ ॥

ಅಂ—ಭೋರ್ಗರೆಯುತ್ತ ಹರಿಯುವ ನದಿಯ ಪ್ರವಾಹವು ಸಮುದ್ರದಕಡೆಗೇ ಧುಮ್ಮಿಕ್ಕುವಂತೆ ಮೃತ್ಯುಲೋಕದ ಈ ವೀರರು ನಿಗಿನಿಗಿಸುವ ಕೆಂಡದಂತೆ ಭುಗಿಭುಗಿಸುವ ನಿನ್ನ ಮುಖದಲ್ಲಿ ಪರವಶರಾಗಿ ಬೀಳುತ್ತಿಹರು.

೨೯.

यथा प्रदीप्तं ज्वलनं पतंगा
विशंति नाशाय समृद्धवेगाः ।
तथैव नाशाय विशंति लोका-
स्तवापि वक्त्राणि समृद्धवेगाः ॥ २९ ॥

ಅಂ—ಭರಗುಟ್ಟಿ ಹಾರಾಡುವ ದೀಪದ ಹುಳಗಳು ತಮ್ಮ ಸಾವಿಗಾಗಿ ಉರಿಯುವ ದೀಪಕ್ಕೆ ಅಡರುವಂತೆ, ಈ ಪ್ರಾಣಿಗಳೆಲ್ಲರು ತಮ್ಮ ನಾಶಕ್ಕಾಗಿ ನಿನ್ನ ಮುಖದಲ್ಲಿ ತೆರಪಿಲ್ಲದೆ ತೂರುತ್ತಿರುವರು. ಇದರಿಂದ, ಪರಮಾತ್ಮನೇ ಲಗುಬಗೆಯಿಂದ ನುಂಗುವಂತೆ ಅವನಲ್ಲಿ ಪ್ರಾಣಿಗಳ ಪ್ರವೇಶವಿತ್ತೆಂದು ತಿಳಿಯಬೇಕು.

೩೦.

लेलिह्यसे ग्रसमानः समंता-
ल्लोकान्समग्रान्वदनैर्ज्वलद्भिः ।
तेजोभिरापूर्य जगत्समग्रं
भासस्तवोग्राः प्रतपंति विष्णो ॥ ३० ॥

**ಅಂ**—ಅಪರಿಚ್ಛಿನ್ನ ವ್ಯಾಪ್ತಿಯುಳ್ಳವನೇ, ಸುತ್ತುಮುತ್ತಲಿನ ಪ್ರಾಣಿಗಳನ್ನೆಲ್ಲ ನೀನು ನಿಗಿನಿಗಿಯಾಗಿ ಸುಡುವ ನಿನ್ನ ಹಲವು ಬಾಯಿಗಳಿಂದ ನುಂಗುವದರಿಂದ, ನೆತ್ತರಹತ್ತಿದ ನಿನ್ನ ತುಟಿ, ಗದ್ದ, ಮೊದಲಾದವುಗಳನ್ನು ಆಗಾಗ್ಗೆ ನಿನ್ನ ನಾಲಿಗೆಯನ್ನು ಹೊರಳಾಡಿಸಿ ನೆಕ್ಕುತ್ತಿರುವಂತೆ ಕಾಣುತ್ತದೆ. ನಿನ್ನ ಸಾಮರ್ಥ್ಯದಿಂದಲೇ ಸಕಲ ಜಗವನ್ನು ನೀನು ವ್ಯಾಪಿಸಿದ್ದರಿಂದ ನಿನ್ನ ಕಾಂತಿಯಿಂದಲೇ ದೇಹ ಮುಂತಾದ ಪದಾರ್ಥಗಳಲ್ಲಿ ದಾಹವುಂಟಾಗಿರುವದು.

೩೧. ಅರ್ಜುನನು ಪರಮಾತ್ಮನ ಸ್ವರೂಪ, ಗುಣ, ಕರ್ಮಗಳನ್ನು ಅರಿತಿದ್ದರೂ, ಅವುಗಳ ಬಗ್ಗೆ ಹೆಚ್ಚಿನ ಜ್ಞಾನಸಂಪಾದಿಸುವ ಅಪೇಕ್ಷೆಯಿಂದ ಕೇಳಿದ್ದು:—

आख्याहि मे को भवानुग्ररूपो
नमोऽस्तु ते देववर प्रसीद ।
विज्ञातुमिच्छामि भवंतमाद्यं
न हि प्रजानामि तव प्रवृत्तिम् ॥ ३१ ॥

**ಅಂ**—ದೇವತೆಗಳಿಗೆ ಹಿರಿಯನೇ, ಇಂಥ ಉಗ್ರರೂಪವುಳ್ಳ ನೀನಾರು ? ಅಂದರೆ, ನೀನು ಈ ಉಗ್ರರೂಪ ಧರಿಸುವ ಕಾರಣವೇನು ? ಸ್ವಾಮಿ, ಬಾಗುವೆ ನಿನಗೆ. ನನ್ನ ಮೇಲೆ ಕೃಪೆಮಾಡು. ಆದಿಪುರುಷನಾದ ನಿನ್ನ ಕುರಿತು ಹೆಚ್ಚಿನ ಜ್ಞಾನಸಂಪಾದಿಸಲು ಇಚ್ಛಿಸುವೆ. ಏಕೆಂದರೆ, ನನಗೆ ನಿನ್ನ ವ್ಯಾಪಾರವು ತಿಳಿಯದು.

**ವಿಂ ಅಂ**—ಅರ್ಜುನನು 'ನೀನಾರು' ಎಂದು ಕೇಳಿದ್ದರಿಂದ ಅವನು ಪರಮಾತ್ಮನ ಸ್ವರೂಪವನ್ನು ತಿಳಿಯದೆ ಅವನು ರುದ್ರ ಮುಂತಾದ ಯಾವನೊಬ್ಬನು ಎಂಬ ಅಭಿಪ್ರಾಯದಿಂದ ಪ್ರಶ್ನವಲ್ಲ; ಆದರೆ, ಅವನಿಗೆ ಪರಮಾತ್ಮನ ಸ್ವರೂಪವು ತಿಳಿದಿದ್ದರೂ, ಅವನ ಅನ್ಯಧರ್ಮಗಳನ್ನು ತಿಳಿಯಲು ಹಾಗೆ ಪ್ರಶ್ನಮಾಡಿದನೆಂದು ತಿಳಿಯಬೇಕು.

೩೨. ಹೀಗೆ ಅರ್ಜುನನಿಂದ ಬಿನ್ನವಿಸಲ್ಪಟ್ಟ ಶ್ರೀಕೃಷ್ಣರೂಪಿ ಪರಮಾತ್ಮನು ನುಡಿದುದು:—

श्रीभगवानुवाच ।
कालोऽस्मि लोकक्षयकृत्प्रवृद्धो
लोकान्समाहर्तुमिह प्रवृत्तः ।
ऋतेऽपि त्वां न भविष्यंति सर्वे
येऽवस्थिताः प्रत्यनीकेषु योधाः ॥ ३२ ॥

ಅಂ—ಇಲ್ಲಿ 'ಕಾಲ' ಶಬ್ದವು ಕಲ ಧಾತುವಿನಿಂದ ಹುಟ್ಟಿದ್ದು, ಅದಕ್ಕೆ ಸಂಹಾರ, ಜ್ಞಾನ, ಓಡಿಸು, ಮುಂತಾದ ಅರ್ಥಗಳುಂಟು. ನಾನು ಸದ್ಗುಣಗಳಿಂದ ಪೂರ್ಣನು; ಆದುದರಿಂದ 'ಕಾಲ' ಶಬ್ದವಾಚ್ಯನು. ಅದರಂತೆಯೇ, ಪ್ರಮಾಣದಿಂದ ಸಿದ್ಧವಾಗಿ ಪ್ರತ್ಯಕ್ಷ ತೋರುವ ಜಗತ್ತಿನ ಸಂಹಾರ, ಜ್ಞಾನ, ಮುಂತಾದ ಕರ್ಮಗಳನ್ನು ಜರಗಿಸುವದರಿಂದ 'ಕಾಲ' ಶಬ್ದವಾಚ್ಯನು. ಇನ್ನು, ನಾನು ಉಗ್ರರೂಪಧರಿಸಿದ ಕಾರಣವೇನೆಂದು ನೀನು ಕೇಳಿದ ಪ್ರಶ್ನಕ್ಕೆ ಸಕಲ ಲೋಕಸಂಹಾರಕ್ಕಾಗಿ ನನ್ನ ಅವತಾರವೆಂದು ತಿಳಿ. ನಾನು ದೇಶಕಾಲಗಳಿಂದ ಪೂರ್ಣನು; ಅನಾದಿನಿತ್ಯನು; ನಿನ್ನ ಕಣ್ಣೆದುರಿಗೆ ತೋರುವ ಯುದ್ಧಪಂಗಡಗಳ ಕಲಿತ ವೀರರ ಸಂಹಾರಕ್ಕಾಗಿ ನಾನು ಬಂದಿರುವೆನಿಲ್ಲಿ. ಹಾಗಾದರೆ, ಇದರಲ್ಲಿ ಪಾಂಡವರ ಸಂಹಾರವೂ ಆಗುವದೋ ಹೇಗೆಂದು ಸಂಶಯುಗೊಂಡರೆ, ಹಾಗಲ್ಲ. ನಿನ್ನ ಮತ್ತು ಅಪಿ ಶಬ್ದಗಳಿಂದ ನಿನ್ನ ಅಣ್ಣತಮ್ಮಂದಿರಾದ ನಾಲ್ವರ ಹೊರ್ತು ಅನ್ಯರ ಸಂಹಾರ, ಅದರಂತೆ, ಪರಸ್ಪರ ಹೋರಾಡಲು ನಿಂತಿರುವ ನಿಮ್ಮ ಶತ್ರುಗಳಾದ ಕೌರವರ ಸೇನೆಯಲ್ಲಿಯು ಅಶ್ವತ್ಥಾಮ, ಕೃತವರ್ಮ, ಕೃಪ, ಇವರನ್ನುಳಿದು ಎಲ್ಲರ ಸಂಹಾರವಾಗುವದೆಂದು ತಿಳಿ.

೩೩. ಹಿಂದೆ (೨—೬) ನೆಯ ಶ್ಲೋಕದಲ್ಲಿ ಅರ್ಜುನನು 'ನಮಗೆ ಜಯವಾಗುವದೋ ಇಲ್ಲವೋ ಎಂಬುದು ತಿಳಿಯದ್ದರಿಂದ ಯಾವ ದಾರಿಯು ಶ್ರೇಷ್ಠವೆಂಬುವ' ಬಗ್ಗೆ ಸಂದೇಹಪಡಲಾಗಿ, 'ಅವನನ್ನು ಯುದ್ಧದಲ್ಲಿ ತೊಡಕಿಸುವದೇ ಉತ್ತಮ ಪಕ್ಷ; ಏಕೆಂದರೆ, ಅವನಿಗೆ ಎರಡೂ ವಿಧದಿಂದ ಲಾಭ ಉಂಟು; ಹೇಗಂದರೆ, (೨—೩೭) ನೆಯ ಶ್ಲೋಕದಲ್ಲಿ "ನೀನು ಸತ್ತರೆ, ಸ್ವರ್ಗ ಪಡೆಯುವಿ; ಗೆದ್ದರೆ, ಚಕ್ರವರ್ತಿಯಾಗುವಿ" ಎಂದು ಉತ್ತರ ಹೇಳಿರುವನು. ಈಗ ಅವನಿಗೆ ಸೋಲಿನ ಸಂದೇಹವೇ ಬೇಡ' ಎಂದು ಧೈರ್ಯಕೊಟ್ಟಿದ್ದು :—

तस्मात्त्वमुत्तिष्ठ यशो लभस्व
जित्वा शत्रून्भुंक्ष्व राज्यं समृद्धम् ।
मयैवैते निहताः पूर्वमेव
निमित्तमात्रं भव सव्यसाचिन् ॥ ३३ ॥

ಅಂ—ಅರ್ಜುನಾ, ನಾನು ಲೋಕಸಂಹಾರಕ್ಕಾಗಿ ಅವತಾರಧರಿಸಿ ಇಹಲೋಕದಲ್ಲಿ ಪ್ರಕಟನಾದ್ದರಿಂದ ಗೆಲವಿನ ಬಗ್ಗೆ ಅನುಮಾನಪಡಲಾಗದು, ಅದುಕಾರಣ, ಬೇಗ ಎದ್ದೇಳು, ಶತ್ರುಗಳಿಗೆ ಕಾಳಗಗೊಟ್ಟು, ಅವರನ್ನು ಒಕ್ಕಲಿಕ್ಕಿ ಯಶಸಂಪಾದಿಸಿ ರಾಜ್ಯೈಶ್ವರ್ಯವನ್ನು ಸಾರೋದ್ಧಾರವಾಗಿ ಉಪಭೋಗಿಸು. ನಿನ್ನ ಶತ್ರುಗಳು ಈ ಮೊದಲೇ ನನ್ನಿಂದ ಹತರಾಗಿದ್ದು, ಅಂದರೆ ನಾನು ಅವರ ಆಯುರ್ದಾಯವನ್ನು ಅಪಹರಿಸಿದ್ದು, ಅವರೀಗ ಸಾವಿನ ದವಡೆಯಲ್ಲಿಯೇ ಸಿಲುಕಿರುವರು. ಇನ್ನು, ಅವರನ್ನು ಪ್ರತ್ಯಕ್ಷವಾಗಿ ಸಂಹರಿಸಲು, ಸವ್ಯಸಾಚಿಯೇ, ನೀನು ನಿಮಿತ್ತಮಾತ್ರನಾಗು. ನಿನ್ನ ಹಿಂದೆ ನಿಂತಾದರೂ ಅವರನ್ನೆಲ್ಲ ನಾನೇ ಮಣ್ಣುಮುಕ್ಕಿಸುವೆ.

೩೪. ಹಾಗಾದರೆ, ದ್ರೋಣನು ಧನುರ್ವಿದ್ಯೆಯಲ್ಲಿ ಗುರು; ಭೀಷ್ಮನು ಮನಬಂದಾಗ ಸಾಯುವವನು; 'ತನ್ನ ರುಂಡವನ್ನು ನೆಲಕ್ಕುರುಳಿಸಿದವನ ತಲೆಯು ನಾಶವಾಗುವದೆಂಬ' ವರಪಡೆದ ಮೂಲಕ ಜಯದ್ರಥನು ಬಲಿಷ್ಠನು. ಸೂರ್ಯನ ಶಕ್ತಿಯುಮೂಲಕ ಕರ್ಣನು ಬಲವಂತನು. ಅದರಂತೆ ಅನ್ಯವೀರರು ಕೂಡ ಬಲವುಳ್ಳವರು; ಅಂದಮೇಲೆ ಇಂಥವರನ್ನು ಕೊಲ್ಲುವದು ಹೇಗೆಂದು ಅರ್ಜುನನು ಆಕ್ಷೇಪಿಸಿದ್ದಕ್ಕೆ ಶ್ರೀಕೃಷ್ಣನು ಸಂತೈಸಿದ್ದು :—

द्रोणं च भीष्मं च जयद्रथं च
कर्णं तथान्यानपि योधवीरान् ।
मया हतास्त्वं जहि मा व्यथिष्ठा
युध्यस्व जेतासि रणे सपत्नान् ॥ ३४ ॥

ಅಂ—ಭೀಷ್ಮ, ದ್ರೋಣ, ಜಯದ್ರಥ, ಕರ್ಣ ಮತ್ತು ಅನ್ಯವೀರರನ್ನು ಕೂಡ ನಾನೀಗಾಗಲೇ ಕೊಂದಿರುವೆ. ನೀನು ನೆವಮಾತ್ರಕ್ಕೆ ಅವರನ್ನು ಗೆಲ್ಲುವವನಾಗು. ಸುಮ್ಮನೆ ಬಳಲದಿರು. ಕಾಳಗಕ್ಕೆ ಸಿದ್ಧನಾಗು. ಯುದ್ಧದಲ್ಲಿ ನೀನೇ ಹಗೆಗಳನ್ನು ಗೆಲ್ಲುವಿ.

೩೫. ಮುಂದೇನಾಯಿತೆಂದು ಧೃತರಾಷ್ಟ್ರನು ಆತುರನಾಗಿ ಕೇಳಲು ಸಂಜಯನು ಹೇಳಿದ್ದು:—

संजय उवाच ।
एतच्छ्रुत्वा वचनं केशवस्य
कृतांजलिर्वेपमानः किरीटी ।
नमस्कृत्वा भूय एवाह कृष्णं
सगद्गदं भीतभीतः प्रणम्य ॥ ३५ ॥

ಅಂ—ಶ್ರೀಕೃಷ್ಣನು ನುಡಿದ ಮಾತು ಕೇಳಿ ಕೈಮುಗಿದು ಗಡಗಡನೆ ನಡಗುತ್ತಿರುವ ಅರ್ಜುನನು ಅವನಿಗೆ ನಮಸ್ಕಾರಮಾಡಿ ಸದ್ಗದಿತ ಕಂಠದಿಂದಲೂ, ಹೆದರುತ್ತಲೂ, ಮರಳಿ ನುಡಿದದ್ದು:—

೩೬.

अर्जुन उवाच ।
स्थाने हृषीकेश तव प्रकीर्त्या
जगत्प्रहृष्यत्यनुरज्यते च ।
रक्षांसि भीतानि दिशो द्रवंति
सर्वे नमस्यंति च सिद्धसंघाः ॥ ३६ ॥

ಅಂ—ಸಕಲೇಂದ್ರಿಯಗಳಿಗೆ ಪ್ರೇರಕನೇ, ನಿನ್ನ ಉಜ್ವಲಕೀರ್ತಿಯಿಂದ ಜಗವು ಆಲ್ಹಾದ, ಅನುರಾಗಗಳಲ್ಲಿ ಮುಳುಗೇಳುತ್ತಿರುವದು ಯೋಗ್ಯವೇ ಸರಿ. ರಾಕ್ಷಸಗಣಗಳು ಹೆದರಿ ದಿಕ್ಕುಪಾಲಾಗಿ ಓಡುವವು. ಸಿದ್ಧಗಣಗಳೆಲ್ಲ ನಿನಗೆ ಕೈಮುಗಿಯುತ್ತಿರುವರು.

೩೭.

कस्माच्च ते न नमेरन्महात्मन्
गरीयसे ब्रह्मणोऽप्यादिकर्त्रे ।
अनंत देवेश जगन्निवास
त्वमक्षरं सदसत्तत्परं यत् ॥ ३७ ॥

ಅಂ—ಗುಣಪೂರ್ಣನೇ, ನಿತ್ಯ ಸಾಮರ್ಥ್ಯಾದಿ ನಾಲ್ಕು ಗುಣಗಳುಳ್ಳವನೇ, ಶ್ರೇಷ್ಠಗುರುವಾದ ಚತುರ್ಮುಖನಿಗೆ ಆದಿಕಾರಣ ನೀನು; ಆದ್ದರಿಂದ ನಿನ್ನನ್ನು ನಮಸ್ಕರಿಸದವರಾರು ! ಅರ್ಥಾತ್ ಎಲ್ಲರೂ ಶರಣಾಗತರಾಗಲಿಕ್ಕೇಬೇಕು. ನೀನು ಅಂತರಹಿತನೂ, ದೇವತೆಗಳಿಗೆ ಒಡೆಯನೂ, ಜಗತ್ತಿಗೆ ಆಧಾರನೂ, ಚೇತನಾಚೇತನಾತ್ಮಕ ಜಗತ್ತಿಗಿಂತ ಉತ್ತಮನೂ, ' ಅಕ್ಷರ ' ಶಬ್ದವಾಚ್ಯನೂ, ನೀನಾಗಿರುವಿ.

೩೮.

त्वमादिदेवः पुरुषः पुराण-
स्त्वमस्य विश्वस्य परं निधानम् ।
वेत्तासि वेद्यं च परं च धाम
त्वया ततं विश्वमनंतरूप ।। ३८ ।।

ಅಂ—ಸಕಲ ದೇವತೆಗಳಿಗೆ ನೀನೇ ಆದಿ. ಅಲ್ಲದೆ ಅನಾದಿ ಪುರುಷನೂ, ಈ ಜಗತ್ತಿಗೆ ಉತ್ತಮ ಆಶ್ರಯನೂ, ಎಲ್ಲವನ್ನು ಬಲ್ಲವನೂ, ಜ್ಞಾನಕ್ಕೆ ಯೋಗ್ಯನೂ, ತೇಜಸ್ಸುಗಳಿಗೆ ತವರ್ಮನೆಯೂ, ಆಗಿರುವಿ. ಕಾಲದಿಂದ ಕೂಡ ನಾಶವಿಲ್ಲದ ರೂಪವುಳ್ಳವನೇ, ಈ ಜಗವನ್ನೆಲ್ಲ ನೀನೇ ವ್ಯಾಪಿಸಿರುವಿ. ಇಲ್ಲಿ ವಿವೇಕವೇನಂದರೆ, ಹಿಂದೆ (೧೬) ನೆಯ ಶ್ಲೋಕದಲ್ಲಿ ' ಪರಮಾತ್ಮನ ಕೊನೆಗಾಣೆ ' ಎಂದು ಹೇಳಿದ್ದರಿಂದ ಅವನಿಗೆ ನಾಶವಿದ್ದು, ಅರ್ಜುನನಿಗೆ ಮಾತ್ರ ಅದು ಕಾಣಲಿಲ್ಲೆಂದು ಕಂಡುಬರುವದು. ಅದರಿಂದ ಪರಮಾತ್ಮನಿಗೆ ಪರಿಮಾಣದಿಂದ ನಾಶವಿಲ್ಲೆಂದು ಸಿದ್ಧವಾಗುವದು. ಆದ್ದರಿಂದ ಇಲ್ಲಿ ಪರಮಾತ್ಮನಿಂದ ವ್ಯಾಪಿಸಲ್ಪಟ್ಟ ಜಗವೆಂದು ಹೇಳಿದಮೂಲಕ ಆ ಸಂದೇಹವು ನಿವಾರಣೆಯಾಗಿ, ಪುನರುಕ್ತಿಯ ದೋಷಬಾರದು. ಅದೇಪ್ರಕಾರ, ಹಿಂದೆ (೨೦)ನೆಯ ಶ್ಲೋಕದಲ್ಲಿ 'ಆಕಾಶ–ಪೃಥ್ವಿಗಳ ನಡುವಿನ ಎಲ್ಲ ದಿಕ್ಕುಗಳು ವ್ಯಾಪಿಸಲ್ಪಟ್ಟಿವೆ ' ಎಂದು ಹೇಳಿ ಇದೆ. ಇಲ್ಲಿ 'ಸಕಲ ಜಗವು ಅವನಿಂದ ತುಂಬಿದೆ' ಎಂದು ಹೇಳಿದ್ದರಿಂದ ಅವನು ದೇಶ, ಕಾಲ, ಗುಣಗಳಿಂದ ನಾಶರಹಿತನಾದ್ದರಿಂದ ಮಹಾಮಹಿಮೆಯುಳ್ಳವನೆಂದು ಸಿದ್ಧವಾಗುವದು. ಆದ್ದರಿಂದ ಇವೆರಡು ಶ್ಲೋಕಗಳಿಂದ ಪುನರುಕ್ತಿಯ ದೋಷ ಬರುವದಿಲ್ಲ.

೩೯. ಪರಮಾತ್ಮನಲ್ಲಿ ಅನ್ಯಗುಣಗಳಿರುವದರಿಂದ ಅವನನ್ನು ಮತ್ತೆ ಸ್ತುತಿಸಿದ್ದು :—

वायुर्यमोऽग्निर्वरुणः शशांकः
प्रजापतिस्त्वं प्रपितामहश्च ।
नमो नमस्तेऽस्तु सहस्रकृत्वः
पुनश्च भूयोऽपि नमो नमस्ते ।। ३९ ।।

ಅಂ—ನೀನು ಬಲಜ್ಞಾನ ರೂಪಿಯಾದ್ದರಿಂದ ವಾಯುವೆನಿಸುವಿ. ದೋಷನಾಶಗೊಳಿಸುವದರಿಂದ ಯಮನೆನಿಸುವಿ. ಗತಿಯಿಲ್ಲದ ಜಗವನ್ನು ಪ್ರೇರಿಸುವಿ. ಆದ್ದರಿಂದ 'ಅಗ್ನಿ' ಶಬ್ದವಾಚ್ಯ ನೀನು. ಭಕ್ತರಿಗೆ ಆಶ್ರಯಕೊಡುವದರಿಂದ ವರುಣನೆನಿಸುವಿ. ಸುಖಕೊಡುವ ಬಿರುದಾಂಕಿತನಾದ್ದರಿಂದ ನಿನಗೆ ಚಂದ್ರನೆಂದು ಹೇಳುವರು. ಪ್ರಜೆಗಳನ್ನು ಕಾಯುವದರಿಂದ ನೀನೇ ಪ್ರಜಾಪತಿ. ಎಲ್ಲರಿಗೂ ಹಿರಿಯವನಾದ್ದರಿಂದ ಮುತ್ತಜ್ಜನು. ಇದೋ, ನಿನಗೆ ಸಾವಿರಾರು ನಮಸ್ಕಾರಗಳು. ತಿರುತಿರುಗಿ ಪ್ರಣಾಮಗಳು.

೪೦.

नमः पुरस्तादथ पृष्ठतस्ते
नमोऽस्तु ते सर्वत एव सर्व ।
अनंतवीर्यामितविक्रमस्त्वं
सर्वं समाप्नोषि ततोऽसि सर्वः ॥ ४० ॥

**ಅಂ**—ಪೂರ್ಣನೇ, ದಕ್ಷಿಣೋತ್ತರಾದಿ ನಾಲ್ಕು ದಿಕ್ಕುಗಳಿಂದಲೂ, ಹಿಂದೂ, ಮುಂದೂ, ನಿನಗೆ ನಮಸ್ಕರಿಸುವೆ. ಅನಂತವೀರ್ಯನೇ, ನೀನು ಅಮಿತ ವಿಕ್ರಮಶಾಲಿಯು. ಎಲ್ಲೆಡೆಯಲ್ಲಿ ನೀನೇ ಅಡಗಿರುವದರಿಂದ ನಿನಗೆ ಸರ್ವ ಎನ್ನುವರು. ಹಾಗಾದರೆ, ಛಾಂದೋಗ್ಯ ( ೩–೧೪–೧ ), ತೈಂ ಆಂ (೩–೧೨) ಈ ಮಂತ್ರಗಳಲ್ಲಿ ಸರ್ವ ಜಗತ್ತು ಬ್ರಹ್ಮ ಎಂದು ಹೇಳಿದ್ದರಿಂದ ಜಗವು ಬ್ರಹ್ಮಸ್ವರೂಪವಾಯ್ತು; ಅಂದಬಳಿಕ, 'ನೀನು ಜಗತ್ತಿಗೆ ಆಶ್ರಯನೆಂದು' 'ನಿನ್ನಿಂದ ಈ ಜಗವು ವ್ಯಾಪ್ತವಾದದ್ದೆಂದು' ಹೇಳುವದು ಸರಿಯೇ ಎಂದು ಸಂಶಯಗೊಂಡರೆ, ಆ ಮಂತ್ರಗಳಲ್ಲಿ ಹೇಳಿದ 'ಸರ್ವ' ಶಬ್ದದಿಂದ ಜಗತ್ತು ಪರಮಾತ್ಮನ ಸ್ವರೂಪವೆಂದು ತಿಳಿಯಕೂಡದು; ಆದರೆ, ಅವನು ಜಗತ್ತೆಲ್ಲ ತುಂಬಿದ್ದರಿಂದ 'ಸರ್ವ' ಶಬ್ದವಾಚ್ಯನೆಂದು ತಿಳಿಯಬೇಕು.

೪೧. ಮೇಲೆ ಹೇಳಿದಂತೆ ಪರಮಾತ್ಮನು ಮಹಾಮಹಿಮೆಯುಳ್ಳವನಾದ್ದರಿಂದ ತಾನು ಮಾಡಿದ ಅಪರಾಧಕ್ಕೆ ಅವನಲ್ಲಿ ಅರ್ಜುನನು ಕ್ಷಮೆಬೇಡಿದ್ದು :—

सखेति मत्वा प्रसभं यदुक्तं
हे कृष्ण हे यादव हे सखेति ।
अजानता महिमानं तवेदं
मया प्रमादात्प्रणयेन वापि ॥ ४१ ॥

**ಅಂ**—ದೇವಾಧಿದೇವಾ, ಜಗದ ಸೃಷ್ಟಿ ಮೊದಲಾದ ನಿನ್ನ ಮಹಿಮೆಯನ್ನರಿಯದೆ, ಪ್ರಮಾದದಿಂದಾಗಲಿ, ಸ್ನೇಹದಿಂದಾಗಲಿ, ನೀನು ನನ್ನ ಜೀವದ ಗೆಳೆಯನೆಂದು ಬಗೆದು ಕೃಷ್ಣಾ, ಯಾದವಾ, ಗೆಳೆಯಾ, ಎಂದು ಮುಂತಾಗಿ ನಿನ್ನನ್ನು ಬೀಳುಗಳೆದು ಹುಂಬತನದಿಂದ ಸಂಬೋಧಿಸಿದ್ದನ್ನು ಕ್ಷಮಿಸಬೇಕಯ್ಯ !!

೪೨.

यच्चावहासार्थमसत्कृतोऽसि
विहारशय्यासनभोजनेषु ।
एकोऽथवाप्यच्युत तत्समक्षं
तत्क्षामये त्वामहमप्रमेयम् ॥ ४२ ॥

**ಅಂ**—ನಾಶರಹಿತ ಸದ್ಗುಣಗಳುಳ್ಳವನೇ, ನೀನು ಸರ್ವೋತ್ತಮನಾದರೂ, ಆಟ, ಊಟ, ನೋಟ, ಹರಟೆಗಳ ಕಾಲಗಳಲ್ಲಿ ನಾನು ನಿನಗೆ ಹಲವು ಬಾರಿ ಅವಮಾನಗೊಳಿಸಿರಬಹುದು. ಅವು

ಗಳ ದೆಸೆಯಿಂದ ಅನ್ಯಾದೃಶವಾದ ನಿನ್ನ ಮುಂದೆಯೇ ನಾನೀಗ ಅಂಗಲಾಚಿ ಕ್ಷಮೆಬೇಡುವೆ. ದಯ ದೋರಿ ಕ್ಷಮಿಸು. ಇದೀಗ ನನ್ನ ಬಿನ್ನಹ ನಿನ್ನ ಅಡಿದಾವರೆಗಳಲ್ಲಿ ! ಅನ್ಯರ ಅಪೇಕ್ಷೆ ಇಲ್ಲದೆ, ಕಾರ್ಯ ಮಾಡುವದರಿಂದ 'ಏಕ' ಶಬ್ದವು ಸರ್ವೋತ್ತಮವೆಂಬ ಅರ್ಥವನ್ನು ಹೇಳುವದು.

೪೩. ಅಸತ್ಕಾರಕ್ಕೆ ಪರಮಾತ್ಮನು ಯೋಗ್ಯನಲ್ಲೆಂದು ಆತನ ಬೇರೆ ಗುಣಗಳನ್ನು ಹೇಳಿದ್ದು :—

पितासि लोकस्य चराचरस्य
त्वमस्य पूज्यश्च गुरुर्गरीयान् ।
न त्वत्समोऽस्त्यभ्यधिकः कुतोऽन्यो
लोकत्रयेऽप्यप्रतिमप्रभावः ॥ ४३ ॥

**ಅಂ**—ನೀನು ಚೇತನಾಚೇತನ ಜಗತ್ತಿಗೆ ತಂದೆ ಈ ವಿಶ್ವಕ್ಕೆ ನೀನೇ ಶ್ರೇಷ್ಠ ಗುರುವಾದ್ದ ರಿಂದ ಪೂಜ್ಯನು. ನಿನಗೆ ಸಮಾನ ಅನ್ಯರು ಇಲ್ಲದ್ದರಿಂದ ನಿನಗಿಂತ ಶ್ರೇಷ್ಠನಿಲ್ಲೆಂದು ಹೇಳಲುಬೇಡ. ಮೂರು ಲೋಕಗಳಲ್ಲಿ ನೀನೇ ಅನ್ಯಾದೃಶ ಐಶ್ವರ್ಯವುಳ್ಳವನು.

೪೪.

तस्मात्प्रणम्य प्रणिधाय कायं
प्रसादये त्वामहमीशमीड्यम् ।
पितेव पुत्रस्य सखेव सख्युः
प्रियः प्रियायार्हसि देव सोढुम् ॥ ४४ ॥

**ಅಂ**—ಕೃಷ್ಣಾ, ಈ ಬಗೆಯ ಮಹಾಮಹಿಮೆಯುಳ್ಳವನು ನೀನಾದ್ದರಿಂದ, ಅಡ್ಡಬಿದ್ದು ಅನು ಗ್ರಹಮಾಡೆಂದು ನಿನಗೆ ಬಾಗಿಬೇಡುವೆನೀಗ. ಕ್ರೀಡಾದಿಗುಣಗಳುಳ್ಳವನೇ, ತಂದೆಯು ಮಗನ, ಗೆಳೆಯನು ಗೆಳೆಯನ, ಗಂಡನು ಹೆಂಡತಿಯ, ಅಪರಾಧ ಕ್ಷಮಿಸುವಂತೆ ನನ್ನದನ್ನು ಹೊಟ್ಟೆಯಲ್ಲಿ ಹಾಕಿಕೋ.

೪೫. ಈ ಮೇರೆಗೆ, ಅರ್ಜುನನು ಮಾಡಿದ ಅಪರಾಧಕ್ಕೆ ಕ್ಷಮೆಬೇಡಿ ಪ್ರಾರ್ಥಿಸಿದ್ದು :—

अदृष्टपूर्वं हृषितोऽस्मि दृष्ट्वा
भयेन च प्रव्यथितं मनो मे ।
तदेव मे दर्शय देव रूपं
प्रसीद देवेश जगन्निवास ॥ ४५ ॥

**ಅಂ**—ದೇವತೆಗಳ ಸ್ವಾಮಿಯೇ, ಜಗದಾಧಾರನೇ, ಅತ್ಯಾಶ್ಚರ್ಯಗೊಳಿಸುವ, ಎಂದೂ ಕಾಣದ ನಿನ್ನೀ ರೂಪವನ್ನು ಕಂಡ ನಾನು ಹರುಷದಿಂದ ಮೈಮರೆತಿರುವೆ. ಅದರಂತೆ ನನ್ನ ಮನಸೂ ಬಹು ಕಂದಿಕುಂದಿದೆ; ಆದ್ದರಿಂದ ಇನ್ನು ನಿನ್ನ ಶಾಂತರೂಪವನ್ನೇ ಮತ್ತೆ ತೋರಿಸಿ ಅನುಗ್ರಹಮಾಡು.

೪೬. ತನಗೆ ತೋರಿಸಬೇಕೆಂದ ರೂಪವನ್ನು ಅರ್ಜುನನು ಬಣ್ಣಿಸಿದ್ದು :—

**किरीटिनं गदिनं चक्रहस्त-**
**मिच्छामि त्वां द्रष्टुमहं तथैव ।**
**तेनैव रूपेण चतुर्भुजेन**
**सहस्रबाहो भवविश्वमूर्ते ॥ ४६ ॥**

**ಅಂ**—ನಾನು ನಿನ್ನ ವಿಶ್ವರೂಪವನ್ನು ನೋಡಿದಂತೆ, ನಾಲ್ಕು ಭುಜ, ಕಿರೀಟ, ಗದಾ, ಚಕ್ರ, ಇವುಗಳಿಂದ ಯುಕ್ತವಾದ ರೂಪವನ್ನು ನೋಡಬಯಸುವೆ. ಅಸಂಖ್ಯಬಾಹುವೇ, ಗುಣಪೂರ್ಣ ಮೂರ್ತಿಯೇ, ಅಂತಹ ರೂಪಧರಿಸಿ ನನಗೆ ಕಣ್ಣೊಳಿಸು.

೪೭. ಶ್ರೀಕೃಷ್ಣನು ತೋರಿಸಿದ ತನ್ನ ವಿಶ್ವರೂಪದರ್ಶನದಿಂದ ಅತಿಶಯ ಭಕ್ತಿ ಹುಟ್ಟಬೇಕೆಂದು ಆ ರೂಪದರ್ಶನವು ಅನ್ಯರಿಗೆ ದುರ್ಲಭವೆಂಬಲ್ಲಿ ಹೇಳಿದ್ದು :—

**श्रीभगवानुवाच ।**
**मया प्रसन्नेन तवार्जुनेदं**
**रूपं परं दर्शितमात्मयोगात् ।**
**तेजोमयं विश्वमनंतमाद्यं**
**यन्मे त्वदन्येन न दृष्टपूर्वम् ॥ ४७ ॥**

**ಅಂ**—ಅರ್ಜುನಾ, ನಿನಗೆ ಪ್ರಸನ್ನನಾಗಿ ನನ್ನ ಸ್ವರೂಪ ಸಾಮರ್ಥ್ಯದಿಂದ ಅತ್ಯುತ್ತಮವಾದ ರೂಪವನ್ನು ನಿನಗೆ ತೋರಿಸಿದೆ. ಆ ರೂಪವು ಎಂತಹದೆಂದರೆ, ಅತಿತೇಜಸ್ವಿಯಾದದ್ದು, ದೇಶಕಾಲಗಳಿಂದ ಅಪರಿಚ್ಛಿನ್ನವಾಗಿದ್ದು, ಅದೇ ನನ್ನ ಆದ್ಯರೂಪವು. ನಿನ್ನ ಹೊರ್ತು ಅದನ್ನು ಇನ್ನಾರೂ ನೋಡಿಲ್ಲ. ಅನ್ಯರು ಆ ರೂಪವನ್ನು ತಮ್ಮ ಯೋಗ್ಯತೆಗನುಸರಿಸಿ ನೋಡಿದ್ದರೂ, ಅರ್ಜುನನಂತೆ ಯಾರೂ ಕಂಡಿಲ್ಲವೆಂದೇ ಅರ್ಥವು. ಇಲ್ಲಿ, ವಿಶ್ವರೂಪವು ಅತ್ಯುತ್ತಮವೆಂದು ಹೇಳಿದ್ದು ಅಜ್ಞ ಜನರ ಅಪೇಕ್ಷೆಯಿಂದ; ಏಕೆಂದರೆ, ಪರಮಾತ್ಮನ ಕೃಷ್ಣ ಮುಂತಾದ ಅವತಾರಗಳು ಕೂಡ ಉತ್ತಮವೆಂಬ ಜ್ಞಾನವು ಚತುರ್ಮುಖಾದಿಗಳಂತೆ ಅರ್ಜುನನಿಗೂ ಉಂಟು.

೪೮. ಹಾಗಾದರೆ, ಅರ್ಜುನನನ್ನುಳಿದು ಅವನಿಗಿಂತ ಅಧಮರು ಅಂತಹ ರೂಪವನ್ನು ಕಂಡಿಲ್ಲ ಎಂದು ಹಿಂದಿನ ಶ್ಲೋಕದಿಂದ ತಾನೇ ಒಡೆದು ಕಾಣಿಸಿತು; ಆದರೆ, ವೇದ ಮುಂತಾದವುಗಳ ಸಾಧನೆಯಿಂದ ಅರ್ಜುನನಂತೆ ಅಧಮರಿಗೆ ಆ ರೂಪವು ಕಾಣಬಹುದೇ ಎಂದು ಆಕ್ಷೇಪಿಸಿದ್ದಕ್ಕೆ ಸಮಾಧಾನ ಹೇಳಿದ್ದು:—

**न वेद यज्ञाध्ययनैर्न दानै-**
**र्न च क्रियाभिर्न तपोभिरुग्रैः ।**
**एवंरूपः शक्य अहं नृलोके**
**द्रष्टुं त्वदन्येन कुरुप्रवीर ॥ ४८ ॥**

ಅಂ—ವೇದಗಳಿಂದಲೂ, ಯಜ್ಞಗಳಿಂದಲೂ, ಅಧ್ಯಯನದಿಂದಲೂ, ದಾನಗಳಿಂದಲೂ, ಅಗ್ನಿ ಹೋತ್ರಾದಿ ಕ್ರಿಯೆಗಳಿಂದಲೂ, ಕೃಚ್ಛ್ರ, ಚಾಂದ್ರಾಯಣಾದಿ ಉಗ್ರ ವ್ರತಗಳಿಂದಲೂ, ನಾನು ತೋರಿಸಿದ ವಿಶ್ವರೂಪವನ್ನು ಮೃತ್ಯುಲೋಕದಲ್ಲಿ ನಿನ್ನ ಹೊರ್ತು ನಿನಗಿಂತ ಅಧಮರಿಗೆ ತೋರಿಸಲು ಶಕ್ಯವಲ್ಲ. ಇದರಿಂದ, ಅರ್ಜುನನ ಹೊರ್ತು ಅನ್ಯರಿಗೆ ಆ ರೂಪದ ದರ್ಶನವಿಲ್ಲೆಂದು ಹಿಂದಿನ ೨೦ನೆಯ ಶ್ಲೋಕದಿಂದ ಹೇಳಿದ್ದಕ್ಕೆ ವಿರೋಧವಿಲ್ಲೆಂದು ತಿಳಿಯಬೇಕು

೪೯. ಅರ್ಜುನನ ಬಿನ್ನಹ ಮನ್ನಿಸಿ ಮುಂದೆ ಹೇಳಿದ ರೂಪವನ್ನು ಕುರಿತು ಹೇಳಿದ್ದು.—

मा ते व्यथा मा च विमूढभावो
दृष्ट्वा रूपं घोरमीदृङ्ममेदम् ।
व्यपेतभीः प्रीतमनाः पुनस्त्वं
तदेव मे रूपमिदं प्रपश्य ॥ ४९ ॥

ಅಂ—ಪಾರ್ಥ, ಸಂಹಾರಕ್ಕಾಗಿ ಧರಿಸಿದ ಅನಂತ ಬಾಹು ಮುಂತಾದವುಗಳಿಂದ ಕೂಡಿದ ನನ್ನೀ ಘೋರ ರೂಪವನ್ನು ಕಂಡು ನೀನು ವ್ಯಾಕುಲನಾಗಬೇಡ, ಮೋಹ, ಹೆದರಿಕೆಗಳನ್ನು ಈಡಾಡಿ ಪ್ರಸನ್ನಾಂತಃಕರಣದಿಂದ ನೀನು ಮೊದಲು ನೋಡಿದ ರೂಪವನ್ನೇ ತಿರುಗಿ ನೋಡು.

೫೦. ಮುಂದೇನಾಯಿತೆಂದು ಧೃತರಾಷ್ಟ್ರನ ಸಂದೇಹವನ್ನು ನಾಶಗೊಳಿಸಲು ಸಂಜಯನು ನುಡಿದದ್ದು.—

संजय उवाच ।
इत्यर्जुनं वासुदेवस्तथोक्त्वा
स्वकं रूपं दर्शयामास भूयः ।
आश्वासयामास च भीतमेनं
भूत्वा पुनः सौम्यवपुर्महात्मा ॥ ५० ॥

ಅಂ—ವಾಸುದೇವನು ಅರ್ಜುನನ್ನು ಕುರಿತು ಹಾಗೇ ಆಗಲಿ ಎಂದು ತನ್ನ ಮೊದಲಿನ ರೂಪವನ್ನು ತೋರಿಸಿದನು. ಮಹಾಮಹಿಮೆಯುಳ್ಳ ಶ್ರೀಕೃಷ್ಣನು ಮತ್ತೆ ಶಾಂತರೂಪವನ್ನು ಧರಿಸಿ ಬೆದರಿದ ಅರ್ಜುನನನ್ನು ಸಮಾಧಾನಗೊಳಿಸಿದನು.

೫೧. ವಿಶ್ವರೂಪವು ಕಣ್ಮರೆಯಾದ ಬಳಿಕ ಶ್ರೀಕೃಷ್ಣ ರೂಪದರ್ಶನದಿಂದ ತಾನು ಶಾಂತನಾದನೆಂಬುದನ್ನು ಹೇಳಿದ್ದು.—

अर्जुन उवाच ।
दृष्ट्वेदं मानुषं रूपं तव सौम्यं जनार्दन ।
इदानीमस्मि संवृत्तः सचेताः प्रकृतिं गतः ॥ ५१ ॥

ಅಂ—ಪ್ರಾಣಿಗಳ ದುಃಖನಾಶಕನೇ, ಮನುಷ್ಯರಂತೆ ಕಾಣುವ ಸೌಮ್ಯವಾದ ನಿನ್ನ ರೂಪ ಕಂಡು ನನ್ನ ಮನಸು ಚೇತರಿಸಿಕೊಂಡು ತಿರಿಗಿ ಮೊದಲಿನ ಮೆಟ್ಟಿಗೆ ಬಂದಿದೆ.

೫೨. ಹಾಗಾದರೆ, ಶ್ರೀಕೃಷ್ಣನು ಅರ್ಜುನನಿಗೆ ಭಯಂಕರ ರೂಪ ತೋರಿಸಿದ ಕಾರಣವೇನೆಂದು ಕೇಳಿದ್ದಕ್ಕೆ ವಿಶ್ವರೂಪದರ್ಶನದ ಮಹಿಮೆಯನ್ನು ಶ್ರೀಕೃಷ್ಣನು ಹೇಳಿದ್ದು:—

श्रीभगवानुवाच ।
सुदुर्दर्शमिदं रूपं दृष्टवानसि यन्मम ।
देवा अप्यस्य रूपस्य नित्यं दर्शनकांक्षिणः ॥ ५२ ॥

ಅಂ—ನೀನು ನೋಡಿದ ರೂಪವನ್ನು ದೇವತೆಗಳು ಕೂಡ ನಿತ್ಯದಲ್ಲಿ ತಮಗೆ ದರ್ಶನವಾಗ ಬೇಕೆಂದು ಬಯಸಿ ಕಂಡಿರುವರು. ಅದು ಕೆಲವರಿಗೆ ಸುಖಸಾಧ್ಯ, ಮತ್ತೆ ಕೆಲವರಿಗೆ ದುಃಖಸಾಧ್ಯ. ಇಲ್ಲಿ ಅಭಿಪ್ರಾಯವೇನಂದರೆ, ದೇವತೆಗಳಿಗೆ ಕೂಡ ಆ ರೂಪದ ದರ್ಶನವು ಅಪೇಕ್ಷಿತವಾದ್ದರಿಂದ ಅರ್ಜುನನು ಶತ್ರುಗಳನ್ನು ಸಂಹರಿಸುವಲ್ಲಿ ಕೇವಲ ನಿಮಿತ್ತನೆಂದು ತೋರಿಸುವದಕ್ಕಾಗಿ ಅಂತಹ ರೂಪವನ್ನು ಕೃಷ್ಣನು ತೋರಿಸಿದನೆಂದು ತಿಳಿಯಬೇಕು.

೫೩.

नाहं वेदैर्न तपसा न दानेन न चेज्यया ।
शक्य एवं विधो द्रष्टुं दृष्टवानसि मां यथा ॥ ५३ ॥

ಅಂ—ನೀನು ನ್ನನ್ನನ್ನು ನೋಡಿದಂತೆ ಯಾರೂ ನೋಡಲು ಶಕ್ಯವಿಲ್ಲ. ವೇದ—ತಪಸ್ಸು—ದಾನ—ಯಜ್ಞಗಳಿಂದಲೂ ಅದನ್ನು ನೋಡಲಿಕ್ಕೆ ಆಗದು.

೫೪. ಹಾಗಾದರೆ, ಶ್ರೀಕೃಷ್ಣನ ಸಾಕ್ಷಾತ್ಕಾರವಾಗುವಲ್ಲಿ ಉಪಾಯವೇನೆಂದು ಕೇಳಿದ್ದಕ್ಕೆ ಉತ್ತರ ಹೇಳಿದ್ದು:—

भक्त्या त्वनन्यया शक्य अहमेवंविधोऽर्जुन ।
ज्ञातुं द्रष्टुं च तत्त्वेन प्रवेष्टुं च परंतप ॥ ५४ ॥

ಅಂ—ಇಲ್ಲಿ ತು ಶಬ್ದವು ವೇದಾದಿ ಸಾಧನಗಳಿಗಿಂತ ವಿಶೇಷಾರ್ಥವನ್ನು ಸೂಚಿಸುವದು. ಶತ್ರುನಾಶಕನಾದ ಅರ್ಜುನನೇ, ಅಸಾಧಾರಣ ಭಕ್ತಿಯಿಂದ ನಾನು ಇಂತಹ ಮಹಿಮೆಯುಳ್ಳವನೆಂದು ಯಥಾರ್ಥಜ್ಞಾನವಾಗಿ ಅದರಿಂದ ನನ್ನ ಸಾಕ್ಷಾತ್ಕಾರವಾಗಲು, ಸಾಯುಜ್ಯಮುಕ್ತಿಯಾಗುವದು ಶಕ್ಯವು.

೫೫. ಮುಂಚಿನ ಶ್ಲೋಕದಲ್ಲಿ ಅಸಾಧಾರಣ ಭಕ್ತಿಯಿಂದ ಪರಮಾತ್ಮನ ಸಾಕ್ಷಾತ್ಕಾರವು ಸುಲಭವೆಂದು ಹೇಳಿದ್ದರಿಂದ ಭಕ್ತಿಯ ಹೊರ್ತು ಅನ್ಯ ಸಾಧನವು ಬೇಕಾಗಿಲ್ಲೆಂದು ಬರುವ ಸಂದೇಹವನ್ನು ದೂರಗೊಳಿಸಿದ್ದು:—

मत्कर्मकृन्मत्परमो मद्भक्तः संगवर्जितः ।
निर्वैरः सर्वभूतेषु यः स मामेति पांडव ॥ ५५ ॥

ಅಂ—ಪಾಂಡುನಂದನನೇ, ನಾನೇ ಸರ್ವೋತ್ತಮನೆಂಬ ಜ್ಞಾನವುಳ್ಳ, ನನ್ನ ಆರಾಧನೆಗಾಗಿಯೇ ಕರ್ಮಮಾಡುವ, ಕರ್ಮಫಲದಲ್ಲಿ ಆಸಕ್ತಿಯಿಲ್ಲದ, ಸಕಲ ಭೂತಗಳಲ್ಲಿ ದ್ವೇಷರಹಿತನಾದ, ಭಕ್ತನು ನನ್ನನ್ನು ಪಡೆಯುವನು.

**इति श्रीमद्भगवद्गीतासूपनिषत्सु ब्रह्मविद्यायां योगशास्त्रे श्रीकृष्णार्जुनसंवादे विश्वरूपदर्शनयोगो नामैकादशोऽध्यायः ॥ ११ ॥**

**ಅಂ**—ಈ ಮೇರೆಗೆ, ಷಡ್ಗುಣೈಶ್ವರ್ಯಸಂಪನ್ನನಾದ ಪರಮಾತ್ಮನಿಂದ ಮನೋಹರ, ಅಲಂಕಾರಿಕ ಮತ್ತು ಇಷ್ಟಶಬ್ದಗಳಿಂದ ಉಪದೇಶಿಸಲ್ಪಟ್ಟದ್ದೂ. ಉಪನಿಷತ್ತಿಗೆ ಸಮಾನವೂ ಪರಬ್ರಹ್ಮವಿಷಯಕ ವಿದ್ಯೆಯೂ ಎನಿಸುವ ಮತ್ತು ಕರ್ಮ ಯೋಗಾದಿಗಳನ್ನು ಪ್ರತಿಪಾದಿಸುವ, ಶ್ರೀಕೃಷ್ಣನಿಗೂ ಅರ್ಜುನನಿಗೂ ನಡೆದ ಸಂವಾದರೂಪವಾದ **ಗೀತಾಶಾಸ್ತ್ರದಲ್ಲಿಯ ವಿಶ್ವರೂಪ ದರ್ಶನಯೋಗವೆಂಬ ಹನ್ನೊಂದನೆಯ** ಅಧ್ಯಾಯವು ಮುಗಿಯಿತು.



# ೧೨ನೆಯ ಅಧ್ಯಾಯವು.

೧. ಪ್ರಕೃತ ಅಧ್ಯಾಯದಲ್ಲಿ ಶ್ರೀವಿಷ್ಣು, ಲಕ್ಷ್ಮೀದೇವಿ, ಇವರಲ್ಲಿ ಶ್ರೀವಿಷ್ಣುವಿನ ಉಪಾಸನೆಯೇ ಮಿಗಿಲಾದ್ದರಿಂದ ಅದನ್ನೀಗ ವರ್ಣಿಸಲಾಗುವದು; ಹೀಗೆ ಪರಮಾತ್ಮನ ಉಪಾಸನೆಯ ಹೆಚ್ಚುಗಾರಿಕೆ ಇರುವದರಿಂದ, ಅವನ ಮಹಿಮೆಯನ್ನು ಪ್ರತಿಪಾದಿಸುವ ಆರು ಅಧ್ಯಾಯಗಳಲ್ಲಿ ಈ ಅಧ್ಯಾಯವು ಒಳಗೊಳ್ಳುವದು. ಇನ್ನು, ತೈಂ ಆಂ (೩-೧೨-೭) ಮಂತ್ರದಲ್ಲಿ श्रियं वसाना ಎಂಬ ಶ್ರುತಿಯಲ್ಲಿ ಪರಮಾತ್ಮನ ಆರಾಧನೆಯಂತೆ, ಲಕ್ಷ್ಮೀದೇವಿಯ ಆರಾಧನೆಯಿಂದಲೂ ಮೋಕ್ಷಫಲ ಉಂಟೆಂದು ಕಂಡುಬರುವ ಸಂದೇಹನಿವಾರಣೆಗಾಗಿ ಅರ್ಜುನನು ಪ್ರಶ್ನೆ ಮಾಡಿದ್ದು:—

**अर्जुन उवाच ।**

**एवं सततयुक्ता ये भक्तास्त्वां पर्युपासते ।**
**ये चाप्यक्षरमव्यक्तं तेषां के योगवित्तमाः ॥ १ ॥**

**ಅಂ**—ಲಕ್ಷ್ಮೀದೇವಿಯ ಉಪಾಸನೆಯಿಂದ ಮೋಕ್ಷಫಲವು ದೊರೆಯುವದೆಂದು ಹೇಳಿದ್ದು ಕೇವಲ ಉಪಚಾರಕ್ಕಾಗಿ ಅಲ್ಲ; 'ಅವರಿಗೆ ದೊರೆಯುವ ಫಲವು ನಾಶವುಳ್ಳದ್ದು' ಎಂದು ಹೇಳಿರುವ ಮೂಲಕ ಸಂದೇಹಕ್ಕೆ ಕಾರಣವಿಲ್ಲೆಂದು ಅನ್ನಲಾಗದು. ಏಕೆಂದರೆ, ಬ್ರಹ್ಮಾದಿ ದೇವತೆಗಳಿಗೆಲ್ಲ ಹುಟ್ಟು-ಸಾವುಗಳು ತಪ್ಪದ ಮೂಲಕ ಅವರ ಆರಾಧನೆಯಿಂದ ಸಂಪಾದಿಸಿದ ಫಲಕ್ಕೆ ನಾಶವಿದ್ದರೂ, **चतुष्कपर्दा** ಎಂಬಲ್ಲಿ ಲಕ್ಷ್ಮೀದೇವಿಯಲ್ಲಿ ನಿತ್ಯ ಯೌವನ, ಜ್ಞಾನ, ದೇವಪೂಜ್ಯತ್ವ ಮುಂತಾದ ಮಹಿಮಾ ವಿಶೇಷಗಳು ಉಂಟೆಂದು ಹೇಳಿದ್ದರಿಂದ ಅವಳ ಆರಾಧನೆಯೂ ಮೋಕ್ಷಕ್ಕೆ ಕಾರಣ. ಹೀಗೆ ಪರಮಾತ್ಮನ ಆರಾಧನೆಯಿಂದ ಮೋಕ್ಷವು ಕೈಗೆ ಬಂದಂತೆ ಲಕ್ಷ್ಮೀದೇವಿಯಿಂದಲೂ ಅದು ಸಾಧ್ಯವೆಂದು ಸಂದೇಹ ಉಂಟಾಗುವದು. ಅದರ ಸಮಾಧಾನಕ್ಕಾಗಿಯೇ ಅರ್ಜುನನು ನುಡಿದದ್ದು —ಕೃಷ್ಣಾ, ಧ್ಯಾನ ಕರ್ಮಯೋಗಿಗಳಾದ ಭಕ್ತರು ಹಿಂದೆ (೧೧-೫೫)ನೆಯ ಶ್ಲೋಕದಲ್ಲಿ ನಿರೂಪಿತವಾದಂತೆ ನಿನ್ನನ್ನೇ ಆರಾಧಿಸುವರು. ಅದರಂತೆಯೇ, ಭಕ್ತರು ಅಕ್ಷರಶಬ್ದವಾಚ್ಯ ಚಿತ್ ಪ್ರಕೃತಿಯನ್ನು ಶ್ರದ್ಧೆ-ಭಕ್ತಿ ಮುಂತಾದವುಗಳಿಂದ ಆರಾಧಿಸುವರು. ಇವೆರಡು ವಿಧದ ಭಕ್ತರು ಮೋಕ್ಷೋಪಾಯ ಬಲ್ಲವರು. ಅಂದ ಬಳಿಕ ಅವರಲ್ಲಿ ಶ್ರೇಷ್ಠರು ಯಾರು ? ಇಲ್ಲಿ 'ಅವ್ಯಕ್ತಳು' ಎಂದು ಹೇಳದೆ 'ಅಕ್ಷರ' ಎಂದು ಹೇಳಿದ್ದರಿಂದ ಶರೀರನಾಶವುಳ್ಳ ಬ್ರಹ್ಮಾದಿ ದೇವತೆಗಳಿಗಿಂತ ಲಕ್ಷ್ಮೀದೇವಿಯು ಹೆಚ್ಚಿನವಳೆಂದು ಸೂಚಿತವಾಗುವದು. ಅದರಿಂದಲೇ ಅರ್ಜುನನು ಕೇಳಿದ ಪ್ರಶ್ನವು ಸಂಭವಿಸುವದು.

೨. ಲಕ್ಷ್ಮೀದೇವಿಯ ಉಪಾಸನೆಗಿಂತ ನನ್ನನ್ನು ಆರಾಧಿಸುವ ಅಧಿಕಾರಿಗಳೇ ಉತ್ತಮರು ಎಂಬ ಬಗ್ಗೆ ಹೇಳಿದ್ದು:—

**श्रीभगवानुवाच ।**

**मय्यावेश्य मनो ये मां नित्ययुक्ता उपासते ।**
**श्रद्धया परयोपेतास्ते मे युक्ततमा मताः ॥ २ ॥**

**ಅಂ**—ನನ್ನಲ್ಲಿ ಮನಸ್ಸನ್ನು ನೆಲಿಸಿ ನಿತ್ಯಕರ್ಮಯೋಗ-ಧ್ಯಾನಯೋಗಗಳಲ್ಲಿ ಮುಳುಗಿದವರಾಗಿ ಪರಮಶ್ರದ್ಧೆಯಿಂದ ಆರಾಧಿಸುವ ನನ್ನ ಅಧಿಕಾರಿಗಳು ಮೋಕ್ಷೋಪಾಯ ಬಲ್ಲವರಲ್ಲಿ ಶ್ರೇಷ್ಠರೆಂದು ನನ್ನ ಮತ.

೩-೪-೫. ಹಾಗಾದರೆ, ಲಕ್ಷ್ಮೀದೇವಿಯ ಉಪಾಸಕರಿಗೆ ಮೋಕ್ಷವಿಲ್ಲೆಂದು ಹೇಳಿದರೆ, ಇಷ ಪಸಾನಾ ಎಂಬ ಶ್ರುತಿಗೆ ವಿರೋಧಬರುವದು; ಉಂಟೆಂದರೆ, ನಿನ್ನನ್ನು ಆರಾಧಿಸುವವರೇ ಶ್ರೇಷ್ಠರೆಂದು ಹೇಳುವ ಕಾರಣವೇನು ? ಅವರೀರ್ವರಿಗೂ ದೊರೆಯುವ ಫಲದಲ್ಲಿ ಸಾಮ್ಯ ಉಂಟಷ್ಟೇ ಎಂದು ಕೇಳಿದ್ದಕ್ಕೆ ೫ ಶ್ಲೋಕಗಳಿಂದ ಉತ್ತರ ಹೇಳಿದ್ದು:—

ये त्वक्षरमनिर्देश्यमव्यक्तं पर्युपासते ।
सर्वत्रगमचिंत्यं च कूटस्थमचलं ध्रुवम् ॥ ३ ॥

संनियम्येंद्रियग्रामं सर्वत्र समबुद्धयः ।
ते प्राप्नुवंति मामेव सर्वभूतहिते रताः ॥ ४ ॥

क्लेशोऽधिकतरस्तेषामव्यक्तासक्तचेतसाम् ।
अव्यक्ता हि गतिर्दुःखं देहवद्भिरवाप्यते ॥ ५ ॥

ಅಂ— ಅರ್ಜುನಾ, ನೀನು ಹೇಳಿದ ಶ್ರುತಿಗಳಿಂದ ಲಕ್ಷ್ಮೀದೇವಿಯ ಉಪಾಸಕರಿಗೆ ನನ್ನ ಪ್ರಾಪ್ತಿ ಎಂಬ ಮೋಕ್ಷವು ದೊರೆತರೂ, ಆ ಫಲವು ಕಷ್ಟಸಾಧ್ಯ, ಆದರೆ, ನನ್ನ ಉಪಾಸನೆಯು ಹಾಗಲ್ಲ, ಆದ್ದರಿಂದ ನನ್ನ ಉಪಾಸಕರೇ ಶ್ರೇಷ್ಠರೆಂದು ತಿಳಿ ಲಕ್ಷ್ಮೀದೇವಿಯು ಸೂಕ್ಷ್ಮಳಾದ್ದರಿಂದ ನಾಶವಿಲ್ಲದವಳು; ಅಪ್ರಸಿದ್ಧಳಾದ್ದರಿಂದ ಅನಿರ್ದೇಶ್ಯಳು; ಜಗತ್ತಿಗೆ ಕಾರಣಳಾದ ಪ್ರಕೃತಿಗೆ ಅಭಿಮಾನಿಯಾದ್ದರಿಂದ ಅವ್ಯಕ್ತನಾಮಕಳು. ದೇಶಕಾಲಗಳಿಂದ ವ್ಯಾಪ್ತಳು. ಬಹುಗುಣಸಂಪನ್ನಳಾದ್ದರಿಂದ ಅಚಿಂತ್ಯಳು. ಅವ್ಯಾಕೃತ ಆಕಾಶಕ್ಕೆ ಅಭಿಮಾನಿಯು. ತನ್ನ ಸ್ಥಾನದಿಂದ ಅವಳೆಂದೂ ಅಲುಗಾಡದ್ದರಿಂದ ಅಚಲಳು, ನಿರ್ವಿಕಾರಳು; ವಿಷಯಗಳ ಕಡೆಗೆ ಓಡುವ ಇಂದ್ರಿಯಗಳ ಜಂಗುಳಿಯನ್ನು ಬಿಗಿಹಿಡಿದವರೂ, ಎಲ್ಲೆಡೆಯಲ್ಲಿ ಸಮಬುದ್ಧಿಯುಳ್ಳವರೂ, ೭ನೆಯ ಅಧ್ಯಾಯದಲ್ಲಿ ಹೇಳಿದಂತೆ ಯಥಾರ್ಥಜ್ಞಾನವುಳ್ಳವರೂ, ಸಕಲ ಪ್ರಾಣಿಗಳ ಹಿತಕ್ಕಾಗಿ ತಮ್ಮ ದೇಹವನ್ನು ಒಲಾಗಿಟ್ಟವರೂ, ಇಂಥ ಅಧಿಕಾರಿಗಳು ಶ್ರೀವಿಷ್ಣುವಿನಲ್ಲಿ ಭಕ್ತಿಯುಳ್ಳವರಾಗಿ, ಅವನೇ ಸರ್ವೋತ್ತಮನೆಂಬ ಜ್ಞಾನಪೂರ್ವಕ ಹಿಂದೆ ಹೇಳಿದ ಗುಣಗಳುಳ್ಳ ಲಕ್ಷ್ಮೀದೇವಿಯನ್ನು ಆರಾಧಿಸಿ ನನ್ನನ್ನೇ ಹೊಂದುವರು, ಇಲ್ಲಿ, ಲಕ್ಷ್ಮೀದೇವಿಗೆ ಹೇಳಿದ ವಿಶೇಷಣಗಳು ಅವಳಲ್ಲಿ ಮೋಕ್ಷಸಾಮರ್ಥ್ಯವಿದೆ ಎಂದು ತೋರಿಸುವದಕ್ಕಾಗಿ; ಹಾಗಾದರೆ, ಲಕ್ಷ್ಮೀದೇವಿಯ ಉಪಾಸಕರಿಗೆ ಕೂಡ ನಿನ್ನ ಪ್ರಾಪ್ತಿ ಎಂಬ ಮೋಕ್ಷಫಲ ದೊರೆಯಲು ನಿನ್ನ ಉಪಾಸಕರೇ ಉತ್ತಮರೆಂದು ಹೇಳುವದೇಕೆಂದು ಕೇಳಿದ್ದಕ್ಕೆ ಉತ್ತರ:— ಶ್ರೀವಿಷ್ಣುವನ್ನುಳಿದು ಅವ್ಯಕ್ತ ಶ್ರೀತತ್ವದಲ್ಲಿಯೇ ಆಸಕ್ತಿಯುಳ್ಳ ಅಧಿಕಾರಿಗಳಿಗೆ ಅತಿಕ್ಲೇಶ ಉಂಟಾಗುವದು; ಏಕೆಂದರೆ, ಇಲ್ಲಿ ಗತಿ ಶಬ್ದವು ಮಾರ್ಗಪರವಾಗಿಯೂ, ಅವ್ಯಕ್ತ ಶಬ್ದವು ಅವಳ ದ್ವಾರಪರವಾಗಿಯೂ ಇವೆ. ಲಕ್ಷ್ಮೀದೇವಿಯ ಉಪಾಸನಾದ್ವಾರದಿಂದ ಪರಮಾತ್ಮನ ಪ್ರಾಪ್ತಿಯ ಮಾರ್ಗವು ಕಷ್ಟವಾದ್ದರಿಂದ ಅಂತಹ ಕ್ಲೇಶವು ದೇಹವುಳ್ಳ ಅವಳ ಭಕ್ತರಿಗೆ ಉಂಟಾಗುವದು. ೭ನೆಯ ಅಧ್ಯಾಯದಲ್ಲಿ ಹೇಳಿದಂತೆ, ಇಂದ್ರಿಯನಿಗ್ರಹ, ಎಲ್ಲ ಕಡೆಯಲ್ಲಿ ಸಮಬುದ್ಧಿ, ಸಕಲ ಪ್ರಾಣಿಗಳ ಹಿತಮಾಡುವಿಕೆ, ಸದಾಚಾರ, ಇವು ಲಕ್ಷ್ಮೀದೇವಿಯ ಒಲುಮೆ ಇಲ್ಲದೆ ದೊರೆಯಲಾರವು; ಆಕೆಯ ಅನುಗ್ರಹವಿಲ್ಲದೆ ಪರಮಾತ್ಮನ ಅನುಗ್ರಹವಾಗದು; ಆತನ ಅನುಗ್ರಹವಿಲ್ಲದೆ ಅವನ ಪ್ರಾಪ್ತಿಯು ಆಗದು; ಈ ಮೇರೆಗೆ, ಅವಳ ಉಪಾಸನೆಯದ್ವಾರದಿಂದ ಪರಮಾತ್ಮಮೆಚ್ಚಿಗೆಯ ಮಾರ್ಗವು ಬಹು ಕಷ್ಟಸಾಧ್ಯವೆಂದು ತಿಳಿಯಬೇಕು.

೬. ತನ್ನ ಉಪಾಸನೆಯಿಂದ ಅಂತಹ ಕಷ್ಟವಿಲ್ಲೆಂದು ತಗಲದೆಂದು ಶ್ರೀಕೃಷ್ಣನು ಹೇಳಿದ್ದು :—

ये तु सर्वाणि कर्माणि मयि संन्यस्य मत्पराः ।
अनन्येनैव योगेन मां ध्यायंत उपासते ॥ ६ ॥

**ಅಂ—** ಇಲ್ಲಿ ತು ಶಬ್ದವು ಲಕ್ಷ್ಮೀದೇವಿಯ ಉಪಾಸನೆಗಿಂತ ಶ್ರೀವಿಷ್ಣುವಿನ ಉಪಾಸನೆಯು ವಿಶೇಷವೆಂದು ತೋರಿಸಲಿಕ್ಕೆ ಇರುವದು. ಪರಮಾತ್ಮನೇ ಸ್ವತಂತ್ರನಿದ್ದು, ನನ್ನಲ್ಲಿ ಅಂತರ್ಗತನಾಗಿ ತನಗೆ ಆಧೀನನಾದ ನನ್ನಿಂದ ಸರ್ವಕರ್ಮಗಳನ್ನು ತನ್ನ ಆರಾಧನೆಗಾಗಿ ಮಾಡಿಸುವನೆಂಬ ಅನುಸಂಧಾನವುಳ್ಳ, ನಾನೇ ಸರ್ವೋತ್ತಮನೆಂಬ ಜ್ಞಾನವುಳ್ಳ, ಲಕ್ಷ್ಮೀದೇವಿಯ ಉಪಾಸನೆಯನ್ನು ಬಿಟ್ಟು ಧ್ಯಾನದಿಂದ ನನ್ನನ್ನು ಉಪಾಸಿಸುವ ಅಧಿಕಾರಿಗಳು ಇರುವರು. ೩ನೆಯ ಶ್ಲೋಕದಲ್ಲಿ **पर्युपासते** ಎಂದು ಹೇಳಿದ **ಲಕ್ಷ್ಮೀ**ದೇವಿಯ ಉಪಾಸನೆಗಿಂತ ಇಲ್ಲಿ **उपासते** ಎಂದು ಹೇಳಿದ್ದು ಪರಮಾತ್ಮನ ಉಪಾಸನೆಯು ಕಷ್ಟಸಾಧ್ಯವಲ್ಲೆಂದು ಸೂಚಿಸಲಿಕ್ಕೆ. ಇಂದ್ರಿಯನಿಗ್ರಹಕ್ಕೆ ನನ್ನ ಅನುಗ್ರಹ ಅವಶ್ಯವಿಲ್ಲದ್ದರಿಂದ ಕ್ಲೇಶವಿಲ್ಲ. ಅಥವಾ ಹಿಂದಿನ ಶ್ಲೋಕದಲ್ಲಿ ಲಕ್ಷ್ಮೀದೇವಿಯ ಉಪಾಸನೆಯು ಬಹು ಕಷ್ಟಕರವೆಂದು ಹೇಳಿದ್ದರಿಂದ ಸದಾಚಾರ, ಮುಂತಾದವುಗಳು ಕಡಿಮೆ ಇದ್ದರೂ, ಪರಮಾತ್ಮನ ಉಪಾಸನೆಯ ಮಾರ್ಗವೇ ಶ್ರೇಷ್ಠವೆಂದು ಗೀತಾತಾತ್ಪರ್ಯದಲ್ಲಿ ಹೇಳಿದಂತೆ, ಪರಮಾತ್ಮನ ಉಪಾಸನೆಯ ಮಾರ್ಗವು ಹಿರಿದು ಎಂಬುವ ಬಗ್ಗೆ ಹೇಳಿದ್ದು — ಪೂರ್ವಾರ್ಧದ ಅರ್ಥವು ಮೊದಲಿನಂತೆ. ಇಲ್ಲಿ 'ಅನ್ಯ' ಶಬ್ದವು ಲಕ್ಷ್ಮೀದೇವಿಯ ಹೊರತು ಅನ್ಯದೇವತಾಪರವಾಗಿದೆ. ಲಕ್ಷ್ಮೀದೇವಿಯೂ, ಅನ್ಯ ದೇವತೆಗಳೂ, ಸ್ವತಂತ್ರರಲ್ಲ. ಅವರು ಪರಮಾತ್ಮನ ಪರಿವಾರದವರು. (೩-೩-೫೭) ನೇ ಸೂತ್ರದಲ್ಲಿ ಹೇಳಿರುವಂತೆ, ಸಕಲ ದೇವತೆಗಳು ಪರಮಾತ್ಮನ ಪರಿವಾರದವರೆಂದು ತಿಳಿದು ಅಧಿಕಾರಿಗಳು ಆರಾಧಿಸುವರು

೭.

तेषामहं समुद्धर्ता मृत्युसंसारसागरात् ।
भवामि न चिरात्पार्थ मय्यावेशितचेतसाम् ॥ ७ ॥

**ಅಂ—** ಅರ್ಜುನಾ, ಮುಂಚಿನ ಶ್ಲೋಕದಲ್ಲಿ ಉಕ್ತವಾದಂತೆ, ಧ್ಯಾನಯೋಗದಿಂದ ನನ್ನಲ್ಲಿ ಮನನೆಲಿಸಿದ ಅಧಿಕಾರಿಗಳನ್ನು ಮರಣರೂಪ ಸಂಸಾರಸಮುದ್ರದಿಂದ ನಾನು ಶೀಘ್ರವಾಗಿಯೇ ಉದ್ಧಾರಮಾಡುವೆ. ಇಲ್ಲಿ 'ಶೀಘ್ರವಾಗಿ' ಎಂಬುದರಿಂದ ಲಕ್ಷ್ಮೀದೇವಿಯ ಉಪಾಸನೆಗೆ ಪ್ರಯಾಸ ಬಹಳ, ಆದರೆ, ನನ್ನ ಉಪಾಸನೆಯಲ್ಲಿ ಅಷ್ಟು ಪ್ರಯಾಸವಿಲ್ಲೆಂದು ಸೂಚಿತವಾಯಿತು. ಮೇಲಾಗಿ, 'ಅವರನ್ನು ಉದ್ಧರಿಸುವೆ' ಎಂದು ಭರವಸೆಕೊಟ್ಟದ್ದರಿಂದ ಲಕ್ಷ್ಮೀದೇವಿಯ ಉಪಾಸನೆಯಲ್ಲಿ ಇಂದ್ರಿಯನಿಗ್ರಹ, ಮುಂತಾದವುಗಳು ಅವಶ್ಯ; ಆದರೆ, ಪರಮಾತ್ಮನ ಉಪಾಸನೆಯಲ್ಲಿ ಅವನು ಅವುಗಳನ್ನೆಲ್ಲ ಅಪೇಕ್ಷಿಸದೆ, ತನ್ನಲ್ಲಿ ಭಕ್ತಿಯನ್ನಿಟ್ಟ ಭಕ್ತರಿಗೆ ಆ ಸಾಧನೆಗಳನ್ನು ತಾನಾಗಿ ಒದಗಿಸಿಕೊಡುವನು. ಇನ್ನು, ಲಕ್ಷ್ಮೀದೇವಿಯ ಸಹಿತವಾಗಿ ಪರಮಾತ್ಮನ ಉಪಾಸನೆಯಿಂದ ಅವರಿಬ್ಬರ ಉತ್ತಮ ಅನುಗ್ರಹವಾಗಿ ಮೋಕ್ಷವು ಕೂಡಲೇ ಕೈಸೇರುವದು; ಆದರೆ, ಲಕ್ಷ್ಮೀದೇವಿಯನ್ನಷ್ಟೇ ಆರಾಧಿಸಿದರೆ, ಮೊದಲು ಪರಮಾತ್ಮನ ಅಲ್ಪಾರಾಧನೆ, ಬಳಿಕ ಬಹುಕಾಲದ ವರೆಗೆ ಲಕ್ಷ್ಮೀದೇವಿಯ ಉಪಾಸನೆ, ಕೊನೆಗೆ ಲಕ್ಷ್ಮೀದೇವಿಯಸಹಿತ ಪರಮಾತ್ಮನ ಆರಾಧನೆಯನ್ನು ಯಾವಾಗಲೂ ನಡಿಸಬೇಕು. ಆದರಿಂದ ಅನೇಕ ದಿವಸಗಳ ನಂತರ ಮುಕ್ತಿ ಲಭಿಸುವದು; ಹೀಗೆ ಲಕ್ಷ್ಮೀದೇವಿಯ ಉಪಾಸನೆಯಿಂದ ಮುಕ್ತಿಯು ಬೇಗ ನಿಲುಕದ್ದರಿಂದ ಪರಮಾತ್ಮನ ಉಪಾಸನೆಯೇ ಮೇಲಾದುದೆಂದು ಸಿದ್ಧ. ಈ ವಿಷಯಕ್ಕೆ

ಶ್ರುತಿಯಲ್ಲಿ ' ಶ್ರೀವಿಷ್ಣುಸಹಿತವಾಗಿ ಲಕ್ಷ್ಮೀದೇವಿಯನ್ನು ಆರಾಧಿಸಿದರೆ, ಅವಳು ಪರಮಸಂತುಷ್ಟಳಾಗುವಳು' ಎಂದು ಹೇಳಿ ಇದೆ.

೮. ಮೊದಲು ಹೇಳಿರುವಂತೆ, ಪರಮಾತ್ಮನ ಉಪಾಸನೆಯೇ ಮೇಲು, ಆದ್ದರಿಂದ, ಅದನ್ನೇ ಕೈಕೊಳ್ಳಬೇಕು. ಹಾಗೆ ಮಾಡಲು ಆಗದಿದ್ದರೆ, ಅದರ ಸಿದ್ಧಿಗಾಗಿ ಅನ್ಯ ಉಪಾಯಗಳನ್ನು ನಡಿಸಬೇಕೆಂದು ಮುಂದಿನ ನಾಲ್ಕು ಶ್ಲೋಕಗಳಿಂದ ಹೇಳಿದ್ದು —

मय्येव मन आधत्स्व मयि बुद्धिं निवेशय ।
निवसिष्यसि मय्येव अत ऊर्ध्वं न संशयः ॥ ८ ॥

ಅಂ—ಅರ್ಜುನಾ, ನನ್ನಲ್ಲಿಯೇ ಮನವನ್ನು ನೆಲೆಯಾಗಿ ನಿಲಿಸು, ಅಂದರೆ ನನ್ನನ್ನೇ ಆರಾಧಿಸು. ನಿನ್ನ ಕೈಯಿಂದ ಆಗದಿದ್ದರೆ, ನನ್ನಲ್ಲಿ ಬುದ್ಧಿಯನ್ನು ಇಡು, ಅಂದರೆ, ನನ್ನ ಬಗ್ಗೆ ಜ್ಞಾನಸಂಪಾದಿಸು. ಈ ದಾರಿಯಿಂದ ನನ್ನ ಸಾಕ್ಷಾತ್ಕಾರವಾಯಿತೆಂದರೆ, ದುಃಖವಿಲ್ಲದ ಆನಂದಾನುಭವವೆಂಬ ಸ್ಥಿತಿಯನ್ನು ಹೊಂದುವಿ. ಈ ವಿಷಯದಲ್ಲಿ ನೀನೆಷ್ಟುಮಾತ್ರವೂ ಸಂದೇಹಪಡಬೇಡ.

೯.

अथ चित्तं समाधातुं न शक्नोषि मयि स्थिरम् ।
अभ्यासयोगेन ततो मामिच्छाप्तुं धनंजय ॥ ९ ॥

ಅಂ—ಧನಂಜಯಾ, ಮನವನ್ನು ನನ್ನಲ್ಲಿರಿಸಲು ಸಾಧ್ಯವಾಗದಿದ್ದರೆ, ತಿರುತಿರುಗಿ ಅದನ್ನು ನನ್ನಲ್ಲಿ ಸ್ಥಿರಪಡಿಸುವ ಅಭ್ಯಾಸವೆಂಬ ಉಪಾಯದಿಂದ ನನ್ನನ್ನು ತಿಳಿಯಲು ಯತ್ನಿಸು.

೧೦.

अभ्यासेऽप्यसमर्थोऽसि मत्कर्मपरमो भव ।
मदर्थमपि कर्माणि कुर्वन्सिद्धिमवाप्स्यसि ॥ १० ॥

ಅಂ—ಹಿಂದಿನ ಶ್ಲೋಕದಲ್ಲಿ ಹೇಳಿದಂತೆ, ಅಭ್ಯಾಸಮಾಡಲು ನೀನು ಅಶಕ್ತನಾದರೆ, ನನ್ನ ಆರಾಧನೆಗಾಗಿ ನನ್ನ ವಿಷಯಕ ಕರ್ಮಾನುಷ್ಠಾನವೇ ಉತ್ತಮವೆಂದು ಅದನ್ನಾಚರಿಸು. ಹಾಗಾದರೆ, ಅದರಿಂದ ಇಷ್ಟಸಿದ್ಧಿಯು ಹೇಗಾಗುವದೆಂದು ಕೇಳಿದರೆ, ನನ್ನ ಆರಾಧನೆಗಾಗಿ ಕರ್ಮಗಳನ್ನಾಚರಿಸಿದರೆ, ಅದರಿಂದ ಕೂಡ ನಿನ್ನ ಬಯಕೆಯು ಪೂರ್ಣವಾಗುವದು.

೧೧.

अथैतदप्यशक्तोऽसि कर्तुं मद्योगमाश्रितः ।
सर्वकर्मफलत्यागं ततः कुरु यतात्मवान् ॥ ११ ॥

ಅಂ—ಜಪ, ಆರಾಧನೆ, ಮೊದಲಾದ ಕರ್ಮಗಳು ನನ್ನ ಆರಾಧನೆಗಾಗಿ. ಅವುಗಳ ಅನುಷ್ಠಾನವು ಕೂಡ ನಿನ್ನಿಂದ ಸರಿಯಾಗಿ ನಡಿಯದಿದ್ದರೆ, ಆ ಕರ್ಮಗಳನ್ನೆಲ್ಲ ಅನ್ಯ ದೇವತೆಗಳ ಉದ್ದೇಶದಿಂದ ಮಾಡಿ ಕಡೆಗೆ ನನಗೇ ಅವುಗಳನ್ನೆಲ್ಲ ಅರ್ಪಿಸು. ಇದೇ ನನ್ನ ಆರಾಧನೆ. ಏಕೆಂದರೆ, ಮಾಡಿದ ಕರ್ಮಗಳನ್ನೆಲ್ಲ ಪರಮಾತ್ಮನಿಗೆ ಅರ್ಪಿಸುವದೇ ವೈಷ್ಣವ ಕರ್ಮವು. ಬಳಿಕ, ನನ್ನಲ್ಲಿ ಮನನೆಟ್ಟವ

ನಾಗಿ ಅವುಗಳ ಫಲಾಸೆಬಿಡು. ಇದರಿಂದ, ಅರ್ಜುನ ಮೊದಲ್ಗೊಂಡು ಸಕಲ ಪ್ರಾಣಿಗಳು ಪರಮಾತ್ಮನನ್ನೇ ಆರಾಧಿಸಿ ಮಾಡುವ ಕರ್ಮಗಳನ್ನೆಲ್ಲ ಕಡೆಗೆ ಅವನಿಗೇ ಅರ್ಪಿಸಬೇಕೆಂದು ಹೇಳಿದಂತಾಯಿತು.

೧೨.

श्रेयो हि ज्ञानमभ्यासाज्ज्ञानाद्ध्यानं विशिष्यते ।
ध्यानात्कर्मफलत्यागस्त्यागाच्छांतिरनंतरम् ॥ १२ ॥

**ಅಂ**— ಅಜ್ಞಾನಪೂರ್ವಕ ಅಭ್ಯಾಸಕ್ಕಿಂತ ಜ್ಞಾನವು ಮೇಲು. ಕೇವಲ ಜ್ಞಾನಕ್ಕಿಂತ ಜ್ಞಾನಪೂರ್ವಕ ಸಕಾಮಧ್ಯಾನವು ಹಿರಿದು. ಜ್ಞಾನಪೂರ್ವಕ ಸಕಾಮಧ್ಯಾನಕ್ಕಿಂತ ಕರ್ಮಫಲತ್ಯಾಗವೆಂಬ ನಿಷ್ಕಾಮಧ್ಯಾನವು ಶ್ರೇಷ್ಠ; ಮತ್ತು ನಿಷ್ಕಾಮಧ್ಯಾನಕ್ಕಿಂತ ಅಪರೋಕ್ಷಜ್ಞಾನವು ಮಿಗಿಲಾದದ್ದು. ಹೀಗೆ ಅಪರೋಕ್ಷಜ್ಞಾನವಾದ ಬಳಿಕ ಮೋಕ್ಷಲಾಭವು.

೧೩–೧೪. ಹಿಂದೆ ೬ನೆಯ ಶ್ಲೋಕದಲ್ಲಿ ಹೇಳಿದ ಕರ್ಮಗಳು ಉಪಲಕ್ಷಣವೆಂದು ತಿಳಿದು ಅನ್ಯ ಧರ್ಮಗಳೂ ಅಧಿಕಾರಿಗೆ ಅವಶ್ಯವೆಂದು ಹೇಳಿದ್ದು:—

अद्वेष्टा सर्वभूतानां मैत्रः करुण एव च ।
निर्ममो निरहंकारः समदुःखसुखः क्षमी ॥ १३ ॥
संतुष्टः सततं योगी यतात्मा दृढनिश्चयः ।
मय्यर्पितमनोबुद्धिर्यो मे भक्तः स मे प्रियः ॥ १४ ॥

**ಅಂ**—ನನ್ನನ್ನು ಆರಾಧಿಸುವ ಭಕ್ತನು ಎಂಥವನೆಂದರೆ, ಅನ್ಯರಿಗೆ ಕೇಡಕುಬಯಸದವ, ಮುಂಬರುವ ಸಂಕಟದ ಬಗ್ಗೆ ಮುಂದಾಗಿ ಎಚ್ಚರಿಕೆಕೊಟ್ಟು ಕಾಪಾಡುವವ, ಕೃಪೆಯುಳ್ಳವ, 'ಇದು ನನ್ನದು' ಎಂಬ ಸ್ವಾತಂತ್ರ್ಯಬುದ್ಧಿ ಇಲ್ಲದವ, ತನ್ನಲ್ಲಿರದ ಗುಣಗಳ ಬಗ್ಗೆ ಒಣ ಅಭಿಮಾನ–ಮೋಹ ಇಲ್ಲದವ, ವಿಷಯಸಂಬಂಧ ಸುಖವು ನಿಂದ್ಯವಾದ್ದರಿಂದ ದುಃಖಕ್ಕೆ ಸರಿಯೆಂದು ತಿಳಿಯುವವ, ತಾಳ್ಮೆಯುಳ್ಳವ, ಪರಮಾತ್ಮನು ಕೊಟ್ಟಿದ್ದರಲ್ಲಿ ತೃಪ್ತಿಹೊಂದುವವ, ಕರ್ಮಧ್ಯಾನಗಳೆಂಬ ಜ್ಞಾನೋಪಾಯವುಳ್ಳವ, ವಿಷಯಗಳಿಂದ ಮನವನ್ನು ಸೆಳೆದವ, ಅಪ್ರಾಮಾಣ್ಯಸಂದೇಹಗಳಿಲ್ಲದೆ ಪರತತ್ತ್ವದಲ್ಲಿ ನಿಶ್ಚಯವುಳ್ಳವ, ಮತ್ತು ನನಗೇ ಮನ–ಬುದ್ಧಿಗಳನ್ನು ಪೂರಾ ಒಪ್ಪಿಸಿದವ, ಇಂತಹ ಅಧಿಕಾರಿಯೇ ಪರಮಭಕ್ತನೆಂದು ತಿಳಿ.

೧೫.

यस्मान्नोद्विजते लोको लोकान्नोद्विजते च यः ।
हर्षामर्षभयोद्वेगैर्मुक्तो यः स च मे प्रियः ॥ १५ ॥

**ಅಂ**—ಲೋಕಕ್ಕೆ ಅಂಜದ, ಲೋಕವನ್ನು ಅಂಜಿಸದ, ಅಂದರೆ ಎಲ್ಲವೂ ಪರಮಾತ್ಮನಿಗೆ ಅಧೀನವೆಂದು ತಿಳಿದು ಲೋಕದ ಪರವೆಯಿಲ್ಲದ, ಯಾವಾಗಲೂ ಧರ್ಮದ ಕಡೆಗೆ ಒಲಿದ, ಮನೋವ್ಯಾಕುಲತೆ ಇಲ್ಲದ ಭಕ್ತನೇ ನನಗೆ ಪ್ರಿಯನು.

೧೬.

अनपेक्षः शुचिर्दक्ष उदासीनो गतव्यथः ।
सर्वारंभपरित्यागी यो मद्भक्तः स मे प्रियः ॥ १६ ॥

ಅಂ—ಪರಮಾತ್ಮನಹೊರ್ತು ಅನ್ಯರ ಅಪೇಕ್ಷೆ ಇಲ್ಲದವನು, ಬಾಹ್ಯಾಂತರಂಗ-ಶುದ್ಧಿ ಉಳ್ಳವನು, ಪರಮಾತ್ಮವಿಷಯಕ ಕರ್ಮಮಾಡುವಲ್ಲಿ ದಕ್ಷನು, ಉದಾಸೀನನೆಂದರೆ, ಮಾಡತಕ್ಕದ್ದರಲ್ಲಿ ಉಪಕಾರ-ಅಪಕಾರಗಳನ್ನು ಲಕ್ಷಿಸದವನು, ಅನ್ಯರು ಮಾಡಿದ ಅಪಕಾರಗಳಿಂದ ಆಗುವ ಮನೋವ್ಯಥೆ ಇಲ್ಲದವನು, ಅವೈಷ್ಣವಕರ್ಮತ್ಯಾಗ, ಅಭಿಮಾನತ್ಯಾಗ, ಫಲತ್ಯಾಗ, ಮಾಡುವ ಎಲ್ಲ ಕರ್ಮಗಳನ್ನು ಪರಮಾತ್ಮನಿಗೆ ಸಮರ್ಪಿಸುವ ತ್ಯಾಗ, ಹೀಗೆ ನಾಲ್ಕು ವಿಧದ ತ್ಯಾಗಿಯಾದ ಭಕ್ತನೇ ನನಗೆ ಪ್ರಿಯನು.

೧೭. ಹಿಂದೆ ೧೫ನೆಯ ಶ್ಲೋಕದಲ್ಲಿ 'ಹರ್ಷಾದಿಗಳಿಂದ ಹೀನನೆಂದು' ಹೇಳಿದ್ದರಿಂದ ಚಿರಕಾಲದ ನಂತರ ಅಧಿಕಾರಿಗೆ ಆ ವಿಕಾರಗಳು ಹುಟ್ಟಬಹುದೆಂಬ ಸಂದೇಹ ಬರಬಹುದು; ಅದರ ನಿರಸನೆಗಾಗಿ ಹೇಳಿದ್ದು.—

**यो न हृष्यति न द्वेष्टि न शोचति न कांक्षति ।**
**शुभाशुभपरित्यागी भक्तिमान्यः स मे प्रियः ॥ १७ ॥**

ಅಂ—ಇಲ್ಲಿ ವರ್ತಮಾನಕಾಲ ತೃತೀಯ ಪುರುಷ ಏಕವಚನಪ್ರಯೋಗದಿಂದ ವ್ಯಾಕರಣ ಸೂತ್ರಕ್ಕನುಸರಿಸಿ ಭಕ್ತನಿಗೆ ಹರುಷಾದಿ ವಿಕಾರಗಳು ಪ್ರಾಣಾಂತ್ಯದ ವರೆಗೆ ಇರುವದಿಲ್ಲೆಂದು ಸೂಚಿಸುವದು. ಹರುಷಪಡದವ, ದ್ವೇಷಿಸದವ, ದುಃಖಪಡದವ, ಇಚ್ಛಿಸಿದವ, ಮತ್ತು ಜ್ಞಾನ, ಭಕ್ತಿ ವೈರಾಗ್ಯ, ಇವುಗಳ ಹೊರ್ತು ಅನ್ಯ ಶುಭ ಅಶುಭಗಳನ್ನು ಬಿಟ್ಟ ಭಕ್ತನೇ ನನಗೆ ಪ್ರಿಯನು. ಇಲ್ಲಿ ವಿವೇಕವೇನಂದರೆ, ಹಿಂದಿನ ಶ್ಲೋಕದಲ್ಲಿ ತ್ಯಾಗವು ಸಾಮಾನ್ಯವಾಗಿ ನಿರೂಪಿಸಲಾಯ್ತು, ಇಲ್ಲಿ ಶುಭಾಶುಭಗಳ ತ್ಯಾಗವು ವಿಶೇಷವಾಗಿ ಹೇಳಿ ಇದೆ. ಇದರಂತೆಯೇ, 'ಬಯಸುವದಿಲ್ಲೆಂಬುದರಿಂದ' ಜ್ಞಾನ, ಭಕ್ತಿ, ವೈರಾಗ್ಯಗಳ ಹೊರ್ತು ಅನ್ಯದನ್ನು ಎಂದು ತಿಳಿಯಬೇಕು. ಹಿಂದೆ ೧೫ನೆಯ ಶ್ಲೋಕದಲ್ಲಿ ಹೇಳಿದ 'ಲೋಕದ ಅಂಜಿಕೆ ಇಲ್ಲ' ಎಂದರೆ ಪರಮಾತ್ಮನ ಹೊರ್ತು ಅನ್ಯರ ಭೀತಿ ಇಲ್ಲದಿರುವದು ಎಂಬರ್ಥ. ಅದರಿಂದ ಮುಂಚಿನ ಎರಡು ಶ್ಲೋಕಗಳಿಂದಾಗುವ ಪುನರುಕ್ತಿಯು ದೋಷವಿಲ್ಲ

೧೮. ಹಿಂದೆ ೧೩ನೇ ಶ್ಲೋಕದಲ್ಲಿ ದುಃಖವು ನಿಂದ್ಯವಾದಂತೆ, ವಿಷಯಸಂಬಂಧ ಸುಖವು ಕೂಡ ನಿಂದ್ಯವೇ ಎಂದು ತಿಳಿಯುವವನು ಭಕ್ತನೆಂದು ಸಾಮಾನ್ಯವಾಗಿ ಹೇಳಿ ಇದೆ. ಇಲ್ಲಿ, ಅದನ್ನೇ ವಿಶೇಷವಾಗಿ ಹೇಳಿದ್ದು.—

**समः शत्रौ च मित्रे च तथा मानापमानयोः ।**
**शीतोष्णसुखदुःखेषु समः संगविवर्जितः ॥ १८ ॥**

ಅಂ—ಶತ್ರುಮಿತ್ರರಿಂದಲೂ, ಮಾನಾಪಮಾನಗಳಿಂದಲೂ, ಆಗುವ ಹರುಷಶೋಕಗಳು ಭಕ್ತನಿಗೆ ತಲಗದೆ, ಅವನು ಒಂದೇ ವಿಧವಾಗಿರುವನು. ಶೀತ, ಉಷ್ಣಪದಾರ್ಥಗಳಿಂದ ಹುಟ್ಟುವ ಸುಖದುಃಖಾದಿಗಳಿಂದ ವಿಕಾರಹೊಂದದೆ, ಮಾಡುವ ಕರ್ಮಫಲದಲ್ಲಿ ಆಸಕ್ತಿಹೀನನಾಗಿರುವನು.

೧೯.

**तुल्यनिंदास्तुतिर्मौनी संतुष्टो येनकेनचित् ।**
**अनिकेतः स्थिरमतिर्भक्तिमान्मे प्रियो नरः ॥ १९ ॥**

ಅಂ—ನಿಂದೆಯು ತ್ಯಾಜ್ಯವಿರುವಂತೆ ಸ್ತುತಿಯನ್ನೂ ತಿಳಿಯುವವನು, ಒಂದೇ ಸ್ಥಳದಲ್ಲಿ ಇರದವನು, ವಿಚಾರಶೀಲನು ಅಥವಾ ಮಿತಭಾಷಿಯು, ಪರಮಾತ್ಮನ ಅನುಗ್ರಹದಿಂದ ಪ್ರಾಪ್ತವಾದುದರಲ್ಲಿ ಸಂತುಷ್ಟ ಇರುವವ ಅಥವಾ ಅಕಾರವಾಚ್ಯಪರಮಾತ್ಮನ ಆಶ್ರಯವುಳ್ಳವನು, ಕುತರ್ಕಗಳಿಂದ ಚಂಚಲಗೊಳ್ಳದ ಜ್ಞಾನವುಳ್ಳವನು. ಹಿಂದಿನ ಶ್ಲೋಕದಲ್ಲಿ 'ಭಕ್ತಿಯುಳ್ಳವ' ಎಂದು ಹಲವು ಸಾರೆ ಹೇಳಿದ್ದು ಭಕ್ತನಿಗೆ ಹೇಳಿದ ಗುಣಗಳಲ್ಲಿ ಭಕ್ತಿಯು ಎಲ್ಲಕ್ಕೂ ಹೆಚ್ಚಿನದೆಂದು ತೋರಿಸುವದಕ್ಕಾಗಿ ಇದೆ ಎಂದು ತಿಳಿಯತಕ್ಕದ್ದು.

೨೦. ಹಿಂದಿನ ಶ್ಲೋಕಗಳಲ್ಲಿ ಹೇಳಿದ ಅದ್ವೇಷಾ ಈ ಮೊದಲಾದ ಗುಣಗಳು ಕೇವಲ ಪರಮಾತ್ಮನ ಪ್ರೀತಿಗೆ ಸಾಧನಗಳೆಂದು ತಿಳಿಯಬೇಕು. 'ಅವನು ನನಗೆ ಪ್ರಿಯನು' 'ಅವನೇ ನನಗೆ ಪ್ರಿಯನು' ಎಂಬುದರಿಂದ ಭಕ್ತನು ಪರಮಾತ್ಮನಿಗೆ ಪ್ರಿಯನೆಂದು ಹೇಳಿ ಇದೆ. ಇವೆಲ್ಲ ಗುಣಗಳಿಂದ ಯುಕ್ತನಾದವನು ಪರಮಾತ್ಮನಿಗೆ ಅತಿಪ್ರಿಯನೆಂದು ಒಟ್ಟುಗೂಡಿಸಿ ಹೇಳಿದ್ದು:—

ये तु धर्म्यामृतमिदं यथोक्तं पर्युपासते ।
श्रद्दधाना मत्परमा भक्तास्तेऽतीव मे प्रियाः ॥ २० ॥

ಅಂ—ಪರಮಾತ್ಮನ ಆರಾಧನೆಗೂ, ಮುಕ್ತಿಗೂ, ಬೇಕಾದ ಸಾಧನದಲ್ಲಿಯೂ, ೧೩ನೆಯ ಶ್ಲೋಕದಿಂದ ಪರಮಾತ್ಮನ ಪ್ರೀತಿಗೆ ಅವಶ್ಯವಿರುವ ಅದ್ವೇಷ ಈ ಮೊದಲಾದ ಸಾಧನಗಳಲ್ಲಿಯೂ, ಆಸಕ್ತಿಬುದ್ಧಿಯುಳ್ಳವರೂ, ಶ್ರೀವಿಷ್ಣುವೇ ಸರ್ವೋತ್ತಮನೆಂದು ಜ್ಞಾನವುಳ್ಳವರೂ, ಆದ ಅಧಿಕಾರಿಗಳು ಯಥಾರ್ಥವಾಗಿ ನನ್ನನ್ನಾರಾಧಿಸುವದರಿಂದ ಇಂಥ ಭಕ್ತರೇ ಎಲ್ಲರಿಗಿಂತ ನನಗೆ ಕಡುಮುಮತೆಯುವರು.

इति श्रीमद्भगवद्गीतासूपनिषत्सु ब्रह्मविद्यायां योगशास्त्रे श्रीकृष्णार्जुनसंवादे
भक्तियोगो नाम द्वादशोऽध्याय ॥ १२ ॥

ಅಂ—ಈ ಮೇರೆಗೆ, ಷಡ್ಗುಣೈಶ್ವರ್ಯಸಂಪನ್ನನಾದ ಪರಮಾತ್ಮನಿಂದ ಮನೋಹರ,
ಅಲಂಕಾರಿಕ ಮತ್ತು ಇಷ್ಟ ಶಬ್ದಗಳಿಂದ ಉಪದೇಶಿಸಲ್ಪಟ್ಟದ್ದೂ ಉಪನಿಷತ್ತಿಗೆ
ಸಮಾನವೂ ಪರಬ್ರಹ್ಮವಿಷಯಕ ವಿದ್ಯೆಯೂ ಎನಿಸುವ ಮತ್ತು ಕರ್ಮ
ಯೋಗಾದಿಗಳನ್ನು ಪ್ರತಿಪಾದಿಸುವ, ಶ್ರೀಕೃಷ್ಣನಿಗೂ ಅರ್ಜುನ
ನಿಗೂ ನಡೆದ ಸಂವಾದರೂಪವಾದ **ಗೀತಾಶಾಸ್ತ್ರದಲ್ಲಿಯ**
**ಭಕ್ತಿಯೋಗ** ಎಂಬ **ಹನ್ನೆರಡನೆಯ** ಅಧ್ಯಾಯವು
ಮುಗಿಯಿತು.



# ೧೩ ನೆಯ ಅಧ್ಯಾಯವು.



೧. ಧೃತರಾಷ್ಟ್ರನು.—ಜ್ಞಾನಯೋಗ, ಕರ್ಮಯೋಗ, ಧ್ಯಾನಯೋಗ ಮತ್ತು ಭಕ್ತಿಯೋಗ ಗಳನ್ನೂ ಅವುಗಳಿಗೆ ಸಂಬಂಧಿಸಿದ ಅನೇಕ ವಿಶೇಷಧರ್ಮಗಳನ್ನೂ ಕೇಳಿ, ಮತ್ತು ಪರಮಾತ್ಮನ ವಿಶ್ವ ರೂಪವನ್ನೂ ಕಂಡು, ಅವನಲ್ಲಿ ಅತಿಭಕ್ತಿಯುಳ್ಳವನಾದ ಪಾರ್ಥನು ಶೋಕ, ಮೋಹ, ಸಂಶಯ, ವಿಪ ರೀತ ಜ್ಞಾನಗಳೆಂಬ ದೋಷಗಳಿಂದ ದೂರನಾಗಿ, ತನ್ನ ಕ್ಷತ್ರಿಯ ಕುಲಕ್ಕೆ ವಿಧಿಸಿದ ಯುದ್ಧಕ್ಕೆ ಪ್ರವರ್ತಿ ಸಿದನೋ, ಅಥವಾ ಕೃಷ್ಣಾರ್ಜುನರಿಗೆ ಮತ್ತೆ ಸಂವಾದ ನಡೆಯಿತೋ ಇದನ್ನು ಕುರಿತು ನನಗೆ ನಿರೂಪಿಸು.

ಸಂಜಯ.—ಧೃತರಾಷ್ಟ್ರಾ, ಪರಮಾತ್ಮನ ವಚನ ಕೇಳಿ, ಅವನ ವಿಶ್ವರೂಪವನ್ನು ಕಂಡು ಅರ್ಜು ನನ ಶೋಕ ಮೋಹಾದಿಗಳು ಅಳಿದಿದ್ದರೂ, ಯುದ್ಧವು ತನ್ನ ಕುಲಕ್ಕೆ ವಿಹಿತ ಧರ್ಮವೆಂದು ಅರಿತಿ ದ್ದರೂ, ಅವನು ಕೇಳಿದ ವಿಷಯಗಳಲ್ಲಿಯೇ ಮತ್ತೆ ಒದಗಿದ ಸಂದೇಹಗಳನ್ನು ನಿವಾರಿಸುವದಕ್ಕಾ ಗಿಯೂ, ವಿಶೇಷಜ್ಞಾನಕ್ಕಾಗಿಯೂ, ಪ್ರಶ್ನೆ ಕೇಳಿದ್ದರಿಂದ ಅವರಿಬ್ಬರಲ್ಲಿ ಮತ್ತೆ ಸಂವಾದವು ನಡೆಯಿತು.

ಈ ಅಧ್ಯಾಯವು ಮುಂದಿನ ೧೨ ಅಧ್ಯಾಯಗಳಲ್ಲಿ ಹೇಳಿದ ಪ್ರಮೇಯಗಳ ಸಂಕ್ಷೇಪಪರವಾ ಗಿದೆ; ಹೇಗಂದರೆ, ಮೊದಲಿನ ೬ ಅಧ್ಯಾಯಗಳಲ್ಲಿ (೨—೪೫) ನೆಯ ಶ್ಲೋಕವನ್ನು ಮೊದಲ್ಗೊಂಡು ೬ನೆಯ ಅಧ್ಯಾಯ ಮುಗಿಯುವವರೆಗೆ ಜ್ಞಾನ ಸಾಧನವೇ ಮುಖ್ಯವಾಗಿ ವರ್ಣಿಸಲ್ಪಟ್ಟಿತು, ಇನ್ನು ೭ನೆಯ ಅಧ್ಯಾಯದಲ್ಲಿ (೭—೧೨) ನೆಯ ಶ್ಲೋಕದಿಂದ ಜೀವಸ್ವರೂಪವು ವರ್ಣಿಸಲಾಯಿತು; ೭ನೆಯ ಆರು ಅಧ್ಯಾಯಗಳಲ್ಲಿ ಪರಮಾತ್ಮನ ಸ್ವರೂಪವು ವಿವರಿಸಲಾಯಿತು. ೬ನೆಯ ಅಧ್ಯಾಯದಲ್ಲಿ ೪ನೆಯ ಶ್ಲೋಕದಿಂದ 'ಕ್ಷೇತ್ರ' ಶಬ್ದವಾಚ್ಯವಾದ ಪರಮಾತ್ಮನ ನಿವಾಸಸ್ಥಾನವು ನಿರೂಪಿಸಲ್ಪಟ್ಟಿತು. ಹೀಗೆ ವಿಸ್ತಾರಪೂರ್ವಕವಾಗಿ ಹೇಳಲ್ಪಟ್ಟ ಈ ವಿಷಯಗಳೆಲ್ಲ ಪ್ರಕೃತ ಅಧ್ಯಾಯದಲ್ಲಿ ಪ್ರಶ್ನೋತ್ತರರೂಪ ದಿಂದ ಸಂಕ್ಷೇಪವಾಗಿ ವರ್ಣಿಸಲಾಗುವವು

**अर्जुन उवाच ।**

**प्रकृतिं पुरुषं चैव क्षेत्रं क्षेत्रज्ञमेव च ।**
**एतद्वेदितुमिच्छामि ज्ञानं ज्ञेयं च केशव ॥ १ ॥**

**ಅಂ**—ಅರ್ಜುನನು ನುಡಿದುದು.—ಕೇಶವಾ, ಪ್ರಕೃತಿ, ಜೀವ, ಕ್ಷೇತ್ರ, ಕ್ಷೇತ್ರಜ್ಞ, ಜ್ಞಾನ ಸಾಧನ, ಜ್ಞಾನವಿಷಯ, ಇವುಗಳನ್ನೆಲ್ಲ ತಿಳಿಯಲು ಬಯಸುವೆ.

**ವಿಂ ಅಂ**—ಸ್ವಾಮಿ, (೩—೨೭, ೩—೨೯, ೪—೬, ೭—೪, ೯—೭, ೯—೮) ನೆಯ ಶ್ಲೋಕಗಳಲ್ಲಿ ಪ್ರಕೃತಿಯ ವರ್ಣನೆಯುಂಟು. (೨—೧೫, ೩—೧೯, ೫—೨೩, ೧೨—೧೯) ನೆಯ ಶ್ಲೋಕಗಳಲ್ಲಿ ಪುರುಷನು ಯಾರೆಂಬುದು ಹೇಳಿ ಇದೆ. ಉಪನಿಷತ್ತುಗಳಲ್ಲಿಯೂ, ಪುರಾಣಗಳಲ್ಲಿಯೂ, ಈ ಪ್ರಕೃತಿ ಪುರುಷರಿಬ್ಬರೇ 'ಕ್ಷೇತ್ರ' 'ಕ್ಷೇತ್ರಜ್ಞ' ಪದಗಳಿಂದ ವಾಚ್ಯರೆಂದು ವ್ಯವಹಾರ ಉಂಟೋ, ಅಥವಾ ಅನ್ಯರೋ ? ಅದರಂತೆ (೨—೨೯, ೫—೩, ೩—೩೧, ೪—೩೭, ೪—೧೬) ನೆಯ ಶ್ಲೋಕಗಳಲ್ಲಿ ಬಂಧ

ಮೋಕ್ಷಗಳು ಹೇಳಲ್ಪಟ್ಟಿವೆ. ಪ್ರಕೃತಿಯು ಎಂಥದು ? ಅದರ ಸ್ವಭಾವ ಯಾವದು ? ಅದರ ಗುಣಗಳ್ಯಾವವು ? ಅದರ ಬಂಧನವೆಂಥದು ? ಅದರ ನಾಶದಿಂದ ಮೋಕ್ಷವು ಹೇಗೆ ಲಭಿಸುವದು ? (೪–೩೯, ೫–೧೬, ೫–೨೦, ೫–೧೭, ೭–೧೭, ೭–೧೮, ೭–೧೯) ನೆಯ ಶ್ಲೋಕಗಳಲ್ಲಿ ಜ್ಞಾನವು ಹೇಳಲಾಗಿದೆ. ಆ ಜ್ಞಾನವು ಯಾವ ವಿಷಯಕ್ಕಿರುವದು ? ಅಂಥ ಜ್ಞಾನಕ್ಕೆ ವಿಷಯನು ಯಾರು ? (೪–೩೪, ೪–೩೯) ನೆಯ ಶ್ಲೋಕಗಳಲ್ಲಿ ಗುರೂಪಾಸನೆ, ಶ್ರದ್ಧೆ, ಭಕ್ತಿ, ಇಂದ್ರಿಯನಿಗ್ರಹ, ಮೊದಲಾದ ಸಾಧನಗಳು ಹೇಳಲ್ಪಟ್ಟಿವೆ; ಆದರೆ, ಸಾಧನಗಳೆಂಬಿವು ಇವಿಷ್ಟೆಯೋ, ಇನ್ನೂ ಕೆಲವು ಬೇರೆ ಇರುವವೋ ? ಎಂಬುದನ್ನು ತಿಳಿಯಬಯಸುವೆ. ನೀನು ಸರ್ವಸಮರ್ಥನಾಗಿದ್ದರೂ, ಅದನ್ನು ಹೇಳಲೇಬೇಕೆಂದು ನನ್ನ ನಿರ್ಬಂಧವಿಲ್ಲ, ಆದರೆ, ಆ ವಿಷಯಗಳನ್ನು ಕುರಿತು ಹೆಚ್ಚು ಜ್ಞಾನ ಸಂಪಾದಿಸಲು ಪ್ರಾರ್ಥಿಸುವೆನು ಮಾತ್ರ.

೨. ಇನ್ನು, ಪರಮಾತ್ಮನ ಸ್ವರೂಪಜ್ಞಾನವೇ ಮುಕ್ತಿಗೆ ಕಾರಣವೆಂದು ಹಿಂದೆ ಹೇಳಿ ಇದೆ; ಅಂದಬಳಿಕ, ಅವನ ಸ್ವರೂಪ ವರ್ಣನೆಯೇ ಯೋಗ್ಯವು ! ಅದರಂತೆ, ಕ್ಷೇತ್ರ ಸ್ವರೂಪವು ಹಿಂದೆ (೧೨–೩) ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿದೆ; ಆದ್ದರಿಂದ, ಅವೆರಡನ್ನೂ ಮತ್ತೆ ಈಗ ಹೇಳುವ ಕಾರಣವೇನೆಂದು ಕೇಳಿದರೆ, ಪರಮಾತ್ಮನು ಕ್ಷೇತ್ರಜ್ಞನೆಂಬ ಜ್ಞಾನವೇ ಮೋಕ್ಷಕ್ಕೆ ಅವಶ್ಯವಾದ್ದರಿಂದ 'ಕ್ಷೇತ್ರವೆಂದರೇನು ?' ಎಂಬುದನ್ನು ಹೇಳುವಾಗ ಪರಮಾತ್ಮನೇ ಕ್ಷೇತ್ರಜ್ಞನೆಂಬುದನ್ನು ಕುರಿತು ಹೇಳಿದ್ದು:—

**श्रीभगवानुवाच ।**

**इदं शरीरं कौंतेय क्षेत्रमित्यभिधीयते ।**
**एतद्यो वेत्ति तं प्राहुः क्षेत्रज्ञ इति तद्विदः ॥ २ ॥**

**ಅಂ**—ಪರಮಾತ್ಮನು ಅಂದದ್ದು:—ಕುಂತಿಪುತ್ರನೇ; ಕಣ್ಣಿದುರಿಗೆ ತೋರುವ ಅವ್ಯಕ್ತ, ಮಹದಹಂಕಾರಗಳನ್ನುಳ್ಳ ಶರೀರವು ಪರಮಾತ್ಮನ ನಿವಾಸಕ್ಕೆ ಸ್ಥಾನವಾದ್ದರಿಂದ ಕ್ಷೇತ್ರವೆನಿಸುವದು. 'ಕ್ಷೇತ್ರ' ಶಬ್ದವಾಚ್ಯವಾದ ಅವ್ಯಕ್ತಾದಿಯನ್ನು ಬಲ್ಲವನು ಕ್ಷೇತ್ರಜ್ಞನೆಂದೂ ಕ್ಷೇತ್ರಜ್ಞಾನಿಗಳು ಹೇಳುವರು. 'ಶರೀರ' ಶಬ್ದವು ಅವ್ಯಕ್ತಪರವಾಗಿದೆ ಎಂಬುದು ಹೇಗಂದರೆ, ಅದು ವಿಯೋಗಹೊಂದಲು ಜೀವದ ಹಿಂಸೆಗೆ ಕಾರಣವಾದುದರಿಂದಲೂ, ಪರಮಾತ್ಮನು ಅದಕ್ಕೆ ಪ್ರೇರಕನಾದುದರಿಂದಲೂ, ಅದು ಶರೀರವೆನಿಸುವದು. ಇದರಿಂದ ಮುಂದಿನ ೭ನೆಯ ಶ್ಲೋಕದಲ್ಲಿಯ 'ಸಂಘಾತ' ಪದದಿಂದ "ಕ್ಷೇತ್ರದಿಂದ ಒದಗುವ ವಿಕಾರಗಳಲ್ಲಿ ಕೆಲವಂಶದಿಂದ ಹೇಳಲ್ಪಟ್ಟ ಶರೀರಕ್ಕೆ ಪೂರ್ಣಕ್ಷೇತ್ರವೆಂಬ ಸಂಜ್ಞೆಯು ಹೇಗೆ" ಎಂಬ ಸಂದೇಹವು ದೂರಾಯಿತು.

೩. ಪ್ರಕೃತಿಯೇ ಕ್ಷೇತ್ರವು, ಪರಮಾತ್ಮನೇ ಕ್ಷೇತ್ರಜ್ಞನು, ಹೀಗೆ ಹಿಂದಿನ ಶ್ಲೋಕದಲ್ಲಿ ಹೇಳಿ ಇದೆ. ಪರಮಾತ್ಮನು ಕ್ಷೇತ್ರಜ್ಞನಾಗಲಿ; ಜ್ಞಾನವಿದ್ದವನು ಕ್ಷೇತ್ರಜ್ಞನು; ಜೀವಕ್ಕೆ ಕೂಡ ಕ್ಷೇತ್ರದ ಅಂಶವೆಂದರೆ, ಮನಸ್ಸು, ಬುದ್ಧಿ, ಇಂದ್ರಿಯಗಳಲ್ಲಿ 'ನಾನು, ನನ್ನದೆಂಬ' ಜ್ಞಾನವಿರುವದರಿಂದ ಅದು ಕೂಡ ಕ್ಷೇತ್ರಜ್ಞವಾಗಲರಿಯದೇ ? ಅದಕ್ಕೆ ಕ್ಷೇತ್ರದ ಜ್ಞಾನ ಉಂಟೇ ಅಥವಾ ಇಲ್ಲವೇ ? ಅಂಥ ಜ್ಞಾನ ಉಂಟೆಂದು ಹೇಳಿದರೆ, ಪರಮಾತ್ಮನು ಕ್ಷೇತ್ರಜ್ಞ ಎಂಬುವ ಮಾತು ಹೇಗೆ ಸಲ್ಲುವದು ? ಜ್ಞಾನವಿಲ್ಲೆಂದು ಹೇಳಿದರೆ, 'ಕ್ಷೇತಜ್ಞ' ಶಬ್ದದ ಅವಯವಗಳಿಂದ ಜೀವವು ಕ್ಷೇತ್ರಜ್ಞವಲ್ಲೆಂದು ಹೇಳುವದು ಅದೆಂತು ಸರಿಯಾದೀತು ? ಎಂದು ಕೇಳಿದ್ದಕ್ಕೆ ಸಮಾಧಾನಹೇಳಿದ್ದು :—

**क्षेत्रज्ञं चापि मां विद्धि सर्वक्षेत्रेषु भारत ।**
**क्षेत्रक्षेत्रज्ञयोर्ज्ञानं यत्तज्ज्ञानं मतं मम ॥ ३ ॥**

**ಅಂ**—ಭರತಕುಲಶ್ರೇಷ್ಠನೇ, ಅವ್ಯಕ್ತಾದಿ ಸಕಲ ಕ್ಷೇತ್ರಗಳಲ್ಲಿ ಕ್ಷೇತ್ರಜ್ಞನೆಂದರೆ ನಾನೇ ಎಂದು ತಿಳಿ; ಹೊರ್ತು ಜೀವವಲ್ಲ, ಮತ್ತು ಕ್ಷೇತ್ರ–ಕ್ಷೇತ್ರಜ್ಞರ ಜ್ಞಾನವೆಂದರೆ, ನನ್ನ ವಿಷಯದ ಯಥಾರ್ಥ ಜ್ಞಾನವೆಂದು ನನ್ನ ಅಭಿಪ್ರಾಯ. ಇಲ್ಲಿ, "ಸರ್ವಕ್ಷೇತ್ರಗಳಲ್ಲಿ" ಎಂದು ಹೇಳಿದ್ದು, इदं शरीरं ಎಂಬಲ್ಲಿ 'ಶರೀರ'ಪದದಿಂದ ಹೇಳಲ್ಪಟ್ಟ ಅವ್ಯಕ್ತಾದಿಯು ನಾಶವು ಪರಮಾತ್ಮನಿಂದ ಆಗುವದರಿಂದ 'ಕ್ಷೇತ್ರ' ಪದದಿಂದ ವಾಚ್ಯವೆಂಬ ಸೂಚನೆಗಾಗಿ ಇದೆ.

೩ಂ ಅಂ—ಪ್ರಕೃತಿಯು ಕ್ಷೇತ್ರವಾದುದರಿಂದ ಅದರ ಒಂದಂಶದಿಂದ ಜ್ಞಾನವು ಜೀವಕ್ಕೆ ಇರುವಮೂಲಕ, ಅದು ಕ್ಷೇತ್ರಜ್ಞವೆಂದು ಹೇಳಬಹುದು; ಆದರೆ, ಅದಷ್ಟೇ ಕ್ಷೇತ್ರಜ್ಞವಲ್ಲ, ನಾನು ಕೂಡ ಕ್ಷೇತ್ರಜ್ಞನೆಂದು ತಿಳಿ ಹಾಗಾದರೆ, ಜೀವದಂತೆ ಪರಮಾತ್ಮನಿಗೆ ಸಹ ಅಲ್ಪಾಂಶ ವಿಷಯಕ ಜ್ಞಾನ ಉಂಟೇ ಎಂದು ಕೇಳಿದರೆ, ಜೀವಕ್ಕೆ ಮಾತ್ರ ಅದು ವಾಸವಾಗಿರುವ ಒಂದೇ ಕ್ಷೇತ್ರದ ಜ್ಞಾನವಿರುವದು, ನನಗೆ ಮಾತ್ರ ಹಾಗಲ್ಲ, ಸಕಲ ಕ್ಷೇತ್ರಗಳ ಜ್ಞಾನವೂ ಇರುವದು. ಹಾಗಾದರೆ, ಒಂದು ಕ್ಷೇತ್ರಕ್ಕೆ ಇಬ್ಬರು ಅಧಿಪತಿಗಳಾದ್ದರಿಂದ ಅವರಿಬ್ಬರೂ ಸಮಾನರೇ ಹೇಗೆಂದು ಕೇಳಿದರೆ, ಅವರಲ್ಲಿ ಒಬ್ಬನು ಸರ್ವೋತ್ತಮನು, ಎರಡನೆಯದಾದ ಜೀವವು ಅಮುಖ್ಯ ಕ್ಷೇತ್ರಜ್ಞವು; ಹೀಗೆ ಪ್ರತಿಕ್ಷೇತ್ರದಲ್ಲಿ ಮುಖ್ಯ–ಅಮುಖ್ಯರೆಂಬ ಇಬ್ಬರು ಕ್ಷೇತ್ರಜ್ಞರಿರುವರು. ಈ ವಿಷಯಕ್ಕೆ ಮುಂದೆ ೧೩, ೨೨, ೩೩ನೇ ಶ್ಲೋಕಗಳಲ್ಲಿ ಹೇಳಲ್ಪಡುವದು. ಕ್ಷೇತ್ರ–ಕ್ಷೇತ್ರಜ್ಞರ ವಿಷಯಕ್ಕೆ ಸಂಪಾದಿಸಿದ ಜ್ಞಾನವೇ ನನ್ನ ವಿಷಯಕ ಜ್ಞಾನವಾಗಿದ್ದು, ಅದು ಮೋಕ್ಷಕ್ಕೆ ಸಾಧನವಾಗಿದೆ ಸಕಲ ಜಡಗಳ ಸ್ವರೂಪಸ್ಥಿತಿಗಳಿಗೂ, ಸಕಲ ಜೀವಗಳ ಸ್ವರೂಪಸ್ಥಿತಿ ಪ್ರವೃತ್ತಿಗಳಿಗೂ, ನಾನೇ ನಿಯಾಮಕನೆಂಬ ಜ್ಞಾನವೇ ನನ್ನ ಸಂಬಂಧವಾದ ಜ್ಞಾನವೆಂದು ನಿಶ್ಚಯವಾಗಿ ತಿಳಿ. ಇದರಲ್ಲಿ ಸಂದೇಹವಿಲ್ಲ.

೪. ಕ್ಷೇತ್ರ–ಕ್ಷೇತ್ರಜ್ಞವಿಷಯಕ ಜ್ಞಾನವು ಗಹನವಿದ್ದಂತೆ ತೋರುವದಲ್ಲ! ಆದ್ದರಿಂದ ಅವೆರಡನ್ನೂ ವಿಸ್ತಾರಪೂರ್ವಕವಾಗಿ ಹೇಳೆಂದು ಅರ್ಜುನನು ಕೇಳಿದ್ದಕ್ಕೆ ಶ್ರೀಕೃಷ್ಣನು ಉತ್ತರಕೊಟ್ಟಿದ್ದು—

**तत्क्षेत्रं यच्च यादृक् च यद्विकारि यतश्च यत् ।**
**स च यो यत्प्रभावश्च तत्समासेन मे शृणु ॥ ४ ॥**

**ಅಂ**—ಯಾವದು ಪರಮಾತ್ಮನ ನಿವಾಸಸ್ಥಾನವೆಂದು 'ಕ್ಷೇತ್ರ'ಪದದಿಂದ ಹೇಳಲ್ಪಟ್ಟಿರುವದೋ, ದೇಹದ್ವಾರದಿಂದ ಜೀವಹಿಂಸೆಗೆ ಕಾರಣವೆಂದು ಪರಮಾತ್ಮನು ಪ್ರೇರಕನಾದುದರಿಂದ 'ಶರೀರ'ಪದ ದಿಂದ ಅವ್ಯಕ್ತಾದಿಯು ಪ್ರಕೃತವಾಗಿರುವದೋ, ಆ ಕ್ಷೇತ್ರದ ಸ್ವರೂಪವು ಎಂಥದು? ಅದು ಹೇಗಿರುವದು? ಅದು ಯಾವ ವಿಕಾರದಿಂದ ಯುಕ್ತವಾಗಿರುವದು? ಯಾವ ವಿಧದ ಪ್ರವೃತ್ತಿಗೆ ಅನುಕೂಲವಾದ ಧರ್ಮವುಳ್ಳ ಪುರುಷನಿಂದ ಅದು ಪ್ರವರ್ತಿಸಲ್ಪಡುವದು? ಪ್ರವರ್ತಕನು ಎಂಥವನು? ಅವನ ಸ್ವರೂಪವು ಎಂಥದು? ಅವನ ಸಾಮರ್ಥ್ಯವು ಎಂತಹದು? ಇದನ್ನೆಲ್ಲ ನನ್ನಿಂದ ಸಂಕ್ಷೇಪವಾಗಿ ಕೇಳು, ಮತ್ತು ಅದರಲ್ಲಿ ವಿಶ್ವಾಸವಿಡು.

೫. ಅರ್ಜುನ:—ನೀನು ಸಂಕ್ಷೇಪವಾಗಿ ನುಡಿಯುವದನ್ನೆಲ್ಲ ಕೇಳೆಂದು ನುಡಿದಿರುವಿ ಕ್ಷೇತ್ರ–ಕ್ಷೇತ್ರಜ್ಞರ ಸ್ವರೂಪ ಮೊದಲಾದವುಗಳನ್ನು ಯಾರು ಎಲ್ಲಿ ಹೇಳಿರುವರು? ಅವುಗಳು ಎಲ್ಲಿಯಾದರೂ ವಿಸ್ತಾರಪೂರ್ವಕವಾಗಿ ಹೇಳಲ್ಪಟ್ಟಿದ್ದರೆ, ಅಲ್ಲಿಂದ ತಿಳಿದುಕೊಳ್ಳಲು ಶಕ್ಯವು. ಅಂದಬಳಿಕ ನೀನು

ಹೇಳುವ ಆಯಾಸವೇಕೆ ? ಮೇಲಾಗಿ, "ನಾನು ಹೇಳುವೆನು; ನನ್ನಿಂದಲೇ ಕೇಳಬೇಕು" ಎಂದು ಹೇಳಿರುವಿ. ನೀನೆಲ್ಲ ಅವುಗಳನ್ನು ಬಲ್ಲೆಯಾ ? ಅವನ್ನು ನೀನು ಮನಕಲ್ಪನೆಯಿಂದ ಹೇಳುವಿಯೋ? ಅನ್ಯ ಪ್ರಾಮಾಣಿಕರು ಹೇಳಿದ್ದನ್ನನುಸರಿಸಿ ಹೇಳುವಿಯೋ ? ಇದನ್ನೆಲ್ಲ ಹೇಳು. ಶ್ರೀಕೃಷ್ಣನು ಉತ್ತರ ಕೊಟ್ಟಿದ್ದು :—

ऋषिभिर्बहुधा गीतं छंदोभिर्विविधैः पृथक् ।
ब्रह्मसूत्रपदैश्चैव हेतुमद्भिर्विनिश्चितम् ॥ ५ ॥

ಅಂ—ತಾನು ಹೇಳುವದೆಲ್ಲ ಪ್ರಮಾಣವೆಂಬಲ್ಲಿ ನುಡಿದದ್ದು —ಆ ಕ್ಷೇತ್ರಾದಿಗಳ ಸ್ವರೂಪವು ಋಷಿಗಳಿಂದ ಬಹಳವಾಗಿ ವಿಸ್ತರಿಸಲ್ಪಟ್ಟಿದೆ, ವಿವಿಧ ವೇದಗಳಿಂದಲೂ ಸ್ತುತಿಸಲ್ಪಟ್ಟಿದೆ, ನ್ಯಾಯ ಗಳಿಂದ ಯುಕ್ತವಾದ ಬ್ರಹ್ಮಸೂತ್ರಗಳಿಂದಲೂ ನಿಶ್ಚಯಿಸಲ್ಪಟ್ಟಿದೆ. ಆದುದರಿಂದ ಅದನ್ನೆಲ್ಲ ಕೇಳು.

ವಿಂ ಅಂ—ನನ್ನಿಂದ ಹೇಳಲ್ಪಡುವ ಇದೆಲ್ಲ ಋಷಿಗಳಿಂದ ವಿವಿಧ ರೀತಿಯಾಗಿ ವಿವರಿಸಲ್ಪಟ್ಟಿದ್ದರೂ, ಅದನ್ನೇ ನಾನು ನಿನಗೆ ಸಂಕ್ಷೇಪವಾಗಿ ಹೇಳುವೆನು. ಹಾಗಾದರೆ, ನೀನು ಹೇಳುವಲ್ಲಿ ಋಷಿಗಳು ಪ್ರಮಾಣ, ಆದರೆ, ಅವರಿಗೆ ಪ್ರಮಾಣರು ಯಾರು ? ಎಂದು ಪ್ರಶ್ನಮಾಡಿದರೆ, ಋಷಿಗಳಿಗೆ ಋಕ್, ಯಜುಸ್, ಸಾಮ, ಅಥರ್ವಣ ವೇದಗಳೇ ಪ್ರಮಾಣಗಳು; ಅಲ್ಲಿ ಅವುಗಳ ವಿಸ್ತಾರ ಉಂಟು. ಹಾಗಾದರೆ, ವೇದಗಳ ಅರ್ಥವು ಅತಿಗಹನವಾದುದರಿಂದ ಅದರ ಅರ್ಥವನ್ನು ಯಾವ ಪ್ರಮಾಣದಿಂದ ತಿಳಿದು ಅದಕ್ಕನುಸರಿಸಿ ಋಷಿಗಳು ಹೇಳುವರೆಂದು ಕೇಳಿದರೆ, ಬ್ರಹ್ಮಸೂತ್ರಗಳ ಒಂದೊಂದು ಪದವು ಅನೇಕ ವೇದಾರ್ಥಗಳಿಗೆ ನಿರ್ಣಾಯಕವಾದ್ದರಿಂದ, ಬ್ರಹ್ಮಸೂತ್ರ ವಾಕ್ಯಗಳಿಂದ ಅಥವಾ ಪದಗಳಿಂದ ಆ ಅರ್ಥವು ನಿಶ್ಚಿತವಾಗಿದೆ; ಅದಕ್ಕನುಸರಿಸಿಯೇ ಋಷಿಗಳು ಹೇಳುವರು; ಹಾಗಾದರೆ, ಬ್ರಹ್ಮ ಸೂತ್ರಗಳು ಅತಿಗಹನಾರ್ಥವುಳ್ಳವುಗಳಾದ್ದರಿಂದ, ಅವುಗಳನ್ನು ನಿರ್ಣಯಿಸುವದು ಶಕ್ಯವೇ ಹೇಗೆಂದು ಕೇಳಿದರೆ, ಬ್ರಹ್ಮಸೂತ್ರಗಳ ಅರ್ಥವು ಯುಕ್ತಿಗನುಸರಿಸಿರುವದು. ಅವುಗಳಿಗನುಸರಿಸಿಯೇ ಅರ್ಥವನ್ನು ನಿಶ್ಚಯಿಸತಕ್ಕದ್ದು. ಈ ವಿಷಯವಾಗಿ ಯುಕ್ತಿಯುಕ್ತವಾದ ವಚನವು ಗ್ರಾಹ್ಯವೇ ಹೊರ್ತು ಪುರುಷ—ಗೌರವಕ್ಕಾಗಿಯಲ್ಲವೆಂದು, ನ್ಯಾಯ ಉಂಟು. ಹೀಗೆ ಯುಕ್ತಿಗನುಸರಿಸಿಯೇ ಸೂತ್ರಾರ್ಥವನ್ನು ಗೊತ್ತುಮಾಡಿ, ಅದರಂತೆ ವೇದಾರ್ಥವನ್ನು ನಿರ್ಧರಿಸಿ ಹಾಗೆ ಹೇಳುವರು. ನಾನಾದರೂ ಋಷಿಗಳು ಹೇಳುವದನ್ನೇ ಆಚರಿಸುವೆ. ಅದನ್ನು ಭಕ್ತಿಪೂರ್ವಕವಾಗಿ ಕೇಳು. ಕ್ಷೇತ್ರ—ಕ್ಷೇತ್ರಜ್ಞರ ಯಥಾರ್ಥ ಜ್ಞಾನವನ್ನು ತಿಳಿಯಲು ಅಶಕ್ಯವಾದ್ದರಿಂದ ನಾನು ಸಂಕ್ಷೇಪವಾಗಿ ಹೇಳುವೆ.

೬–೭ ಕ್ಷೇತ್ರವು ಎಂಥದು ? ಯಾವ ಪ್ರಕಾರದ್ದು ? ಯಾವ ವಿಕಾರದಿಂದ ಯುಕ್ತವಾಗಿದ ? ಎಂಬುವ ಬಗ್ಗೆ ಹೇಳಿದ್ದು :—

महाभूतान्यहंकारो बुद्धिरव्यक्तमेव च ।
इंद्रियाणि दशैकं च पंच चेंद्रियगोचराः ॥ ६ ॥
इच्छा द्वेषः सुखं दुःखं संघातश्चेतना धृतिः ।
एतत्क्षेत्रं समासेन सविकारमुदाहृतम् ॥ ७ ॥

ಅಂ—ಪೃಥ್ವಿ, ಆಪ, ತೇಜಸ್ಸು, ಆಕಾಶ, ವಾಯು, ಹೀಗೆ ಪಂಚಮಹಾಭೂತಗಳು, ಅವುಗಳಿಗೆ ಕಾರಣವಾದ ಅಹಂಕಾರತತ್ವ (ಮಹತ್ತತ್ವ), ಅದಕ್ಕೆ ಕಾರಣವಾದ ಬುದ್ಧಿ ಎಂಬ ಅಂತಃಕರಣ ವಿಶೇಷವು, ಅದಕ್ಕೆ ಕಾರಣವಾದ ಮೂರು ಗುಣಗಳುಳ್ಳ 'ಅವ್ಯಕ್ತ' ಶಬ್ದವಾಚ್ಯ ಪ್ರಕೃತಿಯು,

ಈ ಮೇರೆಗೆ ಇವುಗಳಿಂದ ಯುಕ್ತವಾದ ಪ್ರಕೃತಿ, ಕಿವಿ, ಕಣ್ಣು, ತ್ವಚ, ನಾಲಿಗೆ, ಮೂಗುಗಳೆಂಬ ಐದು ಜ್ಞಾನೇಂದ್ರಿಯುಗಳೂ, ವಾಣಿ, ಕೈ, ಕಾಲು, ಎರಡು ಗುಹ್ಯೇಂದ್ರಿಯುಗಳು, ಐದು ಕರ್ಮೇಂದ್ರಿಯುಗಳು, ಮನಸು, ಇಷ್ಟೆಲ್ಲ ಕೂಡಿ ಹನ್ನೊಂದು ಇಂದ್ರಿಯುಗಳೂ, ಈ ಜ್ಞಾನೇಂದ್ರಿಯುಗಳ ವಿಷಯುಗಳಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ವಿಷಯುಗಳೂ, ಪ್ರಕೃತಿಸಹಿತ ಇಪ್ಪತ್ತುನಾಲ್ಕು ತತ್ವಗಳಾಗುವವು. ಈ ಪ್ರಕಾರವಾಗಿ ಮೊದಲಿನ ಎರಡು ಪ್ರಶ್ನಗಳಿಗೆ ಉತ್ತರ ಹೇಳಲ್ಪಟ್ಟಿತು. ಇಚ್ಛೆ, ದ್ವೇಷ, ಸುಖ, ದುಃಖ, ದೇಹ, ಮನಸಿನ ವ್ಯಾಪ್ತಿ, ಧೈರ್ಯ, ಈ ಮೊದಲಾದ ವಿಕಾರಗಳಿಂದ ಕ್ಷೇತ್ರವು ಯುಕ್ತವಾಗಿದೆ, ಹೀಗೆ ನಾನು ನಿನ್ನನ್ನು ಕುರಿತು ಕ್ಷೇತ್ರವನ್ನು ವಿಸ್ತಾರವಾಗಿ ಹೇಳಿರುವೆನು.

ವಿಂ ಅಂ—ಇಲ್ಲಿ, ಕ್ಷೇತ್ರದ ವಿಕಾರಗಳಾದ ಇಚ್ಛೆ ಮೊದಲಾದವುಗಳಿಗೆ ಅಭಿಮಾನಿಗಳಾರೆಂಬುದನ್ನು ತಿಳಿಯುವದು ಅವಶ್ಯ; ಆದ್ದರಿಂದ ಅದರ ವಿಸ್ತಾರವು ಹೇಗೆಂದರೆ, ಆಕಾಶಕ್ಕೆ ವಿಘ್ನೇಶನು, ವಾಯುವಿಗೆ ಮುಖ್ಯವಾಯುವಿನ ಮಗನಾದ ಮರೀಚಿಯು, ಅಗ್ನಿಗೆ ವನ್ಹಿಯು, ನೀರಿಗೆ ವರುಣನು, ಭೂಮಿಗೆ ಧರಾದೇವಿಯು, ಅಹಂಕಾರಕ್ಕೆ ರುದ್ರನು, ಮಹತ್ತತ್ವಕ್ಕೆ ಚತುರ್ಮುಖನು, ಬುದ್ಧಿ ತತ್ವಕ್ಕೆ ಉಮಾದೇವಿಯು, ಅವ್ಯಕ್ತತತ್ವಕ್ಕೆ ಶ್ರೀದೇವಿಯು, ಇಂದ್ರಿಯುಗಳಲ್ಲಿ ಮನಸಿಗೆ ಸ್ಕಂದ, ಇಂದ್ರ, ಅನಿರುದ್ಧರು, ಕಿವಿಗೆ ಚಂದ್ರನು, ತ್ವಕ್ಕಿಗೆ ವಾಯುವಿನ ಮಗನಾದ ಮರುತನು, ಕಣ್ಣಿಗೆ ಸೂರ್ಯನು, ನಾಲಿಗೆಗೆ ವರುಣನ ಅನ್ಯರೂಪವು, ಮೂಗಿಗೆ ಅಶ್ವಿನಿಕುಮಾರರು, ವಾಣಿಗೆ ಅಗ್ನಿಯು, ಕೈಗಳಿಗೆ ವಾಯುವಿನ ಪುತ್ರರಾದ ಮರುತರು, ಪಾದಗಳಿಗೆ ವಿಷ್ಣುವಿನ ಆವೇಶವುಳ್ಳ ಶಚಿದೇವಿಯ ಮಕ್ಕಳಾದ ಯಜ್ಞ–ಶಂಭುಗಳು, ಗುಹ್ಯೇಂದ್ರಿಯುಗಳಿಗೆ ಯಮ, ರುದ್ರ, ಮನುಗಳು, ಇಂದ್ರಿಯುಗಳಿಗೆ ವಿಷಯುಗಳಾದ ಶಬ್ದಸ್ಪರ್ಶಾದಿಗಳಿಗೆ ರುದ್ರಪುತ್ರರು, ವಿಕಾರಗಳಲ್ಲಿ ಇಚ್ಛೆಗೆ ಶ್ರೀಭಾರತಿದೇವಿಯರು, ದ್ವೇಷ ದುಃಖಗಳಿಗೆ ಕಲಿದ್ವಾಪರರು, ಸುಖಕ್ಕೆ ಮುಖ್ಯವಾಯುವು, ಧೈರ್ಯಕ್ಕೆ ಸರಸ್ವತಿ ಭಾರತಿದೇವಿಯರು, ಚೇತನೆಗೆ ಶ್ರೀದೇವಿಯು, ದೇಹಕ್ಕೆ ಅನ್ಯ ಚೇತನೆಗಳು, ಹೀಗೆ ಅಭಿಮಾನಿಗಳೆಂದು ತಿಳಿಯಬೇಕು. ಇಲ್ಲಿ ವಿವೇಕವೇನಂದರೆ, ಪ್ರಕೃತಿಯು ಕ್ಷೇತ್ರಸ್ವರೂಪವೆಂತಲೂ, ಮಹದಾದಿಗಳು ಅದರ ಪ್ರಕಾರಗಳೆಂತಲೂ, ಇಚ್ಛಾದಿಗಳು ವಿಕಾರಗಳೆಂತಲೂ, ತಿಳಿಯಬೇಕು ವಿಕಾರಗಳೆಂದರೆ, ಜನ್ಮ, ಇರುವಿಕೆ, ಬೆಳವಣಿಗೆ, ಪರಿಣಮಿಸೋಣ, ಶೋಷಣವಾಗೋಣ, ನಾಶಹೊಂದೋಣ, ಹೀಗೆ ಆರು.

೮–೧೨. ಈಮೇರೆಗೆ, ಪ್ರತಿಜ್ಞೆಮಾಡಿದ ೬ ವಿಷಯುಗಳಲ್ಲಿ ಮೊದಲಿನ ಮೂರು ವಿಷಯುಗಳನ್ನು ಹೇಳಿ "ಪ್ರವೃತ್ತಿಗೆ ಅನುಕೂಲವಾದ ಧರ್ಮವುಳ್ಳ ಪುರುಷನಿಂದ" "ಯಾವದು ಪ್ರವರ್ತಿಸುವದು" ಈ ಎರಡು ವಿಷಯುಗಳನ್ನು ಹೇಳುವ ಮೊದಲು. ಪ್ರವರ್ತಕನ ಸ್ವರೂಪವೂ, ಸಾಮರ್ಥ್ಯವೂ, ಎಂಥವು? ಎಂಬುದನ್ನು ಮುಂದೆ ೧೩ನೆಯ ಶ್ಲೋಕದಿಂದ ಹೇಳುವದಕ್ಕಾಗಿ, ಸುಮ್ಮನೆ ಯಾವುದೊಂದರ ಶ್ರವಣದಿಂದ ಅದರ ಅನುಭವವಾಗಲಾರದೆಂಬ ಅಭಿಪ್ರಾಯದಿಂದ ತಿಳಿದುಕೊಳ್ಳುವ ವಿಷಯುವಾದ ಪರಮಾತ್ಮನ ಜ್ಞಾನಕ್ಕೆ ಬೇಕಾದ ಸಾಧನೆಗಳನ್ನು ಮುಂದಿನ ೫ ಶ್ಲೋಕಗಳಿಂದ ಹೇಳಿದ್ದು:—

अमानित्वमदंभित्वमहिंसा क्षांतिरार्जवम् ।
आचार्योपासनं शौचं स्थैर्यमात्मविनिग्रहः ॥ ८ ॥
इंद्रियार्थेषु वैराग्यमनहंकार एव च ।
जन्ममृत्युजराव्याधिदुःखदोषानुदर्शनम् ॥ ९ ॥

असक्तिरनभिष्वंगः पुत्रदारगृहादिषु ।
नित्यं च समचित्तत्वमिष्टानिष्टोपपत्तिषु ॥ १० ॥
मयि चानन्ययोगेन भक्तिरव्यभिचारिणी ।
विविक्तदेशसेवित्वमरतिर्जनसंसदि ॥ ११ ॥
अध्यात्मज्ञाननित्यत्वं तत्त्वज्ञानार्थदर्शनम् ।
एतज्ज्ञानमिति प्रोक्तमज्ञानं यदतोऽन्यथा ॥ १२ ॥

**ಅಂ**—(೧) **अमानित्वम्** ತನ್ನ ದೊಡ್ಡಸ್ತಿಕೆಯನ್ನು ಹೇಳಿಕೊಳ್ಳದಿರೋಣ, (೨) **अदम्भित्वम्** ತನ್ನ ಅಲ್ಪತ್ವವನ್ನು ತಿಳಿದಿದ್ದರೂ, ಮಹತ್ವವನ್ನು ತೋರ್ಪಡಿಸುವದೇ ದಂಭ, ಅದನ್ನು ಎಷ್ಟೂ ತೋರಿಸದಿರುವದೇ ಅದಂಭಿತ್ವ; ತೋರ್ಕೆಗಾಗಿ ಧರ್ಮವನ್ನಾಚರಿಸದಿರುವದು; ಅಥವಾ ಹೊರಗೆ ತೋರಿಸುವ ಗರ್ವವಿರದಿರುವದು, (೩) **अहिंसा** ಮನಸು, ಮಾತು, ಮೈ ಇವುಗಳಿಂದ ಪರಹಿಂಸೆ ಮಾಡದಿರೋಣ, (ಶತ್ರು-ಮಿತ್ರ-ಉದಾಸೀನರಲ್ಲಿ ಸಮಬುದ್ಧಿಯುಳ್ಳವನು ಧ್ಯಾನದ್ವಾರಾ ಜ್ಞಾನಯೋಗಕ್ಕೆ ಅಧಿಕಾರಿಯಾಗುವನೆಂದು ಹಿಂದೆ ೬-೯ನೆಯ ಶ್ಲೋಕಗಳಲ್ಲಿ ಹೇಳಿ ಇದೆ), (೪) **क्षान्तिः** ಸಹಿಷ್ಣುತೆ, ಅಥವಾ ತಿರುತಿರುಗಿ ಪ್ರಶ್ನ ಮಾಡುವದರಿಂದ ಸಿಟ್ಟಾಗುವ ಗುರುಗಳಿಂದ ಬೈಗಳು ಮುಂತಾದವುಗಳನ್ನು ಸೈರಿಸುವದು, ಅಥವಾ ತಿರುತಿರುಗಿ ಪ್ರಶ್ನಮಾಡುವದರಿಂದ ಪರರು ಅಪಹಾಸ ಮಾಡಲು ಅದನ್ನೆಲ್ಲ ತಾಳಿಕೊಳ್ಳುವದು, (೫) **आर्जवम्** ಮನಸು, ವಾಣಿ, ಕರ್ಮ, ಇವುಗಳಲ್ಲಿ ಒಂದೇ ವಿಧವಾಗಿರೋಣ (ಇದು ಇರದಿದ್ದರೆ ಇವನು ದುಷ್ಟನೆಂದು ಗುರುಗಳು ನಿಷೇಧಿಸುವರು), (೬) **आचार्योपासन** ಜ್ಞಾನಿಗಳ ಅಥವಾ ಗುರುಗಳ ಸೇವೆಯು (ಇದು ಇರದಿದ್ದರೆ ಗುರುಗಳು ಸಂತುಷ್ಟರಾಗರು), (೭) **शौचम्** ಮಣ್ಣು ನೀರುಗಳಿಂದ ಆಗುವ ದೇಹಶುದ್ಧಿಯು ಬಾಹ್ಯಶೌಚವು, ರಾಗದ್ವೇಷಾದಿಗಳಿರದಿರೋಣವು ಅಂತರಂಗಶೌಚವು (ಈವಿಷಯಕ್ಕೆ ಶ್ರುತಿವಾಕ್ಯವು ಪ್ರಮಾಣವಾಗಿದೆ),(೮)**स्थैर्यम्** ಭೀತಿಗಾಗಿ ಸ್ವಂತ ಧರ್ಮದಿಂದ ಅಲ್ಲಾಡದಿರುವದು, ಅಥವಾ ಎಷ್ಟು ಸಾಹಸವಾದರೂ, ಅದನ್ನು ಸಾಧಿಸಿಯೇ ಬಿಡಬೇಕೆಂಬ ಮನಸ್ಸಿನ ಸ್ಥಿರತೆ (ಇದಿರದಿದ್ದರೆ, ಅನೇಕ ವಿಘ್ನಗಳು ತಗಲುವದರಿಂದ ಅಥವಾ ವಿಷಯಾದಿಗಳಲ್ಲಿ ಅತ್ಯಾಸಕ್ತಿ ಬೆಳೆದು ಅದರಿಂದ ಹಿಮ್ಮುಖವಾಗುವದು), (೯) **आत्मविनिग्रहः** ವಿಶೇಷಾಕಾರದಿಂದ ಮನೋನಿಗ್ರಹವು (ಇದಿರದಿದ್ದರೆ ಧ್ಯಾನಾಭ್ಯಾಸವು ಸಾಧಿಸದು), (೧೦)**इन्द्रियार्थेषु वैराग्यम्** ಇಂದ್ರಿಯಗಳ ವಿಷಯಗಳಾದ ಶಬ್ದಾದಿಗಳಲ್ಲಿ ಆಸಕ್ತಿಯಿಲ್ಲದಿರುವದು (ಇದಿರದಿದ್ದರೆ ಶ್ರವಣ, ಮನನ, ಧ್ಯಾನಾದಿಗಳ ಕಾಲದಲ್ಲಿ ಇಂದ್ರಿಯಗಳನ್ನು ಸೆಳೆಯುವದರಿಂದ ಮನಸು ತಿಳಿಯತಕ್ಕ ವಸ್ತುಗಳಲ್ಲಿ ಚಂಚಲವಾಗಿ ಜ್ಞಾನವು ಹುಟ್ಟಲರಿಯದು), (೧೧) **अहङ्कारः** ತನ್ನಲ್ಲಿರದ ಗುಣಗಳ ವಿಷಯವಾಗಿ ಅಭಿಮಾನ ಮೋಹಾದಿಗಳು ಇಲ್ಲದಿರುವದು (ಆತ್ಮವಲ್ಲದ ದೇಹದಲ್ಲಿ ಆತ್ಮಬುದ್ಧಿ, ಹೆಂಡರು-ಮಕ್ಕಳು ತನ್ನವರೆಂಬ ಬುದ್ಧಿ, ಇದು ಇರದಿರುವದು. ಯಾಕಂದರೆ ಅವರಲ್ಲಿ ಮನಸು ತೊಡಗುವದರಿಂದ ಶ್ರವಣಾದಿಗಳಿಗೆ ವಿರೋಧವುಂಟಾಗುವದು), (೧೨) **जन्ममृत्युजराव्याधिदुःखदोषानुदर्शनम्** ಜನ್ಮ, ಮೃತ್ಯು, ಮುಪ್ಪು, ಬೇನೆ, ಇವುಗಳು ಯಾವಾಗಲೂ ದುಃಖ-ದೋಷಗಳಿಂದ ತುಂಬಿದವುಗಳೆಂದು ಎಣಿಸುವಿಕೆ (ಇದರಿಂದ ವಿಷಯವೈರಾಗ್ಯ ಹುಟ್ಟಿ, ಮನಸು ನಿಶ್ಚಲವಾಗಿ ತಿಳಿದುಕೊಳ್ಳುವ ವಸ್ತುವಿನಲ್ಲಿ ಸ್ಥಿರವಾಗುವದು. ಈ ವಿಷಯಕ್ಕೆ ಹಿಂದೆ ೬-೧೮ನೆಯ ಶ್ಲೋಕವಲ್ಲಿ ಹೇಳಿ ಇದೆ), (೧೩) **असक्ति** (೧೪) **अनभिष्वङ्गः पुत्रदारगृहादिषु** ಹೆಂಡರು-ಮಕ್ಕಳು, ಮನೆಮಾರು ಮೊದಲಾದವುಗಳಲ್ಲಿ ಆಸಕ್ತಿ-ಅತ್ಯಾಸಕ್ತಿ ಇಲ್ಲದಿರುವದು ( ಈ ಬಗ್ಗೆ ೫'ನೆಯ ಶ್ಲೋಕದಲ್ಲಿ ಹೇಳಿ ಇದೆ. ಇದಿರದಿದ್ದರೆ, ಮನಸು

ಅವರ ಪೋಷಣೆಯಲ್ಲಿಯೇ ತೊಡಗಿ ಧ್ಯಾನಾದಿಗಳು ಸಾಧಿಸಲಾರವು.), (೧೫) **इष्टानिष्टोपपत्तिषु नित्यं च समचित्तत्वम्** ಲಾಭಹಾನಿಗಳು ಪ್ರಾಪ್ತವಾದರೂ ಮನಸು ಸಮಾನವಾಗಿ ರೋಣ, ಅಂದರೆ ಹರ್ಷವಿಷಾದಗಳಿಂದ ವಿಕಾರಹೊಂದದಿರುವದು (ಈ ವಿಷಯಕ್ಕೆ ಹಿಂದೆ ೨–೫೭, ೫–೨೦, ೧೨–೧೭ನೆಯ ಶ್ಲೋಕಗಳಲ್ಲಿ ಹೇಳಿ ಇದೆ), (೧೬) **भक्तिरव्यभिचारिणी** ರಮಾಬ್ರಹ್ಮಾದಿ ಅನ್ಯದೇವತೆಗಳು ಸ್ವತಂತ್ರರೆಂದು ತಿಳಿಯದೆ, ನಾನೇ ಮುಖ್ಯನೆಂದು ತಿಳಿದು, ನನ್ನಲ್ಲಿ ದ್ವೇಷವಿಲ್ಲದ ಭಕ್ತಿಯು. ಇನ್ನು, ಜ್ಞಾನಸಾಧನೆಗಾಗಿಯೇ ನನ್ನ ಭಕ್ತಿಯನ್ನೇಕೆ ಮಾಡಬೇಕೆಂದು ಕೇಳಿದರೆ, ಅದ ರಿಂದ ನಾನು ಸಕಲ ಇಂದ್ರಿಯಗಳಿಗೆ ಪ್ರೇರಕನಾದುದರಿಂದ ವಿಷಯಗಳಲ್ಲಿ ತೊಡಗಿದ ಮನಸ್ಸನ್ನು ಎಳೆದು, ಅದನ್ನು ಅಧಿಕಾರಿಯ ವಶವನ್ನಾಗಿ ಮಾಡಿ, ನನ್ನಲ್ಲಿ ಸ್ಥಿರಗೊಳಿಸುವೆನು; ಅದರಿಂದ ನನ್ನ ವಿಷಯಕ ಪರೋಕ್ಷಜ್ಞಾನವು ಹುಟ್ಟುವದು. ಅಂಥ ಜ್ಞಾನವು ಪ್ರತಿಬಂಧಕವಾದ ಕಾಮಾದಿಗಳನ್ನು ನಾಶಗೊಳಿಸಿ ದೃಢವಾದರ ಅಪರೋಕ್ಷಜ್ಞಾನವು ಹುಟ್ಟುವದು; ಅಂಥ ಜ್ಞಾನದಿಂದ ಪರಮಾಚ್ಛಾದಿಕೆ ಎಂಬ ನನ್ನ ಬಂಧನವನ್ನು ದೂರಮಾಡಿ, ನನ್ನ ಸಾಕ್ಷಾತ್ಕಾರವನ್ನು ಮಾಡಿಕೊಡುವೆನು. ಆದರೆ, ಭಕ್ತನಾಗದವನಿಗೆ ಪರೋಕ್ಷ–ಅಪರೋಕ್ಷಜ್ಞಾನಗಳು ಎಂದೂ ಆಗುವದಿಲ್ಲ. ಈ ಬಗ್ಗೆ (೩–೩೯, ೭–೨೫, ೭–೧೪, ೧೦–೧೦, ೧೪–೨೬, ೧೮–೫೫ನೆಯ ಶ್ಲೋಕಗಳಲ್ಲಿ ಮತ್ತು ಕಾಠಕ ೨–೨೩ನೆಯ ಮಂತ್ರದಲ್ಲಿ ಹೇಳಿ ಇದೆ), (೧೭) **विविक्तदेशसेवित्वम्** (೧೮) **अरतिर्जनसंसदि** ಜನಸಂದಣಿ ಇಲ್ಲದ ಪವಿತ್ರ ಸ್ಥಳದಲ್ಲಿರುವದು, ಆತ್ಮಜ್ಞಾನವಿಮುಖರೂ, ವಿಷಯಭೋಗರತರೂ, ಬುದ್ಧಿಸಂಸ್ಕಾರ ಶೂನ್ಯರೂ, ಆದವರೊಡನೆ ಸೇರದಿರುವದು, ಯಾಕೆಂದರೆ ಸಾಧುಸಂಗವು ಜ್ಞಾನಕ್ಕೆ ಸಾಧನವಾದುದ ರಿಂದ ಅತ್ಯಾವಶ್ಯಕವು,(೧೯) **अध्यात्मज्ञाननित्यत्वम्** ಪರಮಾತ್ಮವಿಷಯಕ ವೇದಾಂತಜ್ಞಾನದಲ್ಲಿ ನಿಷ್ಠೆ, ಅಂದರೆ, ಅವನೇ ಸರ್ವೋತ್ತಮನೆಂಬ ಜ್ಞಾನದಲ್ಲಿ ನಿಷ್ಠೆ, (೨೦) **तत्त्वज्ञानार्थदर्शनम्** ಅಪರೋಕ್ಷಜ್ಞಾ ನಕ್ಕಾಗಿ ಪರ್ಯಾಲೋಚನೆಯು, ಹೀಗೆ **अमानित्व** ಮೊದಲ್ಗೊಂಡು ಹೇಳಿದ ೨೦ ಧರ್ಮಗಳು ಜ್ಞಾನಕ್ಕೆ ಸಾಧನಗಳಾಗಿವೆ. ಇವನ್ನು ಬಿಟ್ಟು ಮಿಕ್ಕ ಧರ್ಮಗಳೆಲ್ಲ ಅಜ್ಞಾನವೆನಿಸುವವು. ಇಲ್ಲಿ 'ಜ್ಞಾನ' ಶಬ್ದವು ಶಾಸ್ತ್ರ ಪರ್ಯಾಲೋಚನೆ ಎಂಬ ಜ್ಞಾನಸಾಧನಪರವಾಗಿಯೂ, ಅಪರೋಕ್ಷಜ್ಞಾನಪರ ವಾಗಿಯೂ, ಉಂಟೆಂದು ತಿಳಿಯತಕ್ಕದ್ದು.

೧೩. ಈ ಬಗೆಯಾಗಿ ಜ್ಞಾನ–ಜ್ಞಾನಸಾಧನಗಳನ್ನು ನಿರೂಪಿಸಿ, ತಿಳಿದುಕೊಳ್ಳುವ ವಸ್ತು ಸ್ವರೂಪವೂ ಅದರ ಸಾಮರ್ಥ್ಯವೂ ಎಂಥದು ಎಂಬುದನ್ನು ಕುರಿತು ಹೇಳಿದ್ದು —

**ज्ञेयं यत्तत्प्रवक्ष्यामि यज्ज्ञात्वाऽमृतमश्नुते ।**
**अनादिमत्परं ब्रह्म न सत्तन्नासदुच्यते ॥ १२ ॥**

**ಅಂ**—ತಿಳಿದುಕೊಳ್ಳುವದಕ್ಕೆ ಅರ್ಹವಾದ ವಸ್ತುವನ್ನು ಕುರಿತು ಹೇಳುವೆನಿನ್ನು; ಅದರಿಂದ ಫಲವೇನೆಂದು ಕೇಳಿದರೆ, ಅದನ್ನು ತಿಳಿದವನು ಮೋಕ್ಷಫಲ ಪಡೆಯುವನು. ತಿಳಿದು ಕೊಳ್ಳುವ ವಸ್ತುವು ಯಾವುದೆಂದು ಕೇಳಿದರೆ, ಪರಬ್ರಹ್ಮವು; ಹೀಗೆ ಹೆಸರು ಒಡೆದು ಹೇಳುವದರಿಂದ ಅವನ ಸ್ವರೂಪವು ತಿಳಿಯುವದು. ಇಲ್ಲಿ "ನಾನೇ ಆ ವಸ್ತುವೆಂದು ಹೇಳದೆ, **अक्षरं ब्रह्म परमम्** (೧–೩)" ಎಂಬ ವಚನದಂತೆ ಶ್ರೀಕೃಷ್ಣನು ಪರಬ್ರಹ್ಮನೆಂದು ಸಿದ್ಧವಾಗುವದು. ಅವನ ಸಾಮರ್ಥ್ಯವು ಎಂತಹ ದೆಂದರೆ, ಆದ್ಯಂತಗಳುಳ್ಳ ಪ್ರಾಕೃತ ದೇಹ, ಇಂದ್ರಿಯ, ಗುಣ, ಕರ್ಮ, ಇವುಗಳಿಂದ ಹೀನ. ಹಾಗಾ ದರೆ, ಪರಮಾತ್ಮನು ಕ್ಷೇತ್ರದಲ್ಲಿ ಅಂತರ್ಗತನಾದುದರಿಂದ ಕ್ಷೇತ್ರಜ್ಞನೆನಿಸುವನೋ ಹೇಗೆಂದು ಕೇಳಿದರೆ, ಅಲ್ಲ; ಯಾಕಂದರೆ, **सत्** ಎಂದರೆ 'ವ್ಯಕ್ತ' ಶಬ್ದವಾಚ್ಯ ಕಾರ್ಯಾಂತರ್ಗತನಲ್ಲ, **असत्** ಎಂದರೆ 'ಅವ್ಯಕ್ತ' ಶಬ್ದವಾಚ್ಯ ಕಾರಣಾಂತರ್ಗತನಲ್ಲ. ಈ ವಿಷಯವಾಗಿ ವ್ಯಕ್ತ–ಅವ್ಯಕ್ತಗಳಿಗಿಂತ ಅವನು

ವಿಲಕ್ಷಣನೆಂದು ಸ್ಮೃತಿಯು ಸಾರುವದು; ಅಥವಾ ಬೃಹದಾರಣ್ಯ (೬-೪-೨೨) ನೆಯ ಮಂತ್ರದಲ್ಲಿ "ಮೂರ್ತಾಮೂರ್ತಗಳನ್ನು ಮಿಕ್ಕಿದ್ದರಿಂದ ಅವನು ಮೂರ್ತನಲ್ಲ, ಅಮೂರ್ತನಲ್ಲ" ಎಂದು ಹೇಳಿ ಇದೆ.

ಅತಿ ಪ್ರಯತ್ನದಿಂದ ಹಿಂದೆ ಹೇಳಿದ ಸಾಧನಗಳನ್ನು ದೊರಕಿಸಿ, ತಿಳಿದುಕೊಳ್ಳುವ ವಸ್ತು ವೆಂದರೆ, ಪರಬ್ರಹ್ಮನನ್ನು ಸಾಕ್ಷಾತ್ಕರಿಸುವದು; ಅವನ ಜ್ಞಾನವೇ ಮೋಕ್ಷಸಾಧನ. ಪರಬ್ರಹ್ಮನು ಎಂಥವನೆಂಬ ಬಗ್ಗೆ ತೈತ್ತಿರೀಯ (೩-೧), ಬ್ರಹ್ಮಸೂತ್ರ (೧-೧-೧) ಗಳಲ್ಲಿ ಹೇಳಲ್ಪಟ್ಟ 'ಬ್ರಹ್ಮ' ಶಬ್ದ ವಾಚ್ಯ ಷಡ್ಗುಣೈಶ್ವರ್ಯಸಂಪನ್ನನಾದ ನಾರಾಯಣನು. ಇದರಿಂದ (೧೩-೪) ನೆಯ ಶ್ಲೋಕದಲ್ಲಿ ಪರಬ್ರಹ್ಮನ ಸ್ವರೂಪವು ಎಂಥದೆಂಬುದು ವಿವರಿಸಲಾಯಿತು. ಅದೇ ಶ್ಲೋಕದಲ್ಲಿ 'ಯಾವ ಪುರುಷ ನಿಂದ ಪ್ರವರ್ತಿಸುವದು' ಎಂದು ಹೇಳಿದ್ದನ್ನು ಮುಂದೆ ೨೩ನೆಯ ಶ್ಲೋಕದಲ್ಲಿ ವಿವರಿಸಲ್ಪಡುವದು. ನಾರಾಯಣನೆಂಬ ಪರಬ್ರಹ್ಮವಸ್ತುವು ಎಂಥದೆಂಬುದು ಮುಂದೆ ೧೮ನೆಯ ಶ್ಲೋಕದಲ್ಲಿ ಕೂಡ ಹೇಳಲಾಗುವದು.

೧೪. ಪರಬ್ರಹ್ಮನ ಸಾಮರ್ಥ್ಯವು ಎಂಥದೆಂಬುವ ಬಗ್ಗೆ ಮತ್ತೆ ಹೇಳತೊಡಗಿ, ಅವನು ಜಗ ತ್ತಿನಿಂದ ಹೇಗೆ ವಿಲಕ್ಷಣನೆಂಬುವದನ್ನೂ ವಿಸ್ತರಿಸಿದ್ದು :—

सर्वतः पाणिपादं तत्सर्वतोऽक्षिशिरोमुखम् ।
सर्वतः श्रुतिमल्लोके सर्वमावृत्य तिष्ठति ॥ १४ ॥

ಅಂ—ಹಿಂದೆ ಹೇಳಿದ ಪರಬ್ರಹ್ಮನ ಸಕಲ ಅವಯವಗಳು ತಮ್ಮ ತಮ್ಮ ಮತ್ತು ಅನ್ಯ ಅವ ಯುವಗಳ ಸಾಮರ್ಥ್ಯವುಳ್ಳವುಗಳು; ಶುಕ್ಲ-ಕೃಷ್ಣಕೇಶ ಅವತಾರಧರಿಸಿದ ಬಲರಾಮಕೃಷ್ಣರ ಕೈ ಕಾಲು ಮೊದಲಾದವುಗಳ ಸಾಮರ್ಥ್ಯವು ಹೀಗೆಯೇ ಅನುಭವಕ್ಕೆ ಬಂದಿದೆ. ಇದೇ ಮೇರೆಗೆ ಸಕಲ ಅವಯುವಗಳಲ್ಲಿಯೂ ಕಣ್ಣು, ಕಿವಿ, ಮೊದಲಾದವುಗಳ ಸಾಮರ್ಥ್ಯವಿದೆ. ಅವನು ಎಲ್ಲ ಇಂದ್ರಿಯ ಗಳ ವಿಷಯಗಳನ್ನೂ, ಕರ್ಮಗಳನ್ನೂ, ಎಲ್ಲ ಇಂದ್ರಿಯಗಳಿಂದ ತಿಳಿಯುವನು ಮತ್ತು ಮಾಡುವನು; ಅಲ್ಲದೆ, ಸಕಲ ದೇಶಗಳಲ್ಲಿ ಅಂತರ್ಗತನಾದ ಪರಬ್ರಹ್ಮನು ಕೈಕಾಲು ಮುಂತಾದ ಅವಯುವಗಳಿಂದ ಯುಕ್ತನಾಗಿ ಜಗತ್ತಿನಲ್ಲಿ ಎಲ್ಲ ವಸ್ತುಗಳಲ್ಲಿ ವ್ಯಾಪಿಸಿರುವನು. ಇಲ್ಲಿ ಮುಖ್ಯ ಸೂಚ್ಯ ಅಭಿಪ್ರಾಯ ವೇನಂದರೆ, ಸೂಕ್ಷ್ಮ ಮತ್ತು ಸ್ಥೂಲ ವಸ್ತುಗಳಲ್ಲಿ, ಅವುಗಳಿಗಿಂತ ಅತಿಸೂಕ್ಷ್ಮ, ಅತಿಸ್ಥೂಲವಾದ ವಸ್ತುಗಳಲ್ಲಿ ಅನಂತರೂಪಗಳಿಂದ ಅಂತರ್ಗತನಾಗಿ ವ್ಯಾಪಿಸಿರುವನು.

೧೫.

सर्वेंद्रियगुणाभासं सर्वेंद्रियविवर्जितम् ।
असक्तं सर्वभृच्चैव निर्गुणं गुणभोक्तृ च ॥ १५ ॥

ಅಂ—ಪರಬ್ರಹ್ಮನು ಸಕಲ ಇಂದ್ರಿಯಗಳ ಮತ್ತು ಶಬ್ದಾದಿ ವಿಷಯಗಳ ಜ್ಞಾನ ಮಾಡಿ ಕೊಡುವದಲ್ಲದೆ ತಾನೂ ಬಲ್ಲನು. ಅವನಿಗೆ ಪ್ರಾಕೃತ ಮತ್ತು ಭಿನ್ನ ಇಂದ್ರಿಯಗಳಿರದ್ದರಿಂದ ಇಂದ್ರಿಯ ಹೀನನೆನಿಸುವನು. ಸರ್ವಕರ್ತನಾದರೂ ಪುಣ್ಯಪಾಪಗಳ ಲೇಪ ಅವನಿಗಿಲ್ಲ. ಈ ವಿಷಯಕ್ಕೆ (೪-೧೪, ೯-೯) ನೇ ಶ್ಲೋಕಗಳಲ್ಲಿ ಹೇಳಲಾಗಿದೆ. ಅವನು ಸಾರ ಭೋಕ್ತೃವಲ್ಲದೆ ಸರ್ವಭಕ್ಷಕನೂ, ಸಂಹಾರಕನೂ, ಧಾರಕನೂ, ಅಹುದು; ಸತ್ವಾದಿ ಪ್ರಾಕೃತ ಗುಣಹೀನನು; ಮತ್ತು ಸರ್ವಶುಭಗುಣ ಗಳ ಭೋಕ್ತೃವು ಅಹುದು.

೧೬.

बहिरंतश्च भूतानामचरं चरमेव च ।
सूक्ष्मत्वात्तदविज्ञेयं दूरस्थं चांतिके च तत् ॥ १६ ॥

ಅ೦—ಪರಬ್ರಹ್ಮನು ಪ್ರಾಣಿಮಾತ್ರಗಳ ಒಳಹೊರಗೆ ತೀವಿಕೊಂಡಿರುವನು. ಈ ಸಂಬಂಧ ವಾಗಿ ನಾರಾಯಣಶ್ರುತಿ (೧೩) ನೇ ಮಂತ್ರವು ಪ್ರಮಾಣವಾಗಿದೆ. ಸಕಲ ದೇಶಗಳಲ್ಲಿ ಸಂಚರಿಸುವದ ರಿಂದ ಅವನು ಚರನೆಂತಲೂ, ಅಂಥ ಸಂಚಾರವಿಲ್ಲದ್ದರಿಂದ ಅಚರನೆಂತಲೂ ಎನಿಸುವನು. ಅವನು ಅತಿಸೂಕ್ಷ್ಮನಾದ್ದರಿಂದ ಇಂದ್ರಿಯಗಳಿಗೆ ಗೋಚರನಲ್ಲ. ಈ ಬಗ್ಗೆ (ಕಾಠಕ ೩—೧೨, ಗೀತಾ ೨—೨೯) ಶ್ಲೋಕಗಳಲ್ಲಿ ಹೇಳಿ ಇದೆ. ಅವನು ಎಲ್ಲ ಕಡೆಯಲ್ಲಿಯೂ ವ್ಯಾಪ್ತನಾದುದರಿಂದ ಸಮೀಪ, ದೂರ, ಇವೆರಡರಲ್ಲಿಯೂ ಇರುವನು. ಈ ಬಗ್ಗೆ ಈಶಾವಾಸ್ಯ ೫ನೇ ಮಂತ್ರವು ಪ್ರಮಾಣವಾಗಿದೆ.

೧೭.

अविभक्तं च भूतेषु विभक्तमिव च स्थितम् ।
भूतभर्तृ च तज्ज्ञेयं ग्रसिष्णु प्रभविष्णु च ॥ १७ ॥

ಅ೦—ಪರಬ್ರಹ್ಮನು ಚೇತನಾಚೇತನಾತ್ಮಕ ವಿವಿಧ ವಸ್ತುಗಳಲ್ಲಿ ಅಂತರ್ಗತನಾಗಿದ್ದರೂ, ವ್ಯಾಪಿಸಿದ ವಸ್ತುಭೇದದಿಂದ ಅಂತರ್ಗತ ರೂಪಗಳಿಗೂ ಅವನ ಮೂಲರೂಪಕ್ಕೂ ಭೇದವಿಲ್ಲ. ಇದಕ್ಕೆ (೩—೨—೧೧) ಬ್ರಹ್ಮಸೂತ್ರವು ಪ್ರಮಾಣವಾಗಿದೆ. ಆದಾಗ್ಯೂ, ಅಜ್ಞಾನಿಗಳು ಹಾಗೆ ತಿಳಿಯದೆ, ಅವನಿಗೂ, ಅವನ ರೂಪಗಳಿಗೂ, ಭೇದ ಹೇಳುವರು ಅವನು ಸಕಲ ಪ್ರಾಣಿಗಳಿಗೆ ಧಾರಕನೂ, ಪೋಷಕನೂ, ಪ್ರಳಯಕಾಲದಲ್ಲಿ ಸರ್ವಭಕ್ಷಕನೂ, ಸೃಷ್ಟಿಕಾಲದಲ್ಲಿ ಸರ್ವೋತ್ಪಾದಕನೂ, ಇರುವನು.

೧೮.

ज्योतिषामपि तज्ज्योतिस्तमसः परमुच्यते ।
ज्ञानं ज्ञेयं ज्ञानगम्यं हृदि सर्वस्य विष्ठितम् ॥ १८ ॥

ಅ೦—ಪರಬ್ರಹ್ಮನು ಸೂರ್ಯಾದಿಗಳಿಗೆ ಪ್ರಕಾಶಿಸುವ ಸಾಮರ್ಥ್ಯ ಕೊಡುವನು; ಅಂದರೆ, ಅವುಗಳಲ್ಲಿರುವ ತೇಜಸ್ಸು ಅವನಿಗೆ ಅಧೀನವಾಗಿದೆ. ಈ ವಿಷಯದಲ್ಲಿ (೧—೩—೨೨ನೇ ಸೂತ್ರವು, ಕಾಠಕ ೫—೧೫, ಶ್ವೇ೦ ೩—೯, ಗೀತಾ ೧೫—೧೨) ಶ್ಲೋಕಗಳು ಪ್ರಮಾಣ. ಅವನು ಮೃತ್ಯು, ಅಜ್ಞಾನ, ಪ್ರಕೃತಿಬಂಧ, ಇವುಗಳಿಂದ ದೂರಕ್ಕಿರುವನು. ಇದಕ್ಕೆ (ನಾರಾಯಣಶ್ರುತಿ ೧—೧—೧, ಗೀತಾ ೮—೯) ಇವು ಪ್ರಮಾಣ. ಪ್ರಕಾಶಸ್ವರೂಪನು ಅವನು, ಸ್ವಯಂಪ್ರಕಾಶಕನು. ಜೀವವು ಸ್ವಪ್ರಕಾಶವುಳ್ಳದ್ದಾದರೂ, ಅದು ಪರಮಾತ್ಮನಿಗೆ ಅಧೀನವಿದೆ; ಪರಮಾತ್ಮನು ಮಾತ್ರ ಯಾರಿಗೂ ಅಧೀನನಲ್ಲ. ಅವನು ಅತಿವಿಲಕ್ಷಣನಾದುದರಿಂದ ಅವನಲ್ಲಿ ಕರ್ತೃತ್ವ, ಕರ್ಮತ್ವ, ಮೊದಲಾದ ವಿರುದ್ಧ ಧರ್ಮಗಳು ಹೊಂದುವವು, ಮುಕ್ತಿಯಲ್ಲಿ ಅಪರೋಕ್ಷಜ್ಞಾನದಿಂದ ಪ್ರಾಪ್ಯನು; ಎಲ್ಲರ ಹೃದಯಗಳಲ್ಲಿ ವಿಶೇಷಾಕಾರದಿಂದ ವಾಸವಾಗಿರುವನು. ಇನ್ನು, ಹಿಂದೆ, "ಅವನು ಸರ್ವವ್ಯಾಪಕ ನಾದ್ದರಿಂದ ದೂರದಲ್ಲಿಯೂ, ಸಮೀಪದಲ್ಲಿಯೂ, ಇರುವನು" ಎಂದು ಹೇಳಿದ್ದರೂ, ಅಲ್ಪ ಪ್ರದೇಶ ದಲ್ಲಿ ಕೂಡ ಅವನ ಇರುವಿಕೆಯು ಯೋಗ್ಯವು, ಯಾಕೆಂದರೆ (೧—೨—೭, ೧—೩—೧೨) ನೇ ಸೂತ್ರ ಗಳಲ್ಲಿ ಅವನು ಅಣುರೂಪದಿಂದಿರುವನೆಂದು ಹೇಳಲಾಗಿದೆ.

೧೯. ಹಿಂದೆ ಹೇಳಿದ್ದನ್ನು ಉಪಸಂಹರಿಸಿ ಪರಮಾತ್ಮನ ಜ್ಞಾನವನ್ನು ಕುರಿತು ಹೊಗಳಿದ್ದು:—

**इति क्षेत्रं तथा ज्ञानं ज्ञेयं चोक्तं समासतः ।**
**मद्भक्त एतद्विज्ञाय मद्भावायोपपद्यते ॥ १९ ॥**

**ಅಂ**—ಆರನೆಯ ಶ್ಲೋಕದಿಂದ ಪ್ರಕೃತಿರೂಪ ಕ್ಷೇತ್ರವನ್ನೂ, ೭ನೆಯ ಶ್ಲೋಕದಿಂದ ಅದರ ವಿಕಾರಗಳನ್ನೂ, (ಜ್ಞಾನಶಬ್ದವು ಇಲ್ಲಿ ತಿಳಿವಳಿಕೆ ಮತ್ತು ಅದರ ಸಾಧನ ಹೀಗೆ ಎರಡು ಅರ್ಥಪರವಾಗಿದೆ, ಅಂದರೆ, ೮ನೆಯ ಶ್ಲೋಕದಲ್ಲಿ ಜ್ಞಾನಸಾಧನವೂ, ೧೨ನೆಯ ಶ್ಲೋಕದಲ್ಲಿ ಪರಮಾತ್ಮನ ಅಪರೋಕ್ಷಜ್ಞಾನವೂ, ಹೇಳಲ್ಪಟ್ಟಿವೆ). ೩ನೇ ಶ್ಲೋಕದಿಂದ ಈಶ, ಜೀವರೆಂಬ ಕ್ಷೇತ್ರಜ್ಞರನ್ನೂ, ಅವರ ವಿಷಯಕ ಜ್ಞಾನರೂಪ ಜ್ಞಾನವನ್ನೂ, ಅದರ ಸಾಧನವನ್ನೂ, ೧೩ನೇ ಶ್ಲೋಕದಿಂದ ತಿಳಿದುಕೊಳ್ಳುವ ವಸ್ತುವಾದ ಪರಬ್ರಹ್ಮನನ್ನೂ, ನಾನು ಸಂಕ್ಷೇಪದಿಂದ ಹೇಳಿರುವೆ. ನನ್ನಲ್ಲಿ ಭಕ್ತಿಯುಳ್ಳ ಅಧಿಕಾರಿಯು ಇದನ್ನೆಲ್ಲ ತಿಳಿದು, ನನ್ನ ಪ್ರಾಪ್ತಿಯೆಂಬುವ ಮೋಕ್ಷವನ್ನು ಹೊಂದುವನು. ತಿಳಿದುಕೊಳ್ಳುವ ವಿಷಯನಾದ ಪರಬ್ರಹ್ಮನನ್ನು ಪ್ರತಿಪಾದಿಸಿದ ಬಳಿಕ ಯಾವ ಸಾಧನೆಯಿಂದ ಅವನನ್ನು ತಿಳಿಯಬಹುದೆಂಬ ಅಪೇಕ್ಷೆ ಹುಟ್ಟಲಾಗಿ, ೧೩ನೇ ಶ್ಲೋಕವನ್ನು ಮೊದಲು ಹೇಳಿ, ಅವನ ಜ್ಞಾನಸಾಧನೆಯನ್ನು ಹೇಳುವ ೮ನೆಯ ಶ್ಲೋಕವನ್ನು ಹಿಂದಿನಿಂದ ನಿರೂಪಿಸುವದು ಯೋಗ್ಯವಾದರೂ, ಸಾಧನವು ಇಚ್ಛಾದಿರೂಪ ಕ್ಷೇತ್ರವಿಕಾರಗಳಲ್ಲಿ ಅಂತರ್ಭೂತವಾಗುವದು, ಮತ್ತು ಪ್ರೇರಕನ ಸಾಮರ್ಥ್ಯವು ವಿಲಕ್ಷಣವೆಂಬ ಪ್ರಮೇಯವು ಬುದ್ಧಿಗೋಚರವಾಗಲಿಕ್ಕೆ ಸಾಧನಗಳು ಅವಶ್ಯ, ಅವುಗಳನ್ನು ಹೇಳಿದ ಬಳಿಕ ಅವನ ಪ್ರೇರಕತ್ವವು ಲೋಕವಿಲಕ್ಷಣವೆಂದು ಹೇಳಿ ಇದೆ; ಆ ಪ್ರಸಂಗಕ್ಕನುಸರಿಸಿ, ತಿಳಿದುಕೊಳ್ಳುವ ಪರಬ್ರಹ್ಮನ ರೂಪವು ಹಿಂದಿನಿಂದ ಹೇಳಲಾಗಿದೆ.

೨೦. ಈ ಮೇರೆಗೆ, ಪ್ರೇರಕನಾದ ಪರಮಾತ್ಮನ ಸ್ವರೂಪಸಾಮರ್ಥ್ಯವನ್ನು ಹೇಳುವದು ಯೋಗ್ಯವೆಂದು ಸಿದ್ಧವಾಗಲು, ಅವನ ಜ್ಞಾನವಾಗಬೇಕಾದರೆ, ಅವನಿಂದ ಪ್ರೇರಿಸಲ್ಪಡುವ ಲಕ್ಷ್ಮಿಯು ಜ್ಞಾನವು ಅವಶ್ಯವಾದುದರಿಂದ ಅವರಿಬ್ಬರ ಸ್ವರೂಪವನ್ನು ಕುರಿತು ಹೇಳಿದ್ದು :—

**प्रकृतिं पुरुषं चैव विद्ध्यनादी उभावपि ।**
**विकारांश्च गुणांश्चैव विद्धि प्रकृतिसंभवान् ॥ २० ॥**

**ಅಂ**—ಇಲ್ಲಿ 'ಪ್ರಕೃತಿ' ಪದದಿಂದ ಹಿಂದೆ ಹೇಳಿದ ೨೪ ತತ್ತ್ವಗಳೆಂತಲೂ, 'ವಿಕಾರ' ಶಬ್ದದಿಂದ ಹಿಂದೆ ಹೇಳಿದ ಇಚ್ಛೆ ಮುಂತಾದ ಎಲ್ಲ ಪ್ರಕೃತಿವಿಕಾರಗಳೂ, 'ಪುರುಷ' ಪದದಿಂದ ಜೀವವೆಂತಲೂ, ತಿಳಿಯಬೇಕು, ಹೀಗೆ ೨೪ ತತ್ತ್ವಗಳೂ, ಜೀವವೂ, ಇವೆಲ್ಲ ಅನಾದಿಯೆಂದು ತಿಳಿಯಬೇಕು. ಜಡಪ್ರಕೃತಿಯು ಕಾರಣವಾಗಿವುಳ್ಳ ಇಚ್ಛೆ ಮುಂತಾದ ವಿಕಾರಗಳೂ, ಸತ್ತ್ವಾದಿ ಗುಣಗಳೂ, ಚಿತ್ಪ್ರಕೃತಿಯಿಂದ ಹುಟ್ಟುವವೆಂದು ತಿಳಿಯಬೇಕು. ಇದರಿಂದ ಪರಮಾತ್ಮನ ಹೊರ್ತು ಮಿಕ್ಕ ಚೇತನಾಚೇತನ ವರ್ಗವು ಪ್ರೇರಿಸಲ್ಪಡುವ ಪ್ರಪಂಚವೇ ಎಂದು ಹೇಳಿದಂತಾಯಿತು, ಅಥವಾ, ಪ್ರಕೃತಿಯೆಂದರೆ, ಚೇತನಾಚೇತನ ಪ್ರಕೃತಿಯೂ, ಪುರುಷ ಎಂದರ ಜೀವ–ಪರಮಾತ್ಮರೂ, ಹೀಗೆ ಇಬ್ಬರೂ ಅನಾದಿ. ಇಲ್ಲಿ ಗುಣಗಳು ಕೂಡ ವಿಕಾರಗಳಾದರೂ, ಇಚ್ಛೆಗಳಿಗಿಂತ ಅಲ್ಪವಿಕಾರಿಗಳಾದ್ದರಿಂದಲೂ, ಇಚ್ಛೆಗಳು ಹೆಚ್ಚು ವಿಕಾರಿಗಳಾದ್ದರಿಂದಲೂ, ಗುಣಗಳು ಬೇರೆ ಬೇರೆ ಹೇಳಲಾಗಿವೆ. ಗೀತಾತಾತ್ಪರ್ಯದಲ್ಲಿ ಕೂಡ ಪ್ರಕೃತಿಪುರುಷರಿಗೆ ಇದೇ ಅರ್ಥವು ಹೇಳಲಾಗಿದೆ.

೨೧. ವಿಕಾರಗಳು ಪ್ರಕೃತಿಯಿಂದ ಸಂಭವಿಸುವವೆಂಬುದನ್ನು ಕುರಿತು ಹೇಳಿದ್ದು:—

**कार्यकारणकर्तृत्वे हेतुः प्रकृतिरुच्यते ।**
**पुरुषः सुखदुःखानां भोक्तृत्वे हेतुरुच्यते ॥ २१ ॥**

**ಅಂ**—ಜೀವದ ದೇಹ ಮತ್ತು ಇಂದ್ರಿಯಗಳ ಕರ್ತೃತ್ವಕ್ಕೆ ಚಿತ್ಪ್ರಕೃತಿಯೇ ಕಾರಣಳೆಂದು ತಿಳಿಯಬೇಕು. ಜೀವಕ್ಕೆ ಬೇಕಾದ ದೇಹ, ಇಂದ್ರಿಯಗಳನ್ನು ಚಿತ್ಪ್ರಕೃತಿಯು ಭೋಗಸಾಧನಕ್ಕಾಗಿ ಜಡಪ್ರಕೃತಿಯಾಗಿ ಪರಿಣಮಿಸಿ ಹುಟ್ಟಿಸುವಳು, ಅಂದರೆ, ಜೀವವು ವಿಕಾರಹೊಂದಿದ ದೇಹೇಂದ್ರಿಯಾದಿಗಳನ್ನು ಪ್ರೇರಿಸುವಲ್ಲಿ ಸ್ವತಂತ್ರವಲ್ಲ; ಪ್ರಕೃತಿಗೆ ಆಧೀನ. ಸುಖದುಃಖಗಳನ್ನು ಭೋಗಿಸುವ ಜೀವವು "ನಾನು ಸುಖಿ, ನಾನು ದುಃಖಿ" ಎಂದು ಸುಖದುಃಖಗಳನ್ನು ಉಣ್ಣುವದು; ಇವೆಲ್ಲ ಪ್ರಕೃತಿಯ ವಿಕಾರಗಳೇ ಸರಿ. ಅವುಗಳು ತನ್ನವೆಂದು ಜೀವವು ಭೋಗಿಸಲಿಕ್ಕೆ ಪರಮಾತ್ಮನೇ ಕಾರಣನು. ಇಲ್ಲಿ ವಿವೇಕವೇನಂದರೆ, ಪರಮಾತ್ಮನು ಎಲ್ಲಕ್ಕೆ ಕಾರಣನಾದ್ದರಿಂದ ಅವನಿಗೆ ಜೀವದ ದೇಹೇಂದ್ರಿಗಳ ಕರ್ತೃತ್ವವು ಉಂಟು. ಅದೇ ಮೇರೆಗೆ, ಚೇತನಪ್ರಕೃತಿಗೆ ಸಹ ಜೀವವು ಭೋಗಿಸುವ ಸುಖದುಃಖಗಳ ಭೋಗವನ್ನು ಕೊಡುವ ಸಾಮರ್ಥ್ಯ ಉಂಟು. ಆದರೂ, ಅದಕ್ಕೆ ಸುಖದುಃಖ ಭೋಗಕೊಡುವಲ್ಲಿ ಅಲ್ಪಸಾಮರ್ಥ್ಯವಿರುವದರಿಂದ ಅದು ಕಾರ್ಯಕಾರಣಕರ್ತೃತ್ವಕ್ಕೆ ಹೇತುವೆಂತಲೂ, 'ಪುರುಷ' ಶಬ್ದವಾಚ್ಯ ಪರಮಾತ್ಮನು ಸುಖದುಃಖಭೋಗ ಕೊಡಲು ಕಾರಣನೆಂತಲೂ, ವಿಶೇಷವಾಗಿ ಹೇಳಿ ಇದೆ; ಅಥವಾ, ದೇಹೇಂದ್ರಿಗಳ ಪರಿಣಾಮಹೊಂದುವ ಕ್ರಿಯೆಯಲ್ಲಿ ಪ್ರಕೃತಿಯೂ ಕಾರಣಳೆಂತಲೂ, ಸುಖದುಃಖಗಳ ಅನುಭವಕ್ಕೆ ಜೀವವು ಕರ್ತೃವೆಂತಲೂ, ತಿಳಿಯತಕ್ಕದ್ದು.

೨೨. ಇನ್ನು, ಜೀವವು ಪ್ರಕೃತಿಯಿಂದುಂಟಾದ ದೇಹೇಂದ್ರಿಯ ಸಂಬಂಧದಿಂದ ಸುಖದುಃಖಾದಿಗಳನ್ನು ಭೋಗಿಸುವದೆಂತಲೂ, ಅದನ್ನು ನಿಯಮನಮಾಡಲು ಲಕ್ಷ್ಮಿಯೂ ಪರಮಾತ್ಮನೂ ಕಾರಣರೆಂತಲೂ, ಹೇಳಿ ಇದೆ; ಆದರೆ ಇದು ಯೋಗ್ಯವಲ್ಲ; ಯಾಕಂದರೆ, ದೇಹೇಂದ್ರಿಯಗಳು ಮಿಥ್ಯವಲ್ಲವೇ? ಎಂದು ಆಕ್ಷೇಪಿಸಿದ್ದಕ್ಕೆ ಉತ್ತರ ಹೇಳಿದ್ದು, ಅಥವಾ, ಸಂಸಾರವಿಲ್ಲದ ಜೀವಕ್ಕೆ ಸಂಸಾರವು ಪ್ರಕೃತಿಬಂಧನದಿಂದ ಉಂಟಾಗುವದೆಂದು ಹೇಳಲಾಗಿದೆ; ಆದರೆ, ಸ್ವಯಂಪ್ರಕಾಶ–ಶುದ್ಧಚೈತನ್ಯಸ್ವರೂಪವುಳ್ಳ ಜೀವಕ್ಕೆ ಸುಖದುಃಖಾದಿಗಳ ಅನುಭವವು ಹೇಗೆ ಆಗುವದೆಂದು ಕೇಳಿದರೆ, ಅದಕ್ಕೆ ಉತ್ತರ:—

**पुरुषः प्रकृतिस्थो हि भुंक्ते प्रकृतिजान्गुणान् ।**
**कारणं गुणसंगोऽस्य सदसद्योनिजन्मसु ॥ २२ ॥**

**ಅಂ**—ಪ್ರಕೃತಿಯಿಂದ ನಿರ್ಮಿಸಲ್ಪಟ್ಟ ದೇಹಾದಿಗಳಲ್ಲಿ ಜೀವವು ಇದ್ದು, ಪ್ರಕೃತಿಯಿಂದ ಹುಟ್ಟಿದ ಗುಣಗಳಾದ ಸುಖಾದಿಗಳನ್ನು ಭೋಗಿಸುವದು. ಇಲ್ಲಿ ಹಿ ಶಬ್ದವು ಬಾಧೆಯಿಲ್ಲದ ಅನುಭವಾರ್ಥವನ್ನು ಸೂಚಿಸುವದು. ಇದರಿಂದ ವಿರೋಧ ಉಂಟಾಗುವದರಿಂದ ಸುಖಾದಿಗಳು ಸುಳ್ಳಲ್ಲೆಂದು ಹೇಳಿದಂತಾಯಿತು. ಅದರಂತೆ, ಕಾರ್ಯಕಾರಣಗಳಿಗೆ ಕರ್ತನೆಂಬಲ್ಲಿ ಜೀವವು ದೇಹದಲ್ಲಿರುವದೆಂತಲೂ, ಸುಖದುಃಖಗಳ ಭೋಗವೆಂಬಲ್ಲಿ ಸುಖಾದಿಗಳ ಭೋಗಹೇಳಿದ್ದರಿಂದಲೂ, ಅವುಗಳಿಗೆ ಒದಗುವ ಪುನರುಕ್ತಿಯ ದೋಷವು ದೂರಾಯಿತು; ಯಾಕೆಂದರೆ, ಮಿಥ್ಯಾತ್ವದ ನಿರಸನೆಗಾಗಿ ಮಿಥ್ಯಾವಾದಿಗಳಿಗೆ ಸಾಕ್ಷಿಯ ಅನುಭವವನ್ನು ತೋರಿಸಲು ಹಿಂದೆ ಹೇಳಿದ್ದನ್ನೇ ಇಲ್ಲಿ ಮತ್ತೆ ಹೇಳಲಾಗಿದೆ. ಶುದ್ಧಜೀವಕ್ಕೆ ದೇಹಾದಿಗಳಲ್ಲಿ ವಾಸವೇಕೆಂದು ಕೇಳಿದ್ದಕ್ಕೆ ಉತ್ತರ ಹೇಳಿದ್ದು; ಈ

ಜೀವಕ್ಕೆ ಸತ್–ಅಸತ್‌ಯೋನಿಗಳಲ್ಲಿ ಜನ್ಮಬರುವದರಿಂದ ಅಲ್ಲಿ ಸತ್ವಾದಿಗುಣಗಳ ಸಂಬಂಧದಿಂದ ಸುಖಾದಿಗಳಲ್ಲಿ ' ನಾನು ಸುಖಿ ' ಈ ಮೊದಲಾದ ಅಭಿಮಾನ ಉಂಟು.

ವಿಂ ಅಂ—ಪ್ರಕೃತಿಯ ಸಂಬಂಧದಿಂದ ಜೀವಕ್ಕೆ ದೋಷತಗಲುವದಷ್ಟೇ ಅಲ್ಲ; ಗುಣಗಳ ಸಂಬಂಧವೂ ಉಂಟು; ಅಂದರೆ ಅದು ಪ್ರಕೃತಿಯ ಸಂಬಂಧದಿಂದ ದುಃಖದಂತೆ ಸುಖಾದಿಗಳನ್ನೂ ಅನುಭವಿಸುವದು; ಮತ್ತು ರಾಗದ್ವೇಷಗಳಂತೆ अमानित्वादि ಗುಣಗಳನ್ನೂ, ಶಮದಮಾದಿರೂಪ ದಿಂದ ಭೋಗಿಸುವದು ಪ್ರಕೃತಿಬಂಧವು ದೋಷಕ್ಕೆ ಕಾರಣವಾಗದಿರಲೆಂದು ಹೇಳಿದರೆ, ಸುಖ, ಅಮಾನಿತ್ವಾದಿಗುಣಗಳ ಅನುಭವಕ್ಕಾಗಿ ಪ್ರಾಣಿಯು ಮಾಡುವದೇನು ? ಎಂದು ಪ್ರಶ್ನಮಾಡಿದರೆ, ಅವುಗಳ ಅನುಭವವಾಗದು. ಕೇಳಬಾರದವುಗಳನ್ನು ಕೇಳಿ. ಅದರಿಂದ ಕಾಲಲ್ಲಿ ಮುಳ್ಳುನೆಟ್ಟಂತೆ ತಾನು ದೋಷಿಯಾಗುವನೆಂದರೆ, ಅವುಗಳ ನಾಶದಿಂದ ಸತ್ಕಥೆಗಳ ಶ್ರವಣ, ಪರಮಾತ್ಮನ ದಿವ್ಯರೂಪ ದರ್ಶನ, ಮೊದಲಾದವುಗಳು ಆಗುವ ಬಗೆ ಹೇಗೆ? ಇನ್ನು, ಶರೀರವು ಧರ್ಮಸಾಧನೆಗೆ ಮುಖ್ಯ ಕಾರಣವೆಂಬುದು ಪ್ರಸಿದ್ಧವು: ಆದ್ದರಿಂದ ಪ್ರಕೃತಿಯ ಬಂಧನವು ಅವಶ್ಯ; ಆದರೆ, ಅದು ದೋಷಕ್ಕೆ ನಿಮಿತ್ತವಾಗದೆ ಗುಣಕ್ಕೆ ಕಾರಣವಾಗುವಂತೆ ಎಲ್ಲರೂ ಯತ್ನಿಸತಕ್ಕದ್ದು. ಜೀವಕ್ಕೆ ಸತ್ವಾದಿಗುಣಗಳ ಸಂಬಂಧವೇ ಸತ್–ಅಸತ್ ಮತ್ತು ಸದಸತ್‌ಯೋನಿಗಳಲ್ಲಿಯ ಉತ್ಪತ್ತಿಗೆ ಕಾರಣವು. ಹೀಗೆ ತ್ರಿಗುಣಾತ್ಮಕ ಪ್ರಕೃತಿಸಂಬಂಧದಿಂದ ಆಯಾ ಗುಣಗಳ ತಾರತಮ್ಯದಿಂದ ಆಯಾ ಜನ್ಮಗಳಲ್ಲಿ ಆಯಾ ವಿಧದ ಸುಖದುಃಖಾದಿಗಳ ಅನುಭವವು ಉಂಟಾಗುವದು. ಹಿಂದೆ ಒದಗಿದ ಯೋನಿಗಳಲ್ಲಿರುವಾಗ ಆ ಯೋನಿಗಳಿಂದುಂಟಾದ ಸತ್ವಾದಿಗಳ ಪರಿಣಾಮದಿಂದ ಸುಖದುಃಖಾದಿಗಳಲ್ಲಿ ' ಸಂಗ' ಶಬ್ದವಾಚ್ಯ ಕಾಮವು ಅದಕ್ಕೆ ಸಾಧನವಾದ ಪುಣ್ಯಪಾಪರೂಪ ಕರ್ಮಗಳನ್ನು ಮಾಡಿಸಿ, ಆಯಾ ಪುಣ್ಯಪಾಪಗಳ ಅನುಭವಕ್ಕಾಗಿ ಆಯಾ ಯೋನಿಗಳಲ್ಲಿ ಉತ್ಪತ್ತಿಗೆ ಕಾರಣವಾಗುವದು. ಸತ್‌ಯೋನಿಗಳೆಂದರೆ ದೇವಾದಿಗಳು; ಅಸತ್ ಎಂದರೆ ಪಶ್ವಾದಿಗಳು; ಸದಸತ್ ಎಂದರೆ ಮನುಷ್ಯಯೋನಿ.

೨೩. ಒಳಿತುಹೀನ ಯೋನಿಗಳಲ್ಲಿಯ ಹುಟ್ಟಿಗೆ ಸತ್ವಾದಿಗುಣಗಳ ಸಂಬಂಧವೇ ಕಾರಣವೆಂದು ಹೇಳಿದೆಯಷ್ಟೇ? ಆದರೆ, ಆ ಕಾರಣವು ಮುಖ್ಯವಾಗದೆ, ಪರಮಾತ್ಮನೇ ಸ್ವತಂತ್ರಕಾರಣನೆಂಬ ಬಗ್ಗೆ ಹೇಳಿದ್ದು —

**उपद्रष्टानुमंता च भर्ता भोक्ता महेश्वरः ।**
**परमात्मेति चाप्युक्तो देहेऽस्मिन्पुरुषः परः ॥ २३ ॥**

ಅಂ—ಪರಮಾತ್ಮನು ಕರ್ತವ್ಯವನ್ನು ತಿರುತಿರುಗಿ ಆಲೋಚಿಸುವನು; ಅಥವಾ ತನಗೆ ಅನು ಕೂಲವಾಗುವಂತೆ, ಅಂದರೆ ತನ್ನ ಮನಸು ವಿಕ್ಷೇಪಗೊಳ್ಳದಂತೆ ಪ್ರೇರಿಸುವನು; ಯಾಕೆಂದರೆ, ಅವನು ಎಲ್ಲರಿಗಿಂತ ಉತ್ತಮನು, ಸರ್ವಾಧಾರಕನು, ಸರ್ವಪೋಷಕನು, ಸಕಲ ಕರ್ಮಫಲದ ಸಾರಭೋ ಕ್ತೃವು, ಮಹಾಸಮರ್ಥನು, ಪರಮಚೇತನನು, ಈ ದೇಹದಲ್ಲಿ ವಾಸಮಾಡಿದ ಮುಖ್ಯಪುರುಷನು.

ವಿಂ ಅಂ—ಜೀವವಿರುವ ಶರೀರದಲ್ಲಿ ಪರಮಾತ್ಮನು ಕೂಡ ಇರುವ ಕಾರಣವೇನೆಂದು ಕೇಳಿದರೆ, ಅವನು ಧರಿಸುವನು ಮತ್ತು ಪೋಷಿಸುವನು. ಹಾಗಾದರೆ, ಅವರೀರ್ವರು ಒಂದೇ ಶರೀರದಲ್ಲಿರುವದರಿಂದ ಅವರಿಗೆ ಸಮಾನಭೋಗ ಉಂಟಾಯಿತಲ್ಲ! ಹೇಗಂದರೆ, ಸುಡುವ ಮನೆಯಲ್ಲಿ ಸೇರಿದ ಇಬ್ಬರಲ್ಲಿ ಒಬ್ಬನಿಗೆ ದಾಹ ಉಂಟು, ಇನ್ನೊಬ್ಬನಿಗೆ ಇಲ್ಲ ಎಂದು ಹೇಳುವದು ಉಚಿತವೇ? ಹೇಗೆಂದು ಪ್ರಶ್ನಮಾಡಿದರೆ, ಪರಮಾತ್ಮನಲ್ಲಿ ವಿಶೇಷ ಸಾಮರ್ಥ್ಯವಿರುವದರಿಂದ ಅವರಿಬ್ಬರಿಗೆ ಸಮಾನ ಭೋಗವಿಲ್ಲ. ಈ ವಿಷಯಕ್ಕೆ " ಸರ್ವಜ್ಞ, ಅಲ್ಪಜ್ಞ, ಸರ್ವಶಕ್ತಿ, ಅಲ್ಪಶಕ್ತಿ, ಸ್ವಾತಂತ್ರ್ಯ

ಪಾರತಂತ್ರ್ಯ, ಹೀಗೆ ಜೀವೇಶರು ವಿರುದ್ಧ ಗುಣಗಳುಳ್ಳವರಾದ್ದರಿಂದ ಅವರಿಬ್ಬರಿಗೆ ಸಮಾನ ಭೋಗವಿಲ್ಲ" ಎಂಬ ಗರುಡ ಪುರಾಣವಚನವೂ, (೨-೧-೮) ಸೂತ್ರವೂ, ಪ್ರಮಾಣಗಳಾಗಿವೆ. ಲೋಕದಲ್ಲಿ ಕೂಡ ಸುಡುವ ಮನೆಯಲ್ಲಿ ಸೇರಿದ ಇಬ್ಬರಲ್ಲಿ ಅಗ್ನಿಸ್ತಂಭನ ಶಕ್ತಿಯುಳ್ಳವನು ಸುಡಲಾರನು; ಅಂತಹ ಶಕ್ತಿಯಿಲ್ಲದವನು ಸುಡಲ್ಪಡುವನು, ಎಂದು ಕಂಡಿದೆ ಇದಕ್ಕೆ ಮುಂಡಕ (೫-೧) ಮಂತ್ರವು ಪ್ರಮಾಣವು. ಇದಲ್ಲದೆ, "ಕ್ಷೇತ್ರಜ್ಞರೀರ್ವರು ದೇಹಾಖ್ಯ ಒಂದೇ ಪಟ್ಟಣದಲ್ಲಿ ಇರುವ ಮೂಲಕ ಅವರು 'ಪುರುಷ' ಶಬ್ದವಾಚ್ಯರು; ಅವರಲ್ಲಿ ಒಬ್ಬನು ನೀಚಪುರುಷನಾದ ಜೀವವು; ಅನ್ಯನು ಉತ್ತಮ ಪುರುಷನಾದ ಪರಮಾತ್ಮನು" ಎಂದು ಹೇಳಲ್ಪಟ್ಟಿದೆ. (೧೩-೧೧)ನೇ ಶ್ಲೋಕದಲ್ಲಿ "ನಾನು ದೇಹದಲ್ಲಿ ಮುಖ್ಯಕ್ಷೇತ್ರಜ್ಞನು, ಜಡದೇಹಕ್ಕೆ ಸ್ವಾಮಿಯಾದ ಜೀವವು ಅಮುಖ್ಯಕ್ಷೇತ್ರಜ್ಞ" ಎಂದು ಹೇಳಿರುವೆನು. (೫-೧೪।೧೫)ನೇ ಶ್ಲೋಕಗಳಲ್ಲಿ 'ಪ್ರಭು' ಮತ್ತು 'ವಿಭು' ಪದಗಳಿಂದ ಪರಮಾತ್ಮನು ಮಹಾಸಮರ್ಥನೆಂದು ಹೇಳಲಾಗಿದೆ. ಇನ್ನು, (೫-೨೯,೧೦-೩,೬-೫,೬-೬,೬-೭) ಗೀತಾ ಶ್ಲೋಕಗಳು, (೯-೨-೧೧) ಸೂತ್ರ, ಮುಂಡಕ (೫-೧) ಶ್ವೆಂ (೬-೧೧,೩-೨೭), ಗೀತಾ (೩-೩೭,೩-೩೯,೩-೪೦,೨-೬೨) ಈ ಶ್ಲೋಕಗಳಲ್ಲಿ "ಒಂದೇ ದೇಹದಲ್ಲಿ ಜೀವೇಶ್ವರರು ವಾಸ ಮಾಡಿದ್ದು, ಜೀವವು ಕರ್ಮಫಲವನ್ನು ಭೋಗಿಸುವದು, ಪರಮಾತ್ಮನು ಕೇವಲ ಶುಭಫಲ ಭೋಗಿಸುವನು, ಸರ್ವಪ್ರೇರಕನು" ಎಂದು ಮುಂತಾಗಿ ಹೇಳಲ್ಪಟ್ಟಿದೆ. ಆದರೆ, ಜೀವವು ರಾಜಸ ತಾಮಸ ವಿಷಯಗಳ ಭೋಗದಲ್ಲಿ ತತ್ಪರವಾದರೆ, ನಾಶಹೊಂದುವದು. ತನ್ನನ್ನು ಲೆಕ್ಕಿಸದೆ, ಅದು ಪ್ರಕೃತಿವಶವಾಯಿತೆಂದು ಪರಮಾತ್ಮನು ಅದನ್ನು ನರಕಕ್ಕೆ ನೂಕುವನು. ಈ ವಿಷಯವಾಗಿ ಮುಂದೆ (೧೬-೯)ನೇ ಶ್ಲೋಕದಲ್ಲಿ ವಿವರಣೆಯುಂಟು. ಜೀವವು ಶಾಸ್ತ್ರಗಳ ಆಲೋಚನೆಯಿಂದಲೂ, ಗುರೂಪದೇಶದಿಂದಲೂ, ತನ್ನಲ್ಲಿ ಅಂತರ್ಗತನಾದ ಪರಮಾತ್ಮನು ಮುಖ್ಯಕ್ಷೇತ್ರಜ್ಞನೆಂದು ತಿಳಿದು, ಅವನನ್ನು ಭಕ್ತಿಪೂರ್ವಕವಾಗಿ ಆರಾಧಿಸಿದರೆ, ಅವನು ಪ್ರಕೃತಿಬಂಧನದಿಂದ ಬಿಡಿಸಿ, ಅದನ್ನು ತನ್ನ ಲೋಕಕ್ಕೆ ಒಯ್ಯುವನು ಇಲ್ಲಿ ಪ್ರಕೃತಿಪುರುಷರ ಸಂಬಂಧವು ಸ್ತ್ರೀಪುರುಷರ ಸಂಬಂಧದಂತಿದೆ.

೨೪. ಹಿಂದೆ ೨೦ನೇ ಶ್ಲೋಕದಲ್ಲಿ ಹೇಳಿದ ಅರ್ಥದಲ್ಲಿ ವಿಶೇಷ ಉತ್ಸುಕತೆ ಉಂಟಾಗಬೇಕೆಂದು ಅವರ ಜ್ಞಾನದಿಂದ ಉಂಟಾಗುವ ಫಲಹೇಳಿದ್ದು —

**य एवं वेत्ति पुरुषं प्रकृतिं च गुणैः सह ।**
**सर्वथा वर्तमानोऽपि न स भूयोऽभिजायते ॥ २४ ॥**

**ಅಂ**—ಜೀವೇಶ್ವರರೆಂಬ ಎರಡು ವಿಧದ ಪುರುಷರನ್ನೂ, ಚೇತನಾಚೇತನಗಳೆಂಬ ಎರಡು ಬಗೆಯ ಪ್ರಕೃತಿಗಳನ್ನೂ, ಅವುಗಳ ಗುಣಸಹಿತವಾಗಿ ಅಧಿಕಾರಿಯು ವಿಶೇಷದಿಂದ ತಿಳಿದು ಅಪರೋಕ್ಷದಿಂದ ತಿಳಿದರೆ, ಅವನು ಪ್ರಮಾದದಿಂದ ನಡೆದರೂ, ತಿರುತಿರುಗಿ ಜನ್ಮಕ್ಕೆ ಬಾರದೆ, ಮುಕ್ತಿ ಹೊಂದುವನು. ಈ ಬಗ್ಗೆ (೩-೪-೧೫)ನೆಯ ಸೂತ್ರವು ಪ್ರಮಾಣವಾಗಿದೆ.

೨೫-೨೬ ಸರ್ವೋತ್ತಮನಾದ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಅವಶ್ಯವಿರುವ ಸಾಧನವನ್ನು ಹೇಳಿದ್ದು :—

**ध्यानेनात्मनि पश्यंति केचिदात्मानमात्मना ।**
**अन्ये सांख्येन योगेन कर्मयोगेन चापरे ॥ २५ ॥**

अन्ये त्वेवमजानंतः श्रुत्वाऽन्येभ्य उपासते ।
तेऽपि चातितरंत्येव मृत्युं श्रुतिपरायणाः ॥ २६ ॥

ಅಂ—ಶ್ರವಣ-ಮನನವಂತರಾದ ಕೆಲ ಅಧಿಕಾರಿಗಳು ಧ್ಯಾನ ಮತ್ತು ಬುದ್ಧಿಯಿಂದ ತಮ್ಮ ದೇಹದಲ್ಲಿ ಪರಮಾತ್ಮನನ್ನು ಸಾಕ್ಷಾತ್ಕರಿಸುವರು, ಮತ್ತೆ ಕೆಲವರು ವೇದಗಳಲ್ಲಿ ಪ್ರತಿಪಾದಿಸಿದ ಪರಮಾತ್ಮನ ಸ್ವರೂಪವನ್ನು ವಿಶೇಷಜ್ಞಾನದಿಂದಲೂ, ಧ್ಯಾನದಿಂದಲೂ ಸಾಕ್ಷಾತ್ಕರಿಸುವರು; ಇನ್ನು ಶ್ರವಣಾದಿಗಳಿಲ್ಲದ ಕೆಲವರು ಕರ್ಮೋಪಾಯದಿಂದಲೂ, ಧ್ಯಾನದಿಂದಲೂ, ಅಂದರೆ, ಸತ್ಕರ್ಮಾನುಷ್ಠಾನದಿಂದ ಗಳಿಸಿದ ಪರಮಾತ್ಮನ ಅನುಗೃಹದಿಂದ ಹುಟ್ಟಿದ ಶ್ರವಣಮನನ ಧ್ಯಾನಗಳಿಂದ ಅವನನ್ನು ಸಾಕ್ಷಾತ್ಕರಿಸುವರು. "ಧ್ಯಾನದಲ್ಲಿ ಅಸಮರ್ಥರಾದವರು ಸಾಂಖ್ಯಯೋಗಾದಿ ದ್ವಾರಗಳಿಂದ ಜ್ಞಾನ ಸಂಪಾದನೆಯಿಂದಲೂ, ಅದನ್ನಾಚರಿಸಲು ಶಕ್ತರಿರದವರು ಕೂಡ ಕರ್ಮೋಪಾಯದಿಂದ ಶ್ರವಣಾದಿಗಳನ್ನು ಸಂಪಾದಿಸಿ, ಸಾಕ್ಷಾತ್ಕರಿಸುವರು" ಎಂದು ಅವಸ್ಥಾಭೇದವನ್ನಾಶ್ರಯಿಸಿ ಇದೇ ಅರ್ಥವು ಭಾಷ್ಯದಲ್ಲಿ ಹೇಳಲ್ಪಟ್ಟಿದೆ. ತಾತ್ಪರ್ಯದಲ್ಲಿ ಕೂಡ "ಕೆಲವು ಋಷಿಗಳು ತಮ್ಮ ಸಾಮರ್ಥ್ಯದಿಂದಲೂ, ಶ್ರವಣದಿಂದಲೂ, ಪರಮಾತ್ಮನನ್ನು ತಿಳಿದು ಮನನ–ಧ್ಯಾನಗಳಿಂದ ಹೃತ್ಕಮಲದಲ್ಲಿ ಪರಮಾತ್ಮನನ್ನು ನೋಡುವರು. ಇಲ್ಲಿ ಕೆಲವರೆಂದು ಹೇಳಿದ್ದರಿಂದ ಅನ್ಯರಾದ ನಾರದಾದಿ ಋಷಿಗಳು ಪರಮಾತ್ಮನನ್ನು ದೇಹದ ಹೊರಗೆ ಕೂಡ ಸಾಕ್ಷಾತ್ಕರಿಸುವರೆಂದು ಸೂಚಿತವಾಯಿತು. ಕೆಲ ದೇವತೆಗಳು ತಮ್ಮ ದಿವ್ಯಜ್ಞಾನದಿಂದ ಧ್ಯಾನವಿಲ್ಲದೆ ಕೂಡ ಪರಮಾತ್ಮನ ಅನುಗ್ರಹದಿಂದ ಸಂಪಾದಿಸಿದ ಸ್ವಪ್ರಕಾಶವೆಂಬ ಜ್ಞಾನದಿಂದ ಒಳಗೂ ಹೊರಗೂ ಅವನನ್ನು ಸಾಕ್ಷಾತ್ಕರಿಸುವರು. ಕೆಲವು ಕ್ಷತ್ರಿಯಶ್ರೇಷ್ಠ ಅರಸರು ಅಶ್ವಮೇಧ ಮುಂತಾದ ಕರ್ಮೋಪಾಯದಿಂದಲೂ, ಶ್ರವಣ, ಸ್ವಸಾಮರ್ಥ್ಯ, ಇವುಗಳಿಂದಲೂ, ಪರಮಾತ್ಮನನ್ನು ನಿತ್ಯದಲ್ಲಿ ಸ್ಮರಿಸುತ್ತ ಅಶ್ವಮೇಧ ಮುಂತಾದ ಯಜ್ಞಕರ್ಮದಲ್ಲಿ ಯಜ್ಞಭಾಗ ಸ್ವೀಕಾರಕ್ಕಾಗಿ ಬಂದಿರುವ ಪರಮಾತ್ಮನನ್ನು ಸಾಕ್ಷಾತ್ಕರಿಸುವರು. ಅದೇಮೇರೆಗೆ, ಮನುಷ್ಯರು ಕೂಡ ತಮ್ಮ ಸಾಮರ್ಥ್ಯದಿಂದ ಪರಮಾತ್ಮನನ್ನು ಅರಿಯದೆ, ಅನ್ಯರಿಂದ ಅವನ ವಿಷಯವನ್ನು ಕೇಳಿ, ಆಲೋಚಿಸಿ, ಧ್ಯಾನಮಾಡಿದಬಳಿಕ ಅವನನ್ನು ಸಾಕ್ಷಾತ್ಕರಿಸುವರು. ಅವರಲ್ಲಿ ಅಲ್ಪ ಸಾಮರ್ಥ್ಯವಿದ್ದರೂ, ಅವನ ವಿಷಯದ ಶ್ರವಣದಲ್ಲಿ ತತ್ಪರರಾಗಿ ಸಂಸಾರದಿಂದ ಮುಕ್ತರಾಗುವರು" ಹೀಗೆ ಹೇಳಿ ಇದೆ.

ವಿಂ ಅಂ—ಇಲ್ಲಿ ವಿವೇಕವೇನಂದರೆ, ಪರಮಾತ್ಮನ ಸಾಕ್ಷಾತ್ಕಾರವಾಗುವದೆಂದು ಹೇಳಿದ ಅಧಿಕಾರಿಗಳು ದೇವರ್ಷಿ, ದೇವತೆ, ರಾಜರ್ಷಿ, ಮನುಷ್ಯ, ಹೀಗೆ ನಾಲ್ಕು ಬಗೆಯವರು ಎಂದು ತಿಳಿಯಬೇಕು.

೨೭. ಕಾರ್ಯವಾದ ದೇಹಸಂಬಂಧಕ್ಕೆ ಪ್ರಕೃತಿಯು ಕಾರಣಳು. ಪರಮಾತ್ಮನು ಎಲ್ಲ ಕಡೆಗೂ ಸಮಾನಧರ್ಮವುಳ್ಳವನು; ಇಂಥ ಧರ್ಮಗಳುಳ್ಳ ಪ್ರಕೃತಿ–ಪುರುಷರ ಸ್ವರೂಪವನ್ನು ಮತ್ತೆ ವರ್ಣಿಸಿದ್ದು :—

यावत्संजायते किंचित्सत्त्वं स्थावरजंगमम् ।
क्षेत्रक्षेत्रज्ञसंयोगात्तद्विद्धि भरतर्षभ ॥ २७ ॥

ಅಂ—ಭರತಶ್ರೇಷ್ಠನೇ, ಇದ್ದಷ್ಟೆಲ್ಲ ಚೇತನಾಚೇತನಾತ್ಮಕ ಸಕಲ ಜೀವ ಸಮೂಹವು ಚಿತ್ ಪ್ರಕೃತಿಪರಮಾತ್ಮರ ಸಂಯೋಗರೂಪದಿಂದಲೇ ರೂಪುಗೊಂಡಿರುವದೆಂದು ತಿಳಿ.

೨೮. ಇನ್ನು ಹಿಂದೆ ೩ನೇ ಶ್ಲೋಕದಲ್ಲಿ ಪರಮಾತ್ಮನೇ ಸಕಲ ಶರೀರಗಳಲ್ಲಿ ವಾಸವಾಗಿರುವನೆಂದು ಹೇಳಿದೆಯಷ್ಟೆ! ಅದು ಯೋಗ್ಯವಲ್ಲ. ಯಾಕೆಂದರೆ, ವಾಸಸ್ಥಾನದ ತಾರತಮ್ಯದಿಂದಲೂ, ದುಃಖಿಯಾದವರ ಸಂಬಂಧದಿಂದಲೂ, ಅವನಿಗೆ ದುಃಖ ಒದಗುವದಲ್ಲ! ಎಂದು ಕೇಳಿದ್ದಕ್ಕೆ ಉತ್ತರ:—

**समं हि सर्वेषु भूतेषु तिष्ठंतं परमेश्वरम् ।**
**विनश्यत्स्वविनश्यन्तं यः पश्यति स पश्यति ॥ २८ ॥**

**ಅಂ**—ತಾರತಮ್ಯವುಳ್ಳ ಸರ್ವಪ್ರಾಣಿಗಳಲ್ಲಿ ವಾಸವಾಗಿರುವ ಪರಮಾತ್ಮನು ಅಚಿಂತ್ಯ ಸಮರ್ಥನೂ, ಹೆಚ್ಚುಕಡಿಮೆಯಿಲ್ಲದವನೂ, ಸಕಲಸದ್ಗುಣಸಂಪನ್ನನೂ, ಇರುವನೆಂದು ಯಾವ ಅಧಿಕಾರಿಯು ತಿಳಿಯುವನೋ ಮತ್ತು ಸುಖದುಃಖ, ಜನನಮರಣ, ಮುಂತಾದ ದೋಷಗಳುಳ್ಳ ಪ್ರಾಣಿಗಳಲ್ಲಿ ವಾಸಮಾಡಿರುವ ಪರಮಾತ್ಮನು ನಾಶರಹಿತನೂ, ದುಃಖಾದಿ ದೋಷರಹಿತನೂ, ಎಂದು ಯಾವ ಅಧಿಕಾರಿಯು ತಿಳಿಯುವನೋ ಅವನೇ ಯಥಾರ್ಥಜ್ಞಾನಿಯು.

೨೯. ಎಲ್ಲ ವಿಧದಿಂದಲೂ ಪರಮಾತ್ಮನು ಸಮನೆಂದು ತಿಳಿಯುವ ಜ್ಞಾನಕ್ಕೆ ಫಲಹೇಳಿದ್ದು:—

**समं पश्यन्हि सर्वत्र समवस्थितमीश्वरम् ।**
**न हिनस्त्यात्मनाऽऽत्मानं ततो याति परां गतिम् ॥ २९ ॥**

ಅರ್ಥ:— ಪರಮಾತ್ಮನು ದೋಷವಿಲ್ಲದ ಸದ್ಗುಣಗಳಿಂದ ಒಂದೇ ವಿಧನಾಗಿರುವನೆಂದು (೩–೨–೧೧) ನೆಯ ಸೂತ್ರದಲ್ಲಿ ಹೇಳಿದಂತೆ ತಿಳಿಯುವ ಅಧಿಕಾರಿಯು ತನ್ನನ್ನು ನರಕದಲ್ಲಿ ಕೆಡಹುವದಿಲ್ಲ; ಆದರೆ, ಅವನು ಅಂತಹ ಜ್ಞಾನದಿಂದ ಮೋಕ್ಷಹೊಂದುವನು.

೩೦. ಪರಮಾತ್ಮನು ಕರ್ಮವನ್ನಪೇಕ್ಷಿಸದೆ, ಹಿಂದೆ ೨೩ನೇ ಶ್ಲೋಕದಲ್ಲಿ ಹೇಳಿದಂತೆ, ಸತ್–ಅಸತ್ ಯೋನಿಗಳಲ್ಲಿ ಒದಗುವ ಜನ್ಮಗಳಿಗೆ ಸ್ವತಂತ್ರಕಾರಣನೆಂದು ಹೇಳಿದರೆ, ಅವನಿಗೆ ವಿಷಮತ್ವಾದಿ ದೋಷಗಳು ತಗಲುವವು. ಮತ್ತು ಕರ್ಮದ ಅಪೇಕ್ಷೆಯು ಅವನಿಗುಂಟೆಂದು ತಿಳಿದರೆ, ಅವನ ಸ್ವಾತಂತ್ರ್ಯಕ್ಕೆ ಹಾನಿತಟ್ಟುವದು; ಅವನಿಗೆ ಅನ್ಯಕರ್ತನುಂಟೆಂದರೆ, ಸ್ವಾತಂತ್ರ್ಯದ ಹಾನಿಯಲ್ಲವೇ ? ಎಂದು ಸಂದೇಹಪಟ್ಟಿದ್ದಕ್ಕೆ ಉತ್ತರ :—

**प्रकृत्यैव च कर्माणि क्रियमाणानि सर्वशः ।**
**यः पश्यति तथाऽऽत्मानमकर्तारं स पश्यति ॥ ३० ॥**

**ಅಂ**—ಪರಮಾತ್ಮನು ಪ್ರಕೃತಿಯನ್ನು ಮುಂದೆ ಮಾಡಿ ಜೀವವು ಹಿಂದೆಮಾಡಿದ ಕರ್ಮಕ್ಕನುಸರಿಸಿ ಸಕಲ ಕಾರ್ಯಗಳನ್ನು ಜರಗಿಸುವನೆಂದೂ, ಅವನು ಕರ್ತೃಹೀನನೆಂದೂ, ತಿಳಿಯುವ ಅಧಿಕಾರಿಯೇ ಯಥಾರ್ಥ ಜ್ಞಾನವಂತನು; ಅಥವಾ, ಹಿಂದೆ ೨೩ನೆಯ ಶ್ಲೋಕದಲ್ಲಿ ಪರಮಾತ್ಮನು ಸ್ವತಂತ್ರನೆಂಬ ಜ್ಞಾನಕ್ಕೆ ಫಲಹೇಳಿದ್ದು:— ಪರಮಾತ್ಮನು ಪ್ರಕೃತಿಯನ್ನು ನಿಮಿತ್ತಮಾಡಿ ತನ್ನಿಂದ ಎಲ್ಲ ಕಾರ್ಯಗಳನ್ನು ಮಾಡಿಸುವನೆಂತಲೂ, ತಾನು ಎಲ್ಲ ಬಗೆಯಿಂದ ಅಸ್ವತಂತ್ರನೆಂತಲೂ, ತಿಳಿಯುವ ಅಧಿಕಾರಿಯು ಯಥಾರ್ಥಜ್ಞಾನಿಯು. ಈ ವಿಷಯಕ್ಕೆ ( ೩–೨–೪೨ ) ನೇ ಸೂತ್ರವು ಪ್ರಮಾಣವಾಗಿದೆ. ಪರಮಾತ್ಮನಿಗೆ ಅನ್ಯಕರ್ತನಿಲ್ಲದ್ದರಿಂದ ಸ್ವಾತಂತ್ರ್ಯವುಂಟು; ತನಗೆ ಆಧೀನ

ವಾದ ಜೀವದ ಕರ್ಮಾಪೇಕ್ಷೆಯಿಂದ ಎಲ್ಲವನ್ನೂ ಮಾಡಿಸುವ ಮೂಲಕ ಅವನಿಗೆ ವಿಷಮಾದಿದೋಷಗಳಿಲ್ಲೆಂಬ ಅಭಿಪ್ರಾಯ. ಈ ವಿಷಯಕ್ಕೆ (೨-೧-೩೪)ನೇ ಸೂತ್ರವು ಪ್ರಮಾಣ.

೩೦ ಅಂ—ಪರಮಾತ್ಮನು ತನ್ನ ಇಚ್ಛೆಗನುಸರಿಸಿ ಅಥವಾ ತನಗೆ ಅಧೀನವಾದ ಚೇತನಾತ್ಮಕ ಪ್ರಕೃತಿಯಿಂದ ಆಯಾ ಜೀವರಾಶಿಗಳ ಸ್ವಭಾವಕ್ಕನುಗುಣವಾಗಿ ಕರ್ಮಮಾಡಿಸುವನು, ಮಾಡುವ ಕರ್ಮಗಳಿಗೆಲ್ಲ ತಾನು ಕರ್ತನಲ್ಲೆಂದು ತಿಳಿದು ಪರಮಾತ್ಮನೇ ಪೂರ್ವಕರ್ಮಕ್ಕನುಸರಿಸಿ ಕರ್ಮಮಾಡಿಸುವದರಿಂದಲೂ, ಅವನಿಗೆ ಅನ್ಯ ಪ್ರೇರಕನಿಲ್ಲದ್ದರಿಂದಲೂ, ಅಕರ್ತನೆನಿಸುವನು, ಹೀಗೆ ಅವನು ಜೀವದ ಪೂರ್ವಕರ್ಮದಂತೆ ಮುಂದಿನ ಕರ್ಮಮಾಡಿಸಿ, ಅವುಗಳಿಗೆ ತಕ್ಕಂತೆ ಸುಖದುಃಖಾದಿ ಫಲಗಳನ್ನು ಈಯುವದರಿಂದ, ವಿಷಮತೆ, ಸ್ವಾತಂತ್ರ್ಯಹಾನಿ ಮುಂತಾದ ದೋಷಗಳು ಅವನಿಗೆ ಉಂಟಾಗುವದಿಲ್ಲ, ಇಂಥ ಜ್ಞಾನವೇ ಯಥಾರ್ಥಜ್ಞಾನವೆನಿಸುವದು.

೩೧. ಎಲ್ಲಕ್ಕೂ ಪರಮಾತ್ಮನೇ ಪ್ರೇರಕನೆಂಬ ಜ್ಞಾನವಷ್ಟೇ ಅಲ್ಲ, ಆದರೆ (೧-೪-೨೩) ನೆಯ ಸೂತ್ರದಲ್ಲಿ ಮತ್ತು (೭-೬, ೭-೭, ೯-೪, ೯-೮, ೯-೧೮, ೧೦-೮) ಈ ಶ್ಲೋಕಗಳಲ್ಲಿ ಹೇಳಿರುವಂತೆ ಅವನು ಸೃಷ್ಟಿ, ಸ್ಥಿತಿ, ಸಂಹಾರಗಳಿಗೆ ಕರ್ತನೆಂಬ ಜ್ಞಾನವೂ ಅವಶ್ಯವೆಂಬಲ್ಲಿ ಹೇಳಿದ್ದು.—

**यदा भूतपृतग्भावमेकस्थमनुपश्यति ।**
**तत एव च विस्तारं ब्रह्म संपद्यते तदा ॥ ३१ ॥**

ಅಂ—ಚೇತನಾಚೇತನ ಪದಾರ್ಥಗಳು ಪರಸ್ಪರ ಭಿನ್ನವಾಗಿದ್ದು, ಪ್ರಳಯಕಾಲದಲ್ಲಿ ಪರಮಾತ್ಮನ ಉದರದಲ್ಲಿ ಭಿನ್ನವಾಗಿಯೇ ಇರುವವು; ಸೃಷ್ಟಿಕಾಲದಲ್ಲಿ ಅವುಗಳ ವಿಸ್ತಾರವು ಅಂದರೆ, ಮಹತ್ ಅಹಂಕಾರಾದಿ ಕ್ರಮದಿಂದಲೂ, ಬ್ರಹ್ಮ-ರುದ್ರಾದಿ ಕ್ರಮದಿಂದಲೂ, ಆಗುವದು; ಹೀಗೆ ಸೃಷ್ಟಿಸಲ್ಪಟ್ಟ ಪದಾರ್ಥಗಳು ಅನ್ಯೋನ್ಯವಾಗಿ ಪರಮಾತ್ಮನಿಂದಲೂ ಭಿನ್ನವಾಗಿದ್ದು, ಸ್ಥಿತಿಕಾಲದಲ್ಲಿ ಒಬ್ಬ ಪರಮಾತ್ಮನ ಆಶ್ರಯದಿಂದಲೇ ಇರುವವು. ಈ ಮೇರೆ, ಸೃಷ್ಟಿಸ್ಥಿತಿಗಳು ತಾರತಮ್ಯಕ್ಕನುಸರಿಸಿ ಪರಮಾತ್ಮನಿಂದಲೇ ನಡೆಯುವವೆಂದು ತಿಳಿಯುವ ಅಧಿಕಾರಿಯು ಅವನನ್ನು ಹೊಂದುವನು; ಅಂದರೆ ಮೋಕ್ಷಯೋಗ್ಯನಾಗುವನು.

೩೨. ಸಕಲ ಭೂತಮಾತ್ರಗಳಲ್ಲಿ ಪರಮಾತ್ಮನು ಅಂತರ್ಗತನಾಗಿದ್ದರೂ ಅವನಿಗೆ ನಾಶವಿಲ್ಲ, ಆದರೆ, ಅವನಿಗೆ ಶರೀರಸಂಬಂಧವಾಗಲು ಅದರ ನಾಶದಿಂದ ಅವನಿಗೂ ನಾಶ ಒದಗುವದಿಲ್ಲವೇ? ಎಂದು ಕೇಳಿದ್ದಕ್ಕೆ ಉತ್ತರ ಹೇಳಿದ್ದು —

**अनादित्वान्निर्गुणत्वात्परमात्मायमव्ययः ।**
**शरीरस्थोऽपि कौंतेय न करोति न लिप्यते ॥ ३२ ॥**

ಅಂ—ದೇಹದಲ್ಲಿ ಪರಮಾತ್ಮನು ವಾಸಮಾಡಿದ್ದರೂ ಅನಾದಿಯಾದ್ದರಿಂದಲೂ, ಸತ್ವಾದಿ ಗುಣಹೀನನಾದ್ದರಿಂದಲೂ, ಅವನಿಗೆ ಅಳಿವಿಲ್ಲ, ಮೇಲಾಗಿ, ಅವನಿಗೆ ಚಿಂತೆ, ಸಂತಾಪ, ದುಃಖ ಮೊದಲಾದವುಗಳ ಲೇಪವೂ ಇಲ್ಲ. ಲೋಕವಿಲಕ್ಷಣ ಕರ್ಮಮಾಡುವದರಿಂದ ಅಕರ್ತನೆನಿಸುವನವನು; ಅಥವಾ, ಛಾಂದೋಗ್ಯ (೩-೧೯-೧) ಮುಂಡಕ (೨-೧-೧೦) ಈ ಮಂತ್ರಗಳಲ್ಲಿ ಅವನು ಚೇತನಾಚೇತನಾತ್ಮಕನೆಂದು ಅನ್ಯವಾದಿಗಳು ಹೇಳುವದರಿಂದ, ಅವನಿಗೂ, ಅನ್ಯಪದಾರ್ಥಗಳಿಗೂ, ಭೇದವು ಸಲ್ಲುವದು

ಹೇಗೆಂದು ಪ್ರಶ್ನಮಾಡಿದರೆ, ಮೇಲಿನ ಶ್ರುತಿಗಳ ತಾತ್ಪರ್ಯವನ್ನು ತಿಳಿಯದೆ ಪ್ರತಿಪಾದಿಸುವ ಅದ್ವೈತ ಮತವನ್ನು ನಿರಾಕರಿಸಿದ್ದು:—ಸರ್ವಶರೀರಗಳಲ್ಲಿ ಪರಮಾತ್ಮನು ವಾಸಮಾಡಿದ್ದರೂ, ಅದೇ ಶರೀರಕ್ಕೆ ಅಭಿಮಾನಿಯಾಗಿ ವಾಸಿಸಿ ಸುಖದುಃಖಾದಿಗಳನ್ನು ಭೋಗಿಸುವ ಜೀವನಾಗಲರಿಯನು; ಅಂದಬಳಿಕ ಅವನು ಜಡಸ್ವರೂಪಿಯಲ್ಲೆಂದು ಹೇಳುವದೇನು ? ಯಾಕೆಂದರೆ, ಅವನು ಅನಾದಿಯು; ಅಂದರೆ, ಅವನಿಗೆ ದೇಹಸಂಬಂಧದ ನಾಶಗಳಿಲ್ಲ; ಮತ್ತು ಪ್ರಾಕೃತ ಸತ್ವಾದಿ ಗುಣಗಳಿಲ್ಲದ್ದರಿಂದ ಅವನಿಗೆ ನಾಶವಿಲ್ಲ. ಅವನು ಸರ್ವಕರ್ತನಾದುದರಿಂದ ಕರ್ತನೆನಿಸುವನು; ಆದರೂ, ಕರ್ಮಫಲಭೋಗವು ಅವನಿಗಿರದ್ದರಿಂದ, ಕರ್ಮಲೇಪವಿಲ್ಲ. ಆತನಿಗೆ ಈ ಬಗೆಯಾಗಿ, ಹಿಂದೆ ಹೇಳಿದ ಐದು ಧರ್ಮಗಳು ಜೀವದಲ್ಲಿರದೆ, ಅವುಗಳಿಗೆ ವಿರುದ್ಧವಾದ ಧರ್ಮಗಳುಂಟು. ಪರಮಾತ್ಮನು ಮಾಡಿದರೂ ಅವನಿಗೆ ಕರ್ಮಲೇಪವಿಲ್ಲ; ಆದರೆ (೨-೩-೪೧) ನೆಯ ಸೂತ್ರದಲ್ಲಿ ನಿರೂಪಿಸಲ್ಪಟ್ಟಂತೆ ಜೀವದ ಕರ್ತೃತ್ವಶಕ್ತಿಯು ಕೂಡ ಪರಮಾತ್ಮನಿಗೆ ಆಧೀನವಾದುದರಿಂದ ಅದು ಕರ್ತನಾಗದು, ಮತ್ತು ಪರಾಧೀನವಾದ್ದರಿಂದ ಕರ್ಮಲೇಪವು ಅದಕ್ಕೆ ತಪ್ಪದು.

ವಿಂ ಅಂ—ಲೋಕವಿಲಕ್ಷಣ ಐದು ಧರ್ಮಗಳು ಪರಮಾತ್ಮನಲ್ಲಿರುವ ಮೂಲಕ ಅವನಿಗೂ, ಜೀವ ಜಡಗಳಿಗೂ, ಭೇದ. ಹೇಗಂದರೆ, ಪರಮಾತ್ಮನು ಎಲ್ಲಕಡೆಯಲ್ಲಿಯೂ ಒಂದೇ ವಿಧದಿಂದ ಇರುವನೆಂದು ೨೮ನೆಯ ಶ್ಲೋಕದಲ್ಲಿಯೂ, ಅವನ ಜ್ಞಾನದಿಂದ ಮೋಕ್ಷವಾಗುವದೆಂದು ೨೯ನೆಯ ಶ್ಲೋಕದಲ್ಲಿಯೂ, ಅವನ ಸಮತೆಯು ನಿಶ್ಚಿತವೆಂದು ೩೦ನೆಯ ಶ್ಲೋಕದಲ್ಲಿಯೂ, ಅವನು ಜಗಜ್ಜನ್ಮಾದಿಗಳಿಗೆ ಕಾರಣನೆಂತಲೂ, ಅಂಥ ಜ್ಞಾನದಿಂದ ಮೋಕ್ಷಪ್ರಾಪ್ತಿ ಎಂತಲೂ ೩೧ನೆಯ ಶ್ಲೋಕದಲ್ಲಿಯೂ, ಅವನು ದೇಹದಲ್ಲಿ ವಾಸವಾಗಿದ್ದರೂ ದೋಷದ ಲೇಪವಿಲ್ಲೆಂದು ಪ್ರಕೃತ ಶ್ಲೋಕದಲ್ಲಿಯೂ, ಹೇಳಲಾಗಿವೆ.

೩೩. ದೇಹದಲ್ಲಿ ಪರಮಾತ್ಮನು ಮನೆಮಾಡಿದ್ದರೂ, ಅವನಿಗೆ ಗುಣದೋಷಗಳು ಅಂಟಲಾರವೆಂದು ಹೇಳಿ ಇದೆ; ಆದರೆ, ಲೋಕದ ಸಂಬಂಧವಾದರೆ ಅವು ತಗಲುವದು ಸ್ವಾಭಾವಿಕವೆಂದು ಅನುಭವವು, ಎಂದು ಆಕ್ಷೇಪವೆತ್ತಿದರೆ, ಅವನಿಗೆ ಅವುಗಳ ಲೇಪ ತಗಲದೆಂದು ಬಿಚ್ಚಿ ಹೇಳಿದ್ದು:—

**यथा सर्वगतं सौक्ष्म्यादाकाशं नोपलिप्यते ।**
**सर्वत्रावस्थितो देहे तथाऽऽत्मा नोपलिप्यते ॥ ३३ ॥**

ಅಂ—ಆಕಾಶವು ಕೆಸರು ಮುಂತಾದ ಪದಾರ್ಥಗಳಲ್ಲಿ ಆಡಕವಾಗಿದ್ದರೂ, ಅತಿಸೂಕ್ಷ್ಮವಾದುದರಿಂದ ಅದಕ್ಕೆ ಅವುಗಳ ದೋಷವು ಅಂಟದು; ಅದರಂತೆಯೇ ಉಚ್ಚ ನೀಚ ದೇಹಗಳಲ್ಲಿ ಪರಮಾತ್ಮನು ಮನೆಮಾಡಿದ್ದರೂ, ಅವನಿಗೆ ಅವುಗಳ ದೋಷಹತ್ತದು.

ವಿಂ ಅಂ—ಸುಗಂಧ-ದುರ್ಗಂಧ ಪದಾರ್ಥಗಳಿಂದಲೂ, ಮಳೆ, ನೀರು, ಗಾಳಿ, ಬೆಂಕಿ, ಧೂಳು, ಕೆಸರುಗಳಿಂದಲೂ, ಆಕಾಶಕ್ಕೆ ಸಂಬಂಧ ಉಂಟಾದರೂ, ಅದಕ್ಕೆ ಅವುಗಳ ಲೇಪವಿಲ್ಲ. ಮುಂಡಕ (೫-೭) ನೆಯ ಮಂತ್ರದಲ್ಲಿ ಹೇಳಿದಂತೆ ಪರಮಾತ್ಮನು ಆಕಾಶಕ್ಕಿಂತ ಅತಿಸೂಕ್ಷ್ಮನಾದ್ದರಿಂದ ಅವನಿಗೆ ಅವುಗಳು ಲೇಪಿಸಲಾರವು. ಸಂಸರ್ಗದಿಂದ ಗುಣದೋಷಗಳು ಉಂಟಾಗುತ್ತವೆಂದು ಸ್ಥೂಲಪದಾರ್ಥಗಳ ಬಗ್ಗೆ ಹೇಳಬಹುದೇ ಹೊರ್ತು ಸೂಕ್ಷ್ಮವಸ್ತುಗಳಿಗಲ್ಲ.

೩೪. ಹಿಂದೆ, ಪರಮಾತ್ಮನು ಕ್ಷೇತ್ರಜ್ಞನೆಂದು ತಿಳಿಯಬೇಕೆಂದು ಹೇಳಿದೆಯಷ್ಟೇ ? ಅದಕ್ಕಾಗಿಯೇ ಕ್ಷೇತ್ರಾದಿಕದ ವರ್ಣನೆಯುಂಟು. ಆತನ ಕ್ಷೇತ್ರಜ್ಞ ವರ್ಣನೆಯನ್ನು ದೃಷ್ಟಾಂತ ಪೂರ್ವಕ ಬಣ್ಣಿಸಿದ್ದು :—

**यथा प्रकाशयत्येकः कृत्स्नं लोकमिमं रविः ।**
**क्षेत्रं क्षेत्री तथा कृत्स्नं प्रकाशयति भारत ॥ ३४ ॥**

**ಅಂ**—ಸೂರ್ಯನು ಒಬ್ಬನೇ ಏನೋ ಸರಿ; ಆದರೂ ಅವನು ಎಲ್ಲ ಪ್ರಪಂಚವನ್ನು ಬೆಳಗಿಸುವಂತೆ ದೇಹದಲ್ಲಿ ವಾಸವಾಗಿದ್ದ ಪರಮಾತ್ಮನು ಒಬ್ಬನೇ ಆದರೂ, ಈ ಸಕಲ, ಚೇತನಾಚೇತನ ಜಗತ್ತನ್ನು ಬೆಳಗಿಸುವನು; ಅಂದರೆ ಉಂಟುಮಾಡುವನು.

**ವಿಂ ಅಂ**—ಇಲ್ಲಿ ಸೂರ್ಯನ ದೃಷ್ಟಾಂತದಿಂದ ಸೂರ್ಯನಂತೆ ಪರಮಾತ್ಮನೊಬ್ಬನೇ ಎಂದು ತಿಳಿಯಬೇಕು; ಹೊರ್ತು ಅವನ ರೂಪಗಳಿಗೆ ಭೇದವಿಲ್ಲ; ಈ ವಿಷಯವಾಗಿ (೩–೨–೧೧) ನೆಯ ಸೂತ್ರವು ಆಧಾರವಾಗಿದೆ. ಮೇಲಾಗಿ, ಭಾಗವತದ (೧–೯–೪೩) ನೆಯ ಶ್ಲೋಕದಲ್ಲಿ ಪರಮಾತ್ಮನ ರೂಪಗಳಿಗೆ ಪರಸ್ಪರ ಭೇದವಿಲ್ಲೆಂದು ಹೇಳಲ್ಪಟ್ಟಿದೆ; ಅಲ್ಲದೆ, (೫–೧೧) ನೆಯ ಮಂತ್ರದಲ್ಲಿ ಸಕಲ ಜಗಕ್ಕೆ ಕಣ್ಣಾಗಿರುವ ಸೂರ್ಯನನ್ನು ಬಾಹ್ಯ ದೋಷಗಳು ದೂಷಿಸದಂತೆ ಪರಮಾತ್ಮನು ಸರ್ವ ಪ್ರಾಣಿಗಳಲ್ಲಿ ಹುದುಗಿಕೊಂಡು ಕುಳಿತಿದ್ದರೂ, ಅವನಿಗೆ ಬಾಹ್ಯ ದೋಷಗಳ ಲೇಪವಿಲ್ಲ.

೩೫. ಫಲ ಹೇಳಿ ಅಧ್ಯಾಯಾರ್ಥವನ್ನು ಮುಗಿಸಿದ್ದು :—

**क्षेत्रक्षेत्रज्ञयोरेवमंतरं ज्ञानचक्षुषा ।**
**भूतप्रकृतिमोक्षं च ये विदुर्यांति ते परम् ॥ ३५ ॥**

**ಅಂ**—ಹಿಂದೆ ಹೇಳಿದ ಮೇರೆಗೆ ಪ್ರಾಣಿಗಳಿಗೆ ವಿವೇಕಜ್ಞಾನದಿಂದ ಕ್ಷೇತ್ರ–ಕ್ಷೇತ್ರಜ್ಞರ ಭೇದವು ಜಡ ಪ್ರಕೃತಿಯ ಬಂಧನದಿಂದ ಮೋಕ್ಷವು ಇವೆರಡೂ ಪರಮಾತ್ಮನಿಂದಲೇ ಆಗುವವೆಂದು ತಿಳಿದ ಅಧಿಕಾರಿಯು ಮೋಕ್ಷಾರ್ಹನಾಗುವನು.

**इति श्रीमद्भगवद्गीतासूपनिषत्सु ब्रह्मविद्यायां योगशास्त्रे श्रीकृष्णार्जुन-**
**संवादे क्षेत्रक्षेत्रज्ञयोगो नाम त्रयोदशोऽध्यायः ॥ १३ ॥**

**ಅಂ**—ಈಮೇರೆಗೆ ಷಡ್ಗುಣೈಶ್ವರ್ಯಸಂಪನ್ನನಾದ ಪರಮಾತ್ಮನಿಂದ ಮನೋಹರ,
ಅಲಂಕಾರಿಕ ಮತ್ತು ಇಷ್ಟಶಬ್ದಗಳಿಂದ ಉಪದೇಶಿಸಲ್ಪಟ್ಟಿದ್ದೂ. ಉಪನಿಷತ್ತಿಗೆ
ಸಮಾನವೂ ಪರಬ್ರಹ್ಮ ವಿಷಯಕ ವಿದ್ಯೆಯೂ ಎನಿಸುವ ಮತ್ತು ಕರ್ಮ
ಯೋಗಾದಿಗಳನ್ನು ಪ್ರತಿಪಾದಿಸುವ, ಶ್ರೀಕೃಷ್ಣನಿಗೂ, ಅರ್ಜುನ
ನಿಗೂ, ನಡೆದ ಸಂವಾದರೂಪವಾದ **ಗೀತಾಶಾಸ್ತ್ರದಲ್ಲಿಯ**
**'ಕ್ಷೇತ್ರ–ಕ್ಷೇತ್ರಜ್ಞಯೋಗ'** ಎಂಬ **ಹದಿಮೂರ**
**ನೆಯ** ಅಧ್ಯಾಯವು ಮುಗಿಯಿತು.



# ೧೪ನೆಯ ಅಧ್ಯಾಯವು.



೧. ಹಿಂದೆ (೨–೩೯) ನೆಯ ಶ್ಲೋಕದಲ್ಲಿ ಬುದ್ಧಿಯೋಗವನ್ನು ಕೇಳೆಂದು ಹೇಳಿ, ೬ನೆಯ ಅಧ್ಯಾಯ ಮುಗಿಯುವವರೆಗೆ, ಕಾಮಾದಿಗಳನ್ನು ಸಂಪೂರ್ಣವಾಗಿ ತೊರೆದು, ಮಾಡತಕ್ಕದ್ದನ್ನು ಮಾಡಿಯೇ ತೀರಬೇಕೆಂದು ಕರ್ಮ–ಧ್ಯಾನವೆಂಬ ಜ್ಞಾನ ಸಾಧನವು ಹೇಳಲ್ಪಟ್ಟಿತು; ಅದರಲ್ಲಿ ಕರ್ಮ ತ್ಯಾಗವು ಯಾವುದೆಂಬುದರ ಭಾಗವು ಮುಂದಿನ ಐದು ಅಧ್ಯಾಯಗಳಲ್ಲಿ ವಿಸ್ತಾರವಾಗಿ ನಿರೂಪಿಸಲಾಗುವದೆಂದು ಸಂಕ್ಷೇಪಾರ್ಥವು. ಇನ್ನು, ಬಂಧನದ ವಿಧವನ್ನು ತಿಳಿದರೇನೆಯೇ ಅದರಿಂದ ಬಿಡುಗಡೆ ಹೊಂದುವ ಸಾಧನವನ್ನೂ, ಅದಕ್ಕೆ ಬೇಕಾದ ಕರ್ತವ್ಯವನ್ನು ಆಚರಿಸುವ ರೀತಿಯನ್ನೂ, ನಿರೂಪಿಸುವದು ಯೋಗ್ಯವಾಗುವದು. ಬಂಧನವು (೧೩–೨೧) ನೆಯ ಶ್ಲೋಕದಲ್ಲಿ ತ್ರಿಗುಣಾತ್ಮಕವೆಂದು ವರ್ಣಿಸಲಾಗಿದೆ; ಆದುದರಿಂದ (೧೩–೨೬) ಶ್ಲೋಕದಿಂದ ಹಿಂದಿನ ಅಧ್ಯಾಯದಲ್ಲಿ ಹೇಳಿದ ಕ್ಷೇತ್ರ–ಕ್ಷೇತ್ರಜ್ಞರ ಸಂಯೋಗಕ್ಕೆ ಕಾರಣವಾದ ಪ್ರಾಣಿಗಳ ಉತ್ಪತ್ತಿ ಸಹಿತ ಮೂರು ಗುಣಗಳ ವಿಕಾರ, ಸ್ಥಿತಿ, ಅದನ್ನು ಮಿಕ್ಕುವ ಉಪಾಯ, ಅವೆರಡೂ ಪ್ರಕೃತ ಅಧ್ಯಾಯದಲ್ಲಿ ವಿವರಿಸಲ್ಪಡುವವು. ಅವು (೩–೫) ನೆಯ ಶ್ಲೋಕದಲ್ಲಿ ಸಂಕ್ಷೇಪವಾಗಿ ಹೇಳಲ್ಪಟ್ಟಿದ್ದರೂ, ಇಲ್ಲಿ ವಿಸ್ತಾರಪೂರ್ವಕವಾಗಿ ಬಣ್ಣಿಸಲಾಗುವವು. ಪ್ರಕೃತಿಯು ಯಾರು ? ಆಕೆಯ ಗುಣಗಳು ಎಂಥವು ? ಮತ್ತು ಎಷ್ಟು ? ಅವುಗಳ ಬಂಧನ ಪ್ರಕಾರವು ಎಂತಹದು ? ಮೋಕ್ಷವೆಂದರೇನು ? ಅದನ್ನು ದೊರಕಿಸುವ ಬಗೆ ಯಾವುದು ? ಕ್ಷೇತ್ರ–ಕ್ಷೇತ್ರಜ್ಞರ ಸಂಯೋಗದಿಂದ ನಿರ್ಮಿತವಾಗುವ ಚೇತನಾಚೇತನಾತ್ಮಕ ಜಗವೆಂದರೇನು ? ಇವುಗಳನ್ನೆಲ್ಲ ವಿಶದವಾಗಿ ತಿಳಿಯಬೇಕೆಂಬ ಅರ್ಜುನನ ಹಂಬಲಿಕೆಯನ್ನು ಅರಿತವನಾದ ಶ್ರೀಕೃಷ್ಣನು, ಅವನು ಕೇಳದಿದ್ದರೂ ತಾನಾಗಿಯೇ ಮತ್ತೆ ಮತ್ತೆ ಮನಸಿಗೆ ಹಿಡಿಯುವಂತೆ ನಿರೂಪಿಸುವೆನೆಂದು ನುಡಿದದ್ದು.—

**श्रीभगवानुवाच ।**

**परं भूयः प्रवक्ष्यामि ज्ञानानां ज्ञानमुत्तमम् ।**
**यज्ज्ञात्वा मुनयः सर्वे परां सिद्धिमितो गताः ॥ १ ॥**

**ಅಂ**—ಅರ್ಜುನಾ, ನಾನು ಮತ್ತೆ ಇನ್ನೊಂದು ಪ್ರಮೇಯವನ್ನು ಹೇಳುವೆನು ಕೇಳು. ತಿಳಿದುಕೊಳ್ಳುವ ವಿಷಯಗಳಲ್ಲಿ ಅತ್ಯುತ್ತಮವಾದುದೇ ಜ್ಞಾನವು. ಅದನ್ನು ತಿಳಿದುಕೊಂಡೇ ಮನನಶೀಲರಾದ ಮುನಿಗಳು ಈ ಸಂಸಾರದಿಂದ ಪಾರಾಗಿ ಮೋಕ್ಷವನ್ನೈದಿರುವರು.

**ವಿಂ ಅಂ**—ಯಜ್ಞ, ದಾನ, ತಪಸ್ಸು, ಕರ್ಮ, ಮೊದಲಾದವುಗಳು ಜ್ಞಾನ ಹಾಗೂ ಜ್ಞಾನದ ಫಲಕ್ಕೆ ಸಾಧನಗಳು. ಇವುಗಳಲ್ಲಿ ಪರಮಾತ್ಮನ ವಿಷಯಕ ಹಾಗೂ ಮೋಕ್ಷಫಲವನ್ನೀಯುವ ಜ್ಞಾನವೇ ಉತ್ತಮ ಜ್ಞಾನವು. ಶ್ರೀಕೃಷ್ಣನು "ಮತ್ತೆ ಹೇಳುವೆನೆಂದೂ, ಸಕಲ ಜ್ಞಾನಗಳಲ್ಲಿ ಉತ್ತಮವಾದುದೆಂದೂ" ಹೀಗೆ ಎರಡು ಬಗೆಯಾಗಿ ತಿರುತಿರುಗಿ ಒತ್ತಿ ಹೇಳಿದ್ದರಿಂದಲೇ ಈ 'ಜ್ಞಾನದ' ಉತ್ತಮತ್ವವು ಸಿದ್ಧವಾಗುವದು. ಅಮಾನಿತ್ವಾದಿ (೧೩–೮) ಜ್ಞಾನಗಳು, ಯಜ್ಞಾದಿ ಜ್ಞಾನಸಾಧನಗಳು, ಇವುಗಳಲ್ಲಿ ಮೋಕ್ಷವನ್ನು ಕೊಡುವ ಜ್ಞಾನವೇ ಎಲ್ಲಕ್ಕೂ ಶ್ರೇಷ್ಠವಾದುದೆಂದು ಸ್ಪಷ್ಟವಾಗು

ವದು. ಅಮಾನಿತ್ವಾದಿ ಸಾಧನಗಳು ಹಿಂದೆ (೧೩–೧೧)ರಲ್ಲಿ ಪರಮಾತ್ಮನ ಭಕ್ತಿಗೆ ಮುಖ್ಯ ಮೆಟ್ಟಿಲುಗಳೆಂದು ಹೇಳಲ್ಪಟ್ಟಿವೆ. ಭಕ್ತಿಯಿಂದ ಪ್ರಸನ್ನನಾದ ಪರಮಾತ್ಮನೇ ಭಕ್ತನಿಗೆ ತನ್ನ ಸಾಕ್ಷಾತ್ಕಾರ ಮಾಡಿಕೊಡಲು ಸಾಧನನಾಗುವನು. ಈ ಬಗ್ಗೆ (೧೦–೧೦, ೧೦–೫, ೧೫–೧೫) ಈ ಶ್ಲೋಕಗಳಲ್ಲಿ ನಿಚ್ಚಳವಾಗಿ ನಿರೂಪಣೆಯಾಗಿದೆ. ಮನನಶೀಲರಾದ ಮುನಿಗಳು ಇಂತಹ ಜ್ಞಾನವನ್ನೂ, ಅದರ ಸಾಧನವನ್ನೂ ಅರಿತು, ಅದರಂತೆ ಆಚರಿಸಿ, ಪರಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಂಡು, ದೇಹಬಂಧನೆಯಿಂದ ತಿರುತಿರುಗಿ ಉಂಟಾಗುವ ಸಂಸಾರಪರಂಪರೆಯನ್ನು ನಾಶಗೊಳಿಸಿಯೇ ಮೋಕ್ಷವನ್ನು ಪಡೆದರಲ್ಲವೇ! ಪ್ರತಿಬಂಧ ನಿವೃತ್ತಿಯಾಗಿ ಕಾರ್ಯಸಿದ್ಧಿಯಾಗಬೇಕಾದರೆ ಪ್ರತಿಬಂಧಕದ ಜ್ಞಾನವೇ ಅಂತರಂಗಸಾಧನವಾಗಿದೆ. ಲೋಕದಲ್ಲಿ ವಾಡಿಕೆಯಾಗಿ ಅಪಥ್ಯಾಚರಣೆಯು ತ್ಯಾಗದಿಂದಲೇ ಆರೋಗ್ಯಸಿದ್ಧಿಗೆ ಪ್ರತಿಬಂಧಕವಾಗುವ ಅಪಥ್ಯದ ಜ್ಞಾನವೇ ಅಂತರಂಗಸಾಧನವೆಂಬುದು ಎಲ್ಲರಿಗೂ ಅನುಭವಗಂಡ ಮಾತು, ಅದೇಮೇರೆಗೆ, ಪ್ರಕೃತಿಬಂಧನದ ನಿವೃತ್ತಿಯಿಂದ ಮೋಕ್ಷದೊರೆಯುಲು ಜ್ಞಾನ, ಅದರ ಫಲಕ್ಕೆ ಪ್ರತಿಬಂಧಕವಾಗುವ ಪ್ರಕೃತಿ, ಅದರ ಗುಣಗಳು, ಆ ಗುಣಗಳ ಕಾರ್ಯ, ಇವುಗಳ ವಿಷಯಕ ಸ್ಪಷ್ಟ ಜ್ಞಾನವಾಗುವದೇ ಅಂತರಂಗಸಾಧನವು.

೨. ಮಾತುಕೊಟ್ಟ ಮೇರೆಗೆ, ಶ್ರೀಕೃಷ್ಣನು ಜ್ಞಾನೋಪದೇಶಕ್ಕೆ ಆರಂಭಿಸಿದ್ದು:—

**इदं ज्ञानमुपाश्रित्य मम साधर्म्यमागताः ।**
**सर्गेऽपि नोपजायंते प्रलये न व्यथन्ति च ॥ २ ॥**

**ಅಂ**—ಮುಂದೆ ಹೇಳತಕ್ಕ ಜ್ಞಾನವನ್ನು ಪಡೆದು ಹಲವು ಮುನಿಗಳು ನನ್ನ ಸಾರೂಪ್ಯವನ್ನು ಹೊಂದಿರುವರು. ಅವರು ಸೃಷ್ಟಿನಿರ್ಮಾಣ ಕಾಲಕ್ಕೆ ಹುಟ್ಟುವದಿಲ್ಲ; ಪ್ರಳಯಕಾಲಕ್ಕೆ ದುಃಖ ಪಡುವದಿಲ್ಲ.

೩.

**मम योनिर्महद्ब्रह्म तस्मिन्गर्भं दधाम्यहम् ।**
**संभवः सर्वभूतानां ततो भवति भारत ॥ ३ ॥**

**ಅಂ**—ಅರ್ಜುನನೇ, ಚಿತ್ಪ್ರಕೃತಿಯಾದ ಮಹಾಲಕ್ಷ್ಮಿಯು ನನ್ನ ಪತ್ನಿಯು; ಅವಳಿಗೆ 'ಮಹಾಬ್ರಹ್ಮ' ಎಂಬ ಹೆಸರು. ಅವಳಲ್ಲಿ ನಾನು ಗರ್ಭವನ್ನು ಇಡುವೆ, ಅಂದರೆ ೨೪ ತತ್ವಗಳಿಂದ ಕೂಡಿದ ಜೀವರಾಶಿಗಳನ್ನು ನನ್ನ ಉದರದಲ್ಲಿಯ ರೇತೋರೂಪದಿಂದ ಹೊರತೆಗೆದು ಅವಳಲ್ಲಿ ಸ್ಥಾಪಿಸುವೆ; ಬಳಿಕ, ಹೊರತೆಗೆದ ಆ ಜೀವರಾಶಿಗಳಿಗೆ ದೇಹಸಂಬಂಧವಾಗುವದೇ ಅವರ ಜನನವೆನಿಸುವದು. ಈ ವಿಷಯಕ್ಕೆ ಸೂತ್ರಕಾರರು (೨–೩–೧೮, ೨–೩–೧೯) ನೆಯ ಸೂತ್ರಗಳಲ್ಲಿ ಚನ್ನಾಗಿ ಒಡೆದು ಹೇಳಿರುವರು.

**ವಿಂ ಅಂ**—ದೇಶಕಾಲಗಳಿಂದ ಅಪರಿಚ್ಛಿನ್ನಳಾದುದರಿಂದಲೂ, ತಾನು ಮಾಡತಕ್ಕ ಕಾರ್ಯವು ಅತಿಮಹತ್ವವುಳ್ಳದ್ದರಿಂದಲೂ, ತಾನು ಮಾಡತಕ್ಕ ಕಾರ್ಯಗಳಿಗೆ ಪೃಥ್ವಿಯ ವಿಕಾರಗಳಾದ ಅನ್ನರಸಾದಿಗಳಿಂದ ಪೋಷಿಸಿ ವೃದ್ಧಿಗೊಳಿಸಿ ಕಾರಣಗಳಾಗುವದರಿಂದಲೂ, (೭–೬)ನೆಯ ಶ್ಲೋಕದಲ್ಲಿ ಹೇಳಿದಂತೆ ಚೇತನಪ್ರಕೃತಿರೂಪವು ನನಗೆ ಭಾರ್ಯಾಸ್ಥಾನವಾಗಿದೆ. ಈ ಸ್ಥಾನದಲ್ಲಿ ನನ್ನ ಚೇತನರೂಪ ಗರ್ಭವನ್ನು ನಾನಿರುಸುವೆ. ಕ್ಷೇತ್ರ–ಕ್ಷೇತ್ರಜ್ಞರ ಸಂಯೋಗವೇ ಮಾತ್ರ ಜಗದ ಹುಟ್ಟಿಗೆ

ಸ್ವತಂತ್ರ ಕಾರಣವಲ್ಲ; ಆದರೆ ಚತುರ್ಮುಖ ಮೊದಲ್ಗೊಂಡು ಸಕಲ ಜೀವರಾಶಿಗಳ ಮತ್ತು ಅವರ ದೇಹಗಳ ಉತ್ಪತ್ತಿಯು ನನ್ನಿಂದಲೇ ಆಗುವದರಿಂದ, ಚೇತನಾಚೇತನ ಪ್ರಕೃತಿಗಳು ನನ್ನಾಧೀನವಾಗಿವೆ.

೪. ಆದಿಸೃಷ್ಟಿಯಲ್ಲಷ್ಟೇ ಪರಮಾತ್ಮ ಮತ್ತು ಮಹಾಲಕ್ಷ್ಮೀ ಇವರು ಪ್ರಾಣಿಗಳ ಉತ್ಪತ್ತಿಗೆ ಕಾರಣವಾಗಿರದೆ, ಯಾವಾಗಲೂ ಕಾರಣರೆಂಬುದನ್ನು ಲಕ್ಷಿಸಿ ಹೇಳುವದು:—

**सर्वयोनिषु कौंतेय मूर्तयः संभवंति याः ।**
**तासां ब्रह्म महद्योनिरहं बीजप्रदः पिता ॥ ४ ॥**

**ಅಂ**—ಕೌಂತೇಯ, ದೇವ, ಗಂಧರ್ವ, ಯಕ್ಷ, ರಾಕ್ಷಸ, ಮನುಷ್ಯ, ಪಶು, ಮೃಗ, ಪಕ್ಷಿ, ಸರ್ಪಾದಿಯೋನಿಗಳಲ್ಲಿ ಜರಾಯುಜ ( ಮಾನವ ಜನ್ಮ ), ಅಂಡಜ, ( ಪಕ್ಷಿಜನ್ಮ ), ಸ್ವೇದಜ (ತಗಣಿ, ಹೇನು ಮುಂ), ಉದ್ಭಿಜ್ಜ (ಸಸ್ಯಾದಿಗಳು), ಹೀಗೆ ನಾಲ್ಕು ವಿಧದ ಶರೀರಗಳಿಗೆಲ್ಲ ಮಹಾಲಕ್ಷ್ಮಿಯೇ ಕಾರಣಳು. ಮತ್ತು ಅವಳಲ್ಲಿ ನಾನು ಗರ್ಭವನ್ನಿರಿಸುವಮೂಲಕ ತಂದೆಯೆನಿಸುವೆ. ನಾನೇ ಆಯಾ ಯೋನಿಗಳಲ್ಲಿ ಹೊಕ್ಕು ಪ್ರಕೃತಿಯನ್ನು ಬೇರೆ ಬೇರೆ ದೇಹಗಳನ್ನಾಗಿ ವಿಕಾರಗೊಳಿಸಿ, ಅವುಗಳಿಗೆ ಚೇತನಗಳ ಸಂಬಂಧವನ್ನುಂಟುಮಾಡುವೆನು. ಅರ್ಜುನಾ, ದೇವತೆಗಳಿಗೆ ಒಡೆಯನಾದ ಇಂದ್ರನ ಅನುಗ್ರಹದಿಂದ ಕುಂತಿಯಲ್ಲಿ ನಿನ್ನ ಜನನವು ಹೇಗೋ ಹಾಗೆ, ನನ್ನ ಅನುಗ್ರಹಕ್ಕೊಳಪಟ್ಟ ಪ್ರಕೃತಿಯಿಂದಲೇ ಸಕಲ ಜಗದ ಉತ್ಪತ್ತಿ. ನನ್ನ ಅನುಗ್ರಹವೆಂದರೆ, ಚೇತನಾಚೇತನ ವರ್ಗಕ್ಕೆ ಒದಗಿಸಿಕೊಡುವ ಸಂಯೋಗವೇ ಸರಿ, ಇದಕ್ಕೇ ಕ್ಷೇತ್ರ—ಕ್ಷೇತ್ರಜ್ಞರ ಸಂಯೋಗವೆಂದು ಅರ್ಥ. ಈ ಬಗ್ಗೆ (೩—೫—೫೦)ನೆಯ ಭಾಗವತ ಶ್ಲೋಕದಲ್ಲಿ ವಿವರಣೆಯುಂಟು.

೫. ಈ ಮೇರೆಗೆ ಹಿಂದೆ ೨೬ನೆಯ ಶ್ಲೋಕದಲ್ಲಿ ಹೇಳಿರುವದನ್ನೇ ಹಿಂದಣ ಎರಡು ಶ್ಲೋಕಗಳಿಂದ ವರ್ಣನೆ. ತಾನು ಬದ್ಧನೆಂದು ತಿಳಿದ ಪ್ರಾಣಿಯೇ ಬಂಧನನಿವಾರಣೆಗೆ ಅವಶ್ಯವಿರುವ ಸಾಧನವನ್ನಾಚರಿಸುವನು. ಆದುದರಿಂದ, ಬಂಧನನಾಶಕ್ಕೆ ಬೇಕಾದ ಸಾಧನಾನುಷ್ಠಾನವನ್ನು ತಿಳಿಸಲೋಸುಗ ಗುಣತ್ರಯುಗಳಿಂದಾದ ಬಂಧನಪ್ರಕಾರವನ್ನು ಹೇಳುವನು·—

**सत्त्वं रजस्तम इति गुणाः प्रकृतिसंभवाः ।**
**निबध्नंति महाबाहो देहे देहिनमव्ययम् ॥ ५ ॥**

**ಅಂ**—ಮಹಾಬಾಹೋ, ಸತ್ವ—ರಜ—ತಮ ಈ ಮೂರು ಗುಣಗಳು ಜಡಪ್ರಕೃತಿಯ ಅಂಶಗಳು. ಸೃಷ್ಟಿಕಾಲದಲ್ಲಿ ಇವು ಚಿತ್ಪ್ರಕೃತಿಯಾದ ಲಕ್ಷ್ಮೀದೇವಿಯಿಂದ ವಿಂಗಡಿಸಲ್ಪಟ್ಟು, ಸೃಷ್ಟಿ, ಸ್ಥಿತಿ, ಸಂಹಾರಾದಿ ಕಾರ್ಯಗಳನ್ನು ಮಾಡುವದರಿಂದ, ಅವುಗಳಿಗೆ ಸತ್ವ—ರಜ—ತಮಸ್ಸೆಂಬ ಸಂಜ್ಞೆಗಳು ಕ್ರಮವಾಗಿ ಬಂದಿರುವವು. ಈ ಮೂರು ಗುಣಗಳಿಗೆ ಶ್ರೀ, ಭೂ, ದುರ್ಗಾ, ಇವರು ಅಭಿಮಾನಿ ದೇವತೆಗಳು. ಈ ಮೂವರು ದೇವಿಯರು ದೇಹದಲ್ಲಿ ವಾಸವಾಗಿರುವ ಮತ್ತು ಸ್ವರೂಪದಿಂದ ನಾಶವಿಲ್ಲದ ಜೀವಸಮುದಾಯುವನ್ನು ಬಂಧಿಸುವರು. ಹೀಗೆ ಮೇಲ್ಕಾಣಿಸಿದ ಮೂವರಿಂದ ಈ ಜೀವಕೋಟಿಯು ಬದ್ಧವಾಗಿದ್ದರೂ, ಸತ್ವಾಭಿಮಾನಿಯಾದ ಶ್ರೀದೇವಿಯು ದೇವತೆಗಳನ್ನೂ, ರಜೋಭಿಮಾನಿಯಾದ ಭೂದೇವಿಯು ಮನುಷ್ಯರನ್ನೂ, ತಮೋಭಿಮಾನಿಯಾದ ದುರ್ಗಾದೇವಿಯು ದೈತ್ಯರನ್ನೂ, ಬಂಧಿಸುವರೆಂದು ತಿಳಿಯತಕ್ಕದ್ದು. ಇಲ್ಲಿ ' ದೇಹದಲ್ಲಿ' ಎಂದು ಹೇಳಿದ್ದರಿಂದ ಮುಕ್ತರಿಗೂ ದೇಹವಿರುವ ಮೂಲಕ ಅವರು ಈ ಗುಣಗಳಿಗೆ ಬದ್ಧರಾಗಲಾರರು.

**ವಿಂ ಅಂ**—ಸತ್ವ, ರಜ, ತಮ ಈ ಮೂರು ಗುಣಗಳು ಪ್ರಕೃತಿಯಿಂದ ಹುಟ್ಟುವವು. ಗುಣಗಳ ಸಾಮ್ಯಾವಸ್ಥೆಗೆ ಪ್ರಕೃತಿಯೆಂದು ಹೆಸರು. ಅವು ವಿಷಮಗೊಂಡರೆ, ಪ್ರಕೃತಿಜನ್ಯ ಗುಣಗಳೆನಿಸುವವು. ಇವು ಪಾಶದಂತಿರುವವು. ಇವುಗಳು ಕಾರ್ಯರೂಪವಾದ ದೇಹದಲ್ಲಿ ವಾಸ ಮಾಡಿದ ಮತ್ತು ಸ್ವರೂಪದಿಂದ ವಿಕಾರವಿಲ್ಲದ ಜೀವಸಮುದಾಯವನ್ನು ಬಂಧಿಸುವವು; ಅಂದರೆ, ಅದರಲ್ಲಿ ತಮ್ಮ ಕಾರ್ಯಗಳಾದ ಸುಖ–ದುಃಖ–ಮೋಹಾದಿಗಳ ವಿಕಾರವನ್ನು ಹುಟ್ಟಿಸುವವು. ಈ ಬಗೆಯಾಗಿ, ಜೀವದ ದೇಹ, ಅದರ ಧರ್ಮ ಮತ್ತು ಅದರಿಂದಾಗುವ ಕರ್ಮಗಳಲ್ಲಿ 'ನಾನು, ನನ್ನದು' ಎಂಬ ಅಭಿಮಾನವನ್ನುಂಟುಮಾಡಿ, ಸುಖ, ದುಃಖ, ಜನ್ಮ, ಮರಣ, ಇವುಗಳಿಗೆ ಅದನ್ನು ಗುರಿಯಾಗಿ ಮಾಡಿ, ಕೊನೆಗೆ ಅದನ್ನು ನಾಶಗೊಳಿಸುವವು. ಅರ್ಜುನಾ, ನೀನು ಮಹಾಬಾಹು ವಾದಾಗ್ಯೂ, ಈ ಗುಣಬಂಧನವನ್ನು ನಾಶಗೊಳಿಸಲು ಶಕ್ತನಲ್ಲ. ಪ್ರಕೃತಿಯು ತಾನು ಹುಟ್ಟಿಸಿದ ಜೀವವನ್ನು ಸತ್ವಾದಿ ಗುಣಗಳ ಬಂಧನದಿಂದ ತನ್ನ ವಶಕ್ಕೆ ತೆಗೆದುಕೊಂಡು ಸಂಸಾರಕ್ಕೆ ನೂಕುವದು. ಮನುಷ್ಯನು ಸ್ವತಂತ್ರನಾದಾಗ್ಯೂ, ತನ್ನ ಅಪರಾಧಗಳ ಮೂಲಕ ಅನ್ಯರಿಗೆ ಆಧೀನನಾಗುವನು. ಆಗ ಅವರು ಅವನನ್ನು ತಮ್ಮ ಪಾಶಗಳಿಂದ ಬಂಧಿಸಿ, ಅಪರಾಧಕ್ಕೆ ಸರಿಯಾಗಿ ಅವನನ್ನು ಹಿಂಸಿಸು ವಂತೆ, ಪ್ರಕೃತಿಯು ಕೂಡ ಕರ್ಮಕ್ಕನುಸರಿಸಿ ಸಂಸಾರಕ್ಕೆ ಬಂದ ಜೀವವನ್ನು ತನ್ನ ಮೂರು ಗುಣ ಗಳಿಂದ ಕಟ್ಟಿ (೧೩–೨೨)ನೆಯ ಶ್ಲೋಕದಲ್ಲಿ ಉಕ್ತವಾಗಿರುವಂತೆ ಅದನ್ನು ವಿವಿಧಯೋನಿಗಳಲ್ಲಿ ಹುಟ್ಟಿಸಿ, ಹಿಂಸೆಪಡಿಸುವದು; ಆದುದರಿಂದ ಮೋಕ್ಷಕ್ಕಾಗಿ ಮಹಾ ಪ್ರಯತ್ನವನ್ನು ನಡಿಸತಕ್ಕದ್ದು.

೬. ಶ್ರೀ ಕೃಷ್ಣಾ, ಶ್ರೀ, ಭೂ, ದುರ್ಗಾ, ಈ ದೇವಿಯರಿಂದ ದೇವಾದಿ ಮೂರು ಬಗೆಯ ಜೀವರಾಶಿಗಳು ಕಟ್ಟಲ್ಪಡುವವೆಂದು ಹಿಂದೆ ಹೇಳಿರುವಿ. ಆದರೆ, ಅವರು ಯಾರನ್ನು ಯಾವ ಯಾವ ಗುಣಗಳಿಂದ ಬಂಧಿಸುವರೆಂಬುದನ್ನು ದಯವಿಟ್ಟು ಹೇಳುವಿಯಾ ? ಎಂದು ಪ್ರಶ್ನೆಮಾಡಿದ್ದಕ್ಕೆ ಮೂರು ಶ್ಲೋಕಗಳಿಂದ ಹೇಳಿದ್ದು:—

**तत्र सत्त्वं निर्मलत्वात्प्रकाशकमनामयम् ।**
**सुखसंगेन बध्नाति ज्ञानसंगेन चानघ ॥ ६ ॥**

**ಅಂ**—ಹಿಂದೆ ಹೇಳಿದ ಮೂರು ಗುಣಗಳಲ್ಲಿ ಸತ್ವ ಅಂದರೆ ಸತ್ವಕ್ಕೆ ಅಭಿಮಾನಿಯಾದುದರಿಂದ **ಶ್ರೀತತ್ವವು** ಶುದ್ಧವೂ, ಪ್ರಕಾಶಪಡಿಸುವದೂ, ವ್ಯಾಧಿ ಮುಂತಾದವುಗಳಿಂದ ಶೂನ್ಯವೂ, ಇದೆ. ಅದು ತತ್ವಜ್ಞಾನವನ್ನುಂಟುಮಾಡಿ, ಸುಖಭೋಗದಿಂದಲೂ, ತತ್ವಜ್ಞಾನದಿಂದಲೂ, ದೇವತೆಗಳನ್ನು ಬಂಧಿ ಸುವದು.

**ವಿಂ ಅಂ**—ಪಾಪವಿಲ್ಲದವನೇ, ಮೂರು ಗುಣಗಳಲ್ಲಿ ಸತ್ವವು ಸ್ಫಟಿಕಮಣಿಯಂತೆ ಸ್ವಚ್ಛ ವಾಗಿದೆ. ಆದುದರಿಂದ ಅದು ಪ್ರಕಾಶವುಳ್ಳದ್ದು, ಅಂತೆಯೇ, ಅದು ಜ್ಞಾನವನ್ನು ಹುಟ್ಟಿಸುವದು; ದುಃಖರಹಿತವಾದುದರಿಂದ ಸುಖವನ್ನುಂಟುಮಾಡುವದು; ಈ ಗುಣವು ಸುಖವನ್ನೂ, ಜ್ಞಾನವನ್ನೂ ಕೊಟ್ಟು, ಜೀವದಲ್ಲಿ 'ನಾನು ಸುಖಿಯು, ನಾನು ಜ್ಞಾನಿಯು' ಎಂಬ ಅಭಿಮಾನವನ್ನು ಪುಟ್ಟಿಸಿ ಅದನ್ನು ತನ್ನ ಕಟ್ಟಿಗೆ ಸಿಲುಕಿಸುವದು. ಇನ್ನು, ನಿರ್ಮಲ, ಪ್ರಕಾಶ, ವ್ಯಾಧಿಶೂನ್ಯವಾದ ಈ ಸತ್ವ ಗುಣವು ಜೀವವನ್ನು ಬಂಧಿಸುವದೆಂದು ಹೇಳಿದ್ದು ಸರಿಯೇ ? ಅದರಂತೆ ಸತ್ವಾದಿ ಮೂರು ಗುಣ ಗಳು ಜೀವಸಮುದಾಯವನ್ನು ಕಟ್ಟುವವೆಂದು ಸಾಮಾನ್ಯವಾಗಿ ಹೇಳಿದ್ದು ಯುಕ್ತವೇ ? ಹೇಗೆಂದು ಪ್ರಶ್ನೆಮಾಡಿದರೆ, ಸತ್ವಗುಣವು ತನ್ನ ಕಾರ್ಯಗಳಾದ ಸುಖ–ಜ್ಞಾನಗಳನ್ನು ಪ್ರಾಣಿಗಳಲ್ಲಿ ಹುಟ್ಟಿಸಿ, 'ನಾನು ಸುಖಿಯು, ನಾನು ಜ್ಞಾನಿಯು, ಇದು ನನಗೆ ಸುಖಸಾಧನವು' ಇವೇ ಮೊದಲಾದ

ಅಹಂಮಮತೆಗಳ ಮೂಲಕ ಕಟ್ಟಿಹಾಕುವದು. ಸತ್ವಗುಣಕಾರ್ಯವೇ ದಯೆಯು; ಅದನ್ನುಳ್ಳದ್ದರಿಂದಲೇ ಪರಮಸಾತ್ವಿಕನೆನಿಸಿದ ಜಡಭರತನು ಜಿಂಕೆಯ ಮರಿಯಲ್ಲಿ ಆಸಕ್ತಿಯುಳ್ಳವನಾಗಿ ಅದನ್ನು ನೆನಿಸುತ್ತಲೇ ತನ್ನ ದೇಹಬಿಟ್ಟದ್ದರಿಂದ ಜಿಂಕೆಯಾಗಿಯೇ ಹುಟ್ಟಿದ್ದು ಭಾಗವತ (೫-೮) ದಲ್ಲಿ ಹೇಳಲ್ಪಟ್ಟದೆ. ಪರಮಸಾತ್ವಿಕನಾದಾಗ್ಯೂ, ಅವನಿಗೆ ಅಂತಹ ದುಃಸ್ಥಿತಿಯು ಪ್ರಾಪ್ತವಾಯಿತು. ಆದುದರಿಂದ ಸತ್ವಗುಣವು ಕೂಡ ಜೀವವನ್ನು ಬಂಧಿಸುವದೆಂದು ಹೇಳಿದ್ದು ನಿಜವೆಂಬುದು ಸ್ಪಷ್ಟವಾಗುವದು. ಅರ್ಜುನಾ, ನಿಷ್ಪಾಪಿ ನೀನು; ಆದುದರಿಂದ ಪ್ರಕೃತಿಯು ನಿನ್ನನ್ನು ತನ್ನ ಗುಣಗಳಿಂದ ಕಟ್ಟಿಹಾಕಲಾರದು ಕಂಡಿಯಾ! ಅದಕ್ಕೇಕೆ ಹೆದರುವಿ ?

೭.

रजो रागात्मकं विद्धि तृष्णासङ्गसमुद्भवम् ।
तन्निबध्नाति कौंतेय कर्मसंगेन देहिनम् ॥ ७ ॥

**ಅಂ—**ಕುಂತಿಪುತ್ರನೇ, ರಜೋಗುಣವು ಕಾಮಸ್ವರೂಪಿಯು; ಅದರಿಂದ ತೃಷ್ಣೆ ( ಇದು ನನಗಾಗಲೆಂಬ ದುರಾಸೆ), ಸಂಗ (ವಿಷಯಾಸಕ್ತಿ), ಇವುಗಳು ಉದ್ಭವಿಸುವವು. ರಜೋಗುಣಕ್ಕೆ ಭೂದೇವಿಯೇ ಅಭಿಮಾನಿಯು. ಭೂತತ್ವವು ಹೀಗೆ ಸೃಷ್ಟಿಯ ಸ್ಥಿತಿಸ್ವರೂಪವೆಂದು ತಿಳಿ; ಅದು ಇಬ್ಬಗೆಯಾಗಿದೆ; ಕರ್ಮಸಂಬಂಧದಿಂದ ದೇಹಧಾರಿಯಾದ ಮನುಷ್ಯನನ್ನು ಅದು ಕಟ್ಟುವದು.

**ವಿಂ ಅಂ—**ರಜೋಗುಣವು ತನಗೆ ಸಿಗದ ವಸ್ತುವಿನ ಬಗ್ಗೆ ದುರಾಸೆಯನ್ನು ಹುಟ್ಟಿಸುವದು ಮತ್ತು ಸಿಕ್ಕದ್ದರಲ್ಲಿ ಅತ್ಯಾಸಕ್ತಿಯನ್ನುಂಟುಮಾಡುವದು; ಹೀಗೆ ಆಸೆ-ಆಸಕ್ತಿಗಳಿಂದ ಕರ್ಮಗಳಲ್ಲಿ ಆಸಕ್ತಿಯು ಬೆಳೆದು, ಅದೇ ಮುಂದೆ ಕಾರ್ಯಕ್ಕೆಳಸುವದು. ಹೀಗೆ, ಪ್ರಾಣಿಯು ಪುಣ್ಯಪಾಪರೂಪಕರ್ಮಗಳನ್ನು ಮಾಡುವದರಿಂದ ಅವುಗಳಿಗೆ ಸಾಧಕವಾದ ಯೋನಿಗಳಲ್ಲಿ ಹುಟ್ಟುವನು. ಇದುವೇ ರಜೋಗುಣದ ಬಂಧನವೆಂದು ತಿಳಿ.

೮.

तमस्त्वज्ञानजं विद्धि मोहनं सर्वदेहिनाम् ।
प्रमादालस्यनिद्राभिस्तन्निबध्नाति भारत ॥ ८ ॥

**ಅಂ—**ಭರತನೇ, ತಮಸ್ಸು ಅಜ್ಞಾನದಿಂದ ಹುಟ್ಟುವದೆಂದು ತಿಳಿ; ಅದಕ್ಕೆ ದುರ್ಗಾದೇವಿಯೇ ಅಭಿಮಾನಿಯು. ಈ ದುರ್ಗಾತತ್ವವು ದೇಹವುಳ್ಳ ಎಲ್ಲ ಪ್ರಾಣಿಗಳಲ್ಲಿ ಮಿಥ್ಯಾಜ್ಞಾನವನ್ನು ಹುಟ್ಟಿಸಲು ಕಾರಣವಾಗುವದು. ಇದಕ್ಕೆ ಎರಡು ರೂಪಗಳಿವೆ, ಪ್ರಮಾದ, ಆಲಸ್ಯ, ನಿದ್ರೆ, ಮುಂತಾದವುಗಳಿಂದ ದೈತ್ಯಯೋನಿಯವರನ್ನು ಇದು ಬಂಧಿಸುವದು.

**ವಿಂ ಅಂ—**ತಮೋಗುಣವು ವಿಪರೀತ ಜ್ಞಾನವನ್ನುಂಟುಮಾಡಿ ಪ್ರಮಾದವೆಂದರೆ ಅಕಾರ್ಯಪ್ರವೃತ್ತಿ, ಆಲಸ್ಯವೆಂದರೆ ಮೈಗಳ್ಳತನ, ನಿದ್ರೆಯೆಂದರೆ ಇಂದ್ರಿಯಗಳನ್ನು ಅಲ್ಲಾಡಿಸದಿರುವದು, ಇವುಗಳನ್ನೆಲ್ಲ ಹುಟ್ಟಿಸಿ, ದೇಹ ಧರಿಸಿದ ದೈತ್ಯನನ್ನು ಬಂಧಿಸುವದು. ಬಾಹ್ಯೇಂದ್ರಿಗಳ ವ್ಯಾಪಾರವು ನಿಂತು ಮನೋವ್ಯಾಪಾರ ನಡೆಯದಿರುವದೇ ಸ್ವಪ್ನವು; ಮನೋವ್ಯಾಪಾರ ಕೂಡ ನಿಂತಿರುವ ಸ್ಥಿತಿಯೇ ಸುಷುಪ್ತಿಯು. ಇವೆರಡು ನಿದ್ದೆಯ ಭೇದಗಳು. ಆದರೆ, ಅರ್ಜುನನೇ, ಶ್ರೇಷ್ಠಕುಲದಲ್ಲಿ ಹುಟ್ಟಿದ್ದರಿಂದ ನಿನಗೆ ನಿದ್ದೆಯೂ, ಕ್ಷತ್ರಿಯ ವೀರನಾದುದರಿಂದ ಮಿಕ್ಕ ಎರಡು ಗುಣಗಳೂ ಬಾಧಿಸಲಾರವು.

೯. ಸತ್ವಾದಿ ಗುಣಗಳು ಸುಖಾದಿಗಳನ್ನು ಹುಟ್ಟಿಸಿ, ಬಂಧಿಸುವವೆಂಬ ನಿಯಮವನ್ನೇ ದೃಢ ಪಡಿಸಿದ್ದು :—

सत्त्वं सुखे संजयति रजः कर्माणि भारत ।
ज्ञानमावृत्य तु तमः प्रमादे संजयत्युत ॥ ९ ॥

**ಅಂ**—ಸತ್ವಕ್ಕೆ ಅಭಿಮಾನಿಯಾದ ಶ್ರೀದೇವಿಯು ಸುಖವಿಷಯದಲ್ಲಿಯೂ, ರಜೋಭಿಮಾನಿಯಾದ ಭೂದೇವಿಯು ಕರ್ಮವಿಷಯದಲ್ಲಿಯೂ, ಪ್ರವೃತ್ತಿಯನ್ನುಂಟುಮಾಡುವರು. ಆದರೆ, ತಮೋಭಿಮಾನಿಯಾದ ದುರ್ಗಾದೇವಿಯು ಜ್ಞಾನವನ್ನು ಮುಸುಕಿ ಮನಸ್ತತ್ವದ ಜ್ಞಾನಶಕ್ತಿಯನ್ನು ಪ್ರತಿಬಂಧಿಸಿ, ಅಧರ್ಮ, ಆಲಸ್ಯಾದಿಗಳಿಗೆ ಪ್ರವೃತ್ತಗೊಳಿಸುವಳು.

**ವಿಂ ಅಂ**—ಸತ್ವಗುಣವು ಸುಖಕ್ಕೂ, ರಜೋಗುಣವು ಕರ್ಮಕ್ಕೂ, ಪ್ರಾಣಿಗಳನ್ನು ಎಳೆಯುವದು, ಆದರೆ, ತಮೋಗುಣವು ಸತ್ವಗುಣದ ಕಾರ್ಯವಾದ ವಿವೇಕಜ್ಞಾನವನ್ನು ಮಸಣಿಸಿ, ಕರ್ತವ್ಯದ ಬಗ್ಗೆ ವಿಪರೀತಬುದ್ಧಿಯನ್ನು ಹುಟ್ಟಿಸಿ, ಆಲಸ್ಯ–ನಿದ್ರೆಗಳಿಗೆ ಎಳೆದೊಯ್ಯುವದು. ಅರ್ಜುನಾ, ಆದುದರಿಂದ ಸತ್ವಗುಣವು ಸುಖ, ಜ್ಞಾನಾದಿಗಳಿಗೆ ಮುಖ್ಯ ಕಾರಣವು; ಹೀಗೆ ಸದ್ಗುಣ ಪ್ರಧಾನವಾದ್ದರಿಂದ ಅದು 'ಸತ್ವ' ಶಬ್ದವಾಚ್ಯವು. ಇನ್ನು, ಕರ್ಮಕ್ಕೆ ರಜೋಗುಣವೇ ಮುಖ್ಯ ಕಾರಣವು. ರಾಗ, ದುರಾಸೆ, ಆಸಕ್ತಿ, ಇವು ಕರ್ಮಗಳಲ್ಲಿ ಆಸಕ್ತಿಯನ್ನು ಬೆಳಿಸುವವು; ಆದ್ದರಿಂದ ಇದು 'ರಜೋ' ಶಬ್ದವಾಚ್ಯವು. ಅದೇಮೇರೆಗೆ, ತಮೋಗುಣವು ಮಿಥ್ಯಾಜ್ಞಾನಕ್ಕೆ ಮುಖ್ಯ ಕಾರಣವು, ಅದು ಆಲಸ್ಯ, ನಿದ್ದೆ, ಕರ್ತವ್ಯ ಮಾಡದಿರುವದು, ವಿಸ್ಮರಣೆ, ವಿಪರೀತಕರ್ಮ, ಇವುಗಳಲ್ಲಿ ಪ್ರವೃತ್ತಿಯನ್ನುಂಟುಮಾಡುವದು; ಹೀಗೆ ತಮೋಗುಣವು ವಿವಿಧ ಕ್ಲೇಶಗಳಿಗೆ ಕಾರಣವಾದುದರಿಂದ 'ತಮಸ್' ಶಬ್ದವಾಚ್ಯವು. ಲೋಕದಲ್ಲಿ ಸ್ತ್ರೀಯರು ತಮಗೆ ಸಂಬಂಧಿಸಿದ ಪುರುಷನನ್ನು, ನೇತ್ರ ಕಟಾಕ್ಷ, ಭ್ರೂಭಂಗ, ಮಂದಹಾಸ, ವಿಲಾಸ, ಚೇಷ್ಟೆ, ಆಲಿಂಗನಾದಿಗಳಿಂದ ತಮ್ಮ ಮನದೊಲವನ್ನು ತೋರ್ಪಡಿಸಿ, ಅವನನ್ನು ಒಲಿಸಿಕೊಳ್ಳುವರು; ಮುಂದೆ ಅವನಲ್ಲಿ ದುರಾಸೆ, ಆಸಕ್ತಿಗಳನ್ನು ಹುಟ್ಟಿಸಿ, ತಮ್ಮಲ್ಲಿಟ್ಟ ಆಸಕ್ತಿಯಿಂದ ಅವನ ವಿವೇಕವನ್ನು ಕೆಡಿಸುವರು. ಈ ವಿವಿಧ ಕರ್ಮಗಳ ಶ್ರಮದಿಂದ ಅವನನ್ನು ನಿದ್ದೆ, ಆಲಸ್ಯಗಳಿಗೆ ಪರವಶನನ್ನಾಗಿ ಮಾಡಿ, ವಿಪರೀತ ಕರ್ಮಗಳಲ್ಲಿ ಆಸಕ್ತಿಯನ್ನುಂಟುಮಾಡಿ ಬಂಧಿಸುವರು. ಪ್ರಕೃತಿಯಾದರೂ ಹೀಗೆಯೇ ತಾನು ಹುಟ್ಟಿಸಿದ ಜೀವವನ್ನು ಸತ್ವಗುಣದಿಂದ ಸುಖಪಡಿಸುತ್ತ, ರಜೋಗುಣದಿಂದ ಕರ್ಮಮಾಡಿಸುತ್ತ, ತಮೋಗುಣದಿಂದ ವಿವೇಕಜ್ಞಾನವನ್ನು ಮರೆಮಾಡಿ, ವಿಪರೀತಜ್ಞಾನವನ್ನು ಹುಟ್ಟಿಸಿ, ನಿದ್ದೆ ಆಲಸ್ಯಗಳಿಂದ ವಿವಶನನ್ನಾಗಿ ಮಾಡಿ, ವಿಪರೀತ ಕರ್ಮಪ್ರವೃತ್ತಿಯಿಂದ ಬಂಧಿಸುವದು. ಆದುದರಿಂದ ಸ್ತ್ರೀಸಂಗವು ಹೇಗೋ ಹಾಗೆ, ಪ್ರಕೃತಿಸಂಬಂಧವು. ಈ ಸಂಬಂಧವು ಗುಣಕ್ಕೆ ಕಾರಣವಾಗಿ, ದೋಷಕ್ಕೆ ಕಾರಣವಾಗದಂತೆ ಪ್ರಾಣಿಗಳು ಎಚ್ಚರಗಡೆ ನಡಿಸತಕ್ಕದ್ದು. ಹಿಂದೆ (೧೩–೨೨) ನೆಯ ಶ್ಲೋಕದಲ್ಲಿ ಹೇಳಿದಂತೆ, ಪ್ರಕೃತಿಯು ದೇಹವುಳ್ಳ ಅಜ್ಞಾನಿಯನ್ನಷ್ಟೇ ಬಂಧಿಸುವದೆಂತಲ್ಲ, ಆದರೆ, ಪರೋಕ್ಷದಿಂದ ಪರಬ್ರಹ್ಮನನ್ನು ತಿಳಿದ ಬ್ರಹ್ಮಜ್ಞಾನಿಯನ್ನು ಕೂಡ. ಅದರಲ್ಲಿ ಸತ್ವದಿಂದ ಐಹಿಕ–ಸ್ವರ್ಗಾದಿಸುಖಗಳಲ್ಲಿ ಆಸಕ್ತಿ ಹೆಚ್ಚಿಸಿ, ಪರಬ್ರಹ್ಮನ ಅಪರೋಕ್ಷಜ್ಞಾನ, ಅದರಿಂದುಂಟಾಗುವ ಸುಖಾನುಭವ, ಇವುಗಳಿಂದ ಭ್ರಷ್ಟನನ್ನಾಗಿ ಮಾಡುವದು. ರಜೋಗುಣದಿಂದ ಕರ್ಮದಲ್ಲಿ ಆಸಕ್ತಿಯನ್ನು ಹುಟ್ಟಿಸಿ, ಸ್ವರೂಪಾನಂದದಿಂದ ಚ್ಯುತನನ್ನಾಗಿ ಮಾಡಿ ಕರ್ಮಠನನ್ನೂ, ತಮೋಗುಣದಿಂದ ಜ್ಞಾನವನ್ನು ಮುಸುಕಿ, ನಿದ್ರಾ ಆಲಸ್ಯಗಳ ಪರವಶತೆಯಿಂದ ಬ್ರಹ್ಮನಿಗೆ ವಿಮುಖನನ್ನೂ ಆಗಿಸುವದು. ಆದ್ದರಿಂದ ಬ್ರಹ್ಮಾಪರೋಕ್ಷ, ಸಾಕ್ಷಾತ್ಕಾರಗಳ ಸುಖಬಯಸುವವನು ಪ್ರಕೃತಿಯ ಗುಣಗಳಿಂದಾಗುವ ಕಾರ್ಯಗಳನ್ನು ಮೀರಿ

ನಿಲ್ಲಲು ಯುಕ್ತಿಸತಕ್ಕದ್ದು. ಈ ವಿಷಯಕ್ಕೆ ಹಿಂದೆ (೩-೩೯, ೪೦, ೪೧, ೫-೨೩) ಈ ಶ್ಲೋಕಗಳಲ್ಲಿ ಹೇಳಿಯದೆ.

೧೦. ಇನ್ನು, ಮೂರು ಗುಣಗಳ ಬಂಧನೆಯು ಒಂದೇಸಮವಾಗಿದ್ದರೂ, ಲೋಕದಲ್ಲಿ ಒಂದೇ ಗುಣದ ಕಾರ್ಯವು ಕಂಡುಬರುವದಲ್ಲ! ಎಂದು ಪ್ರಶ್ನಮಾಡಿದರೆ, ಅವುಗಳಲ್ಲಿ ಒಂದರ ಹೆಚ್ಚಳದಿಂದ ಅದರ ಕಾರ್ಯವು ಕಂಡುಬರುವ ಬಗ್ಗೆ ಮುಂದೆ ಹೇಳುವದು:—ಅಥವಾ, ಅರ್ಜುನನು "ಪ್ರಕೃತಿಯ ಬಂಧನವು ಯಾವಾಗಲೂ ಇರುವದಷ್ಟೆ? ಮತ್ತು ಅದರಲ್ಲಿ ಹಿಂದೆ ಹೇಳಿದ ಮೂರು ಗುಣಗಳು ಅನುಸ್ಯೂತವಾಗಿ ಇದ್ದಿರಲಿಕ್ಕೇಬೇಕು; ಇದ್ದಮೇಲೆ ಅವು ಹೇಗೆ ಸುಮ್ಮನಿರುವವು? ಹೆರಳಿನ ಕಾಲುಗಳಂತೆ ಮೂರೂ ಗುಣಗಳು ಒಂದುಗೂಡಿ ತಮ್ಮ ಕಾರ್ಯ ನಡಿಸಿದರೆ, ಅವುಗಳಿಂದ ಒಟ್ಟು ಒಂದೇ ಪರಿಣಾಮವಾಗಬೇಕಲ್ಲವೇ? ಅಂದಮೇಲೆ, ಅದು ಒಂದರ ಕಾರ್ಯವೆನಿಸುವದು. ಏಕೆಂದರೆ, ಮೂರು ಗುಣಗಳ ಕಾರ್ಯಗಳು ಪರಸ್ಪರ ವಿರುದ್ಧವಾಗಿವೆ; ಹೇಗಂದರೆ, ಬೆಳಕು-ಕತ್ತಲೆ, ಜ್ಞಾನ-ಅಜ್ಞಾನ, ಪ್ರವೃತ್ತಿ-ಅಪ್ರವೃತ್ತಿ, ಸುಖ-ದುಃಖ, ಉದ್ಯೋಗ-ನಿದ್ರೆ, ಇವುಗಳು. ಅಂದಬಳಿಕ ಆಯಾ ಗುಣಗಳು ತಮ್ಮ ತಮ್ಮ ಕಾರ್ಯಗಳನ್ನು ಹೇಗೆ ಜರುಗಿಸುವವು?" ಎಂದು ಕೇಳಿದ್ದಕ್ಕೆ ಶ್ರೀಕೃಷ್ಣನು ಉತ್ತರಿಸಿದ್ದು:—

**रजस्तमश्चाभिभूय सत्त्वं भवति भारत ।**
**रजः सत्त्वं तमश्चैव तमः सत्त्वं रजस्तथा ॥ १० ॥**

**ಅ೦**—ಭರತಕುಲಭೂಷಣನೇ, ಸತ್ವಗುಣವು ಪರಮಾತ್ಮನ ಇಚ್ಛೆಗನುಸರಿಸಿ ಹೆಚ್ಚು ಪ್ರಬಲವಾಗಿ ರಜಸ್ತಮೋಗುಣಗಳನ್ನು ಹತ್ತಿಕ್ಕಿ ತನ್ನ ಕಾರ್ಯವನ್ನೇ ಮಾಡಲು ಸಮರ್ಥವಾಗುವದು. ಅದರಂತೆ ರಜೋಗುಣವು ಪರಮಾತ್ಮನಿಚ್ಛೆಯಿಂದ ಬಲಿಷ್ಠವಾಗಿ ಸತ್ವ-ತಮಸ್ಸುಗಳನ್ನೂ, ತಮೋಗುಣವು ಬೀಗಿ ಬೆಳೆದು ರಜ-ಸತ್ವಗುಣಗಳನ್ನೂ ಕೆಳಗೆ ಮೆಟ್ಟಿ ತಮ್ಮ ತಮ್ಮ ಕಾರ್ಯಗಳನ್ನು ನಡಿಸುವವು. ಒಂದೊಂದು ಗುಣವನ್ನು ಹಿಮ್ಮೆಟ್ಟಿಸುವದು ಇದೀಗ ಗುಣಗಳ ಕಾರ್ಯವು. ಈ ಕಾರ್ಯಗಳಲ್ಲಿ ದೇವಾದಿಗಳು ಉದಾಸೀನರಾಗಿರುವರು.

**ವಿಂ ಅಂ**—ಪ್ರಾಣಿಗಳು ಹಿಂದೆ ಮಾಡಿದ ಶುಭಾಶುಭಕರ್ಮಗಳಿಗೂ, ಪರಮಾತ್ಮನ ನಿಗ್ರಹಾನುಗ್ರಹಗಳಿಗೂ, ದೇಹದ ಪೋಷಣೆಗಾಗಿ ವಿಧಿಸಿದ ಆಹಾರಭೇದಗಳಿಗೂ, ಅನುಸರಿಸಿ ಗುಣಗಳಿಗೆ ಪ್ರಾಪ್ತವಾಗುವ ಈ ವೃದ್ಧಿ-ಹ್ರಾಸಗಳು ಸಂಭವಿಸುವವು. ಆದುದರಿಂದ ಆಯಾ ಗುಣಗಳು ತಮ್ಮ ತಮ್ಮ ಕಾರ್ಯಗಳನ್ನು ಮಾಡುವವೆಂದು ಹೇಳಿದ್ದು ಸರಿ.

೧೧. ಸತ್ವಾದಿ ಗುಣಗಳ ವೃದ್ಧಿಯಾಯಿತೆಂದು ತಿಳಿಯುವದೆಂತು? ಎಂದು ಪ್ರಶ್ನಮಾಡಿದ್ದಕ್ಕೆ ಸಮಾಧಾನ ಹೇಳಿದ್ದು:—

**सर्वद्वारेषु देहेऽस्मिन्प्रकाश उपजायते ।**
**ज्ञानं यदा तदा विद्याद्विवृद्धं सत्त्वमित्युत ॥ ११ ॥**

**ಅ೦**—ಈ ದೇಹದ ದ್ವಾರಗಳಾದ ಕಿವಿ ಮೊದಲಾದವುಗಳಲ್ಲಿ ಜ್ಞಾನ, ಸ್ವರೂಪ, ಪ್ರಕಾಶ, ಸುಖಗಳು ಯಾವಾಗ ಬೆಳಗುವವೋ ಆಗ ಸತ್ವಗುಣ ವೃದ್ಧಿಯಾಯಿತೆಂದು ತಿಳಿಯಬೇಕು.

**ವಿಂ ಅಂ**—ಮುಂದೆ (೧೫-೯) ನೆಯ ಶ್ಲೋಕದಲ್ಲಿ ಹೇಳುವಂತೆ ಈ ದೇಹದಲ್ಲಿ ಕಿವಿ, ಕಣ್ಣು, ನಾಲಿಗೆ, ಮೈ, ಮೂಗುಗಳೆಂಬಿವು ಅಂತಃಕರಣದ ಪ್ರವೃತ್ತಿದ್ವಾರಗಳು. ಈ ದ್ವಾರಗಳಿಂದ ಇಂದ್ರಿ

ಯುಗಳಲ್ಲಿ ಆಯಾ ವಿಷಯುಗಳ ಯಥಾರ್ಥಜ್ಞಾನ, ಪ್ರಕಾಶ, ಮತ್ತು ಸುಖವು ಬೆಳಗಿದಾಗ ಇದೇ ದೇಹದಲ್ಲಿ ಸತ್ವಗುಣದ ಹೆಚ್ಚಳವಾಯಿತೆಂದು ತಿಳಿಯತಕ್ಕದ್ದೇ ಹೊರ್ತು ಅನ್ಯ ದೇಹದಲ್ಲಿ ಅಲ್ಲ ಹಾಗಾದರೆ, ಒಬ್ಬನಿಗೇ ಒಂದೇ ಕಾಲಕ್ಕೆ ಅನೇಕ ದೇಹಗಳು ಸಂಭವಿಸುವವೋ? ಹೇಗೆಂದು ಕೇಳಿದರೆ, ಅದಕ್ಕೆ ಅಹುದು; ಯೋಗಸಾಮರ್ಥ್ಯದಿಂದ ಒಂದೇ ಸಲಕ್ಕೆ ಹಲವು ದೇಹಗಳನ್ನು ತೊಟ್ಟ ಸೌಭರಿಯೇ ಇದಕ್ಕೆ ದೃಷ್ಟಾಂತನು, ಹೀಗಿದ್ದರೂ, ಆತನು ತೊಟ್ಟ ಎಲ್ಲ ದೇಹಗಳಲ್ಲಿ ಒಂದೇ ಕಾಲಕ್ಕೆ ಒಂದೇ ಗುಣವು ವೃದ್ಧಿಯಾಯಿತೆಂದು ಹೇಳಲಿಕ್ಕಾಗದು. ಆದುದರಿಂದ, ಮೇಲಿನ ಶ್ಲೋಕದಲ್ಲಿ 'ಈ ದೇಹದಲ್ಲಿ' ಎಂದು ಹೇಳಿ ಇದೆ. ಇಲ್ಲಿ सर्वद्वा एषु ಹೀಗೆ ಪದಚ್ಛೇದ ಮಾಡಬೇಕು. ಪ್ರಕಾಶರೂಪ ಜ್ಞಾನವೇ ಸರ್ವಕಾರ್ಯಗಳಿಗೆ ಆಧಾರ; ಜ್ಞಾನವಿಲ್ಲದೆ ಯಾವ ಕಾರ್ಯವೂ ಜರಗದು. ತಿಳಿದು, ಬಯಸಿ, ಯತ್ನಿಸುವದು ಜಗದಲ್ಲಿಯ ವಾಡಿಕೆಯು. ಈ ಕಾರ್ಯಗಳು ಯಾವ ಗುಣದಲ್ಲಿ ಕಾಣುವವೋ ಅದು ಆಗ ವೃದ್ಧಿಯಾಯಿತೆಂದು ತಿಳಿಯುತಕ್ಕದ್ದು.

೧೨.

**लोभः प्रवृत्तिरारंभः कर्मणामशमः स्पृहा ।**
**रजस्येतानि जायंते विवृद्धे भरतर्षभ ॥ १२ ॥**

**ಅಂ**—ಭರತಕುಲಲಲಾಮನೇ, ರಜೋಗುಣದ ಹೆಚ್ಚಳವಾದಾಗ ಲೋಭ (ಧನ ಮುಂತಾದವುಗಳನ್ನು ತ್ಯಾಗಮಾಡದಿರುವದು), ಪ್ರವೃತ್ತಿ (ಹಾಳು ಕೆಲಸ), ಆರಂಭ (ಕಾಮ್ಯಕರ್ಮಗಳನ್ನು ಮಾಡುವದು), ಅಶಮಃ (ಚಿತ್ತಶಾಂತವಿಲ್ಲದಿರುವದು), ಸ್ಪೃಹಾ (ಇಲ್ಲದ್ದರ ಆಸೆ), ಈ ಗುಣಗಳು ಮೂಡುವವು; ಅದರಿಂದಲೇ ರಜೋಗುಣದ ಹೆಚ್ಚಳವೆಂದು ಭಾವಿಸತಕ್ಕದ್ದು. ಲೋಭವೆಂದರೆ, ತನ್ನಲ್ಲಿ ಬಹು ದ್ರವ್ಯವಿದ್ದಾಗ್ಯೂ, ಅದನ್ನೇ ಮತ್ತೆ ಬೆಳಿಸುವ ಅಭಿಲಾಷೆ, ಅಥವಾ ಯೋಗ್ಯ ದೇಶ, ಕಾಲ, ಪಾತ್ರಗಳಲ್ಲಿ ಹಣ ವೆಚ್ಚಮಾಡದಿರುವದು ಅಥವಾ ನ್ಯಾಯದಿಂದಾಗಲಿ, ಅನ್ಯಾಯದಿಂದಾಗಲಿ, ಪರಧನವನ್ನು ಅಪಹರಿಸುವ ಅಪೇಕ್ಷೆ. ಪ್ರವೃತ್ತಿಯೆಂದರೆ, ಆಗದ ನೀಗದ ಹಾಳು ಕೆಲಸವನ್ನು ಕೈಕೊಳ್ಳುವದು. ಆರಂಭವೆಂದರೆ, ಕಾಮ್ಯ ಮತ್ತು ನಿಷಿದ್ಧಕರ್ಮಗಳನ್ನಾರಂಭಿಸುವದು. ಇಲ್ಲಿ 'ಆರಂಭ'ವೆಂದು ಹೇಳಿದ್ದರಿಂದ ಒಂದಾದರೂ ಕಾರ್ಯ ಮುಗಿದಿಲ್ಲವೆಂದು ಅರ್ಥ.

೧೩.

**अप्रकाशोऽप्रवृत्तिश्च प्रमादो मोह एव च ।**
**तमस्येतानि जायंते विवृद्धे कुरुनंदन ॥ १३ ॥**

**ಅಂ**— ತಮೋಗುಣವು ಬೆಳೆಯಲು ಶ್ರೋತ್ರಾದಿ ಜ್ಞಾನೇಂದ್ರಿಯಗಳಲ್ಲಿ ಜ್ಞಾನ ಹುಟ್ಟದಿರೋಣ, ಅಪ್ರವೃತ್ತಿಯೆಂದರೆ ಕೆಲಸ ಮಾಡದಿರೋಣ, ಪ್ರಮಾದವೆಂದರೆ ಅಲಕ್ಷ್ಯದಿಂದ ಕಾರ್ಯ ಮಾಡೋಣ, ಮೋಹವೆಂದರೆ ವಿಪರೀತಜ್ಞಾನ, ಇವುಗಳೆಲ್ಲ ಎದ್ದು ಕಾಣಿಸೋಣವು, ಇದುವೇ ತಮೋಗುಣ ವೃದ್ಧಿಯ ಲಕ್ಷಣವು.

**ವಿಂ ಅಂ** ಅಪ್ರಕಾಶ ಅಂದರೆ ಆಯಾ ವಿಷಯುಗಳ ಜ್ಞಾನವಿಲ್ಲದಿರುವದು, ಅಪ್ರವೃತ್ತಿ ಅಂದರೆ ಮೈಗಳ್ಳತನ ಇಲ್ಲಿ ಚ ಕಾರದಿಂದ ನಿದ್ರೆ ಎಂದು ತಿಳಿಯತಕ್ಕದ್ದು. ಸತ್ವಾದಿ ಗುಣಗಳ ವೃದ್ಧಿಯ ಜ್ಞಾನವನ್ನು ಕುರಿತು ಮೇಲೆ ಲಕ್ಷಣಗಳನ್ನು ಹೇಳಿದ್ದಾಯಿತು, ಆದರೆ, ಇವುಗಳಿಂದ ಗುಣಗಳ ವೃದ್ಧಿಯನ್ನು ತಿಳಿಯುವ ಕಾರಣವೇನೆಂದು ಕೇಳಿದರೆ, ಆಯಾ ಗುಣಗಳ ಗುಣದೋಷಗಳ ಜ್ಞಾನವಾಗಲು

'ನಾನು ಈಗ ತಾಮಸನು, ರಾಜಸನು' ಎಂಬುದರಿಂದ ಅವೆರಡು ಗುಣಗಳ ದೋಷಜ್ಞಾನವು ಆತನ ಮನಸಿನಲ್ಲಿ ಹೊಳೆದು, ಆ ದೋಷಗಳ ನಿವಾರಣೆಗಾಗಿಯೂ, ಸತ್ವಗುಣಪ್ರಾಪ್ತಿಗಾಗಿಯೂ, ಅವನು ಎತ್ತುಗಡೆ ನಡಿಸುವನು; ಅಂದರೆ, ಸತ್ವಾಹಾರ ಮತ್ತು ಸತ್ಸಂಗಗಳಿಂದ ಸತ್ವಗುಣವನ್ನು ಪಡೆದು ಕೊಳ್ಳುವನು.

೧೪ ಸತ್ವಾದಿಗುಣಗಳು ಬೆಳೆದ ಅವಸ್ಥೆಯಲ್ಲಿ ಮರಣವು ಒದಗಿದರೆ, ಆ ಪ್ರಾಣಿಗೆ ಪ್ರಾಪ್ತ ವಾಗುವ ಗತಿಯನ್ನು ಕುರಿತು ಮುಂದಿನ ಎರಡು ಶ್ಲೋಕಗಳಲ್ಲಿ ಹೇಳುವದು:—

**यदा सत्त्वे प्रवृद्धे तु प्रलयं याति देहभृत् ।**
**तदोत्तमविदां लोकानमलान्प्रतिपद्यते ॥ १४ ॥**

ಅಂ— ಸತ್ವಗುಣವು ಬೆಳೆದ ಕಾಲದಲ್ಲಿ ಪ್ರಾಣಿಯು ಮೃತನಾದರೆ, ಅವನು ವಿಷ್ಣುವಿಷಯಕ ಜ್ಞಾನವುಳ್ಳ ನಿರ್ಮಲವಾದ ದೇಹವನ್ನು ಹೊಂದುವನು, ಅಂದರೆ ಸಾತ್ವಿಕ ಕುಲದಲ್ಲಿ ಹುಟ್ಟುವ ನೆಂಬರ್ಥ.

ವಿಂ ಅಂ—ಅರ್ಜುನಾ, ಸತ್ವಗುಣ ಬೆಳೆಗಲು ಅದರ ಕಾರ್ಯವಾದ ಸುಖ—ಜ್ಞಾನಗಳ ಅನು ಭವವೇ ಪ್ರಯೋಜನವೆಂಬುದು ಎಲ್ಲರಿಗೂ ಗೊತ್ತಿದ್ದ ಮಾತು; ಆದರೂ, ಬೇರೊಂದು ಪ್ರಯೋಜನ ವನ್ನು ಈಗ ಹೇಳುವೆ ನಾನು. ಪರಲೋಕದಲ್ಲಿ ಸದ್ಗತಿಯಾಗಬೇಕೆಂದು ಎಲ್ಲರ ಅಪೇಕ್ಷೆ; ಆದರೆ, ಆ ಗತಿಯು ಮರಣಕಾಲಕ್ಕೆ ಸತ್ವಗುಣದ ವೃದ್ಧಿಗೆ ಅಧೀನವಾಗಿದೆ; ಆದುದರಿಂದ, ಮರಣಕಾಲದಲ್ಲಿ ಸತ್ವಗುಣವೇ ಬೆಳೆದಿರಲಿಕ್ಕೆ ಬೇಕು. ಮರಣವಂತೂ ಬಯಸದೆ ಅಕಸ್ಮಾತ್ತಾಗಿ ಬರುವದುಂಟು; ಹೊರ್ತು, ಮೊದಲು ತಿಳಿಸಿ ಬರುವಂತಹದಲ್ಲ. ಯಮನು 'ನಾನು ನಿನ್ನನ್ನೊಯ್ಯಲು ನನ್ನ ದೂತರನ್ನು ಕಳಿಸುವೆ'ನೆಂದು ಮೊದಲು ತಿಳಿಸಿರುವದಿಲ್ಲ; ಹೀಗಿದ್ದರೂ, ಮರಣವು ಪ್ರಾಣಿಗೇನೂ ತಪ್ಪಿದ್ದಲ್ಲ. ಪ್ರಾಣಿಯು ಸಾತ್ವಿಕನಾಗಿದ್ದರೆ, ಸತ್ವವೃದ್ಧಿಯ ಕಾಲದಲ್ಲಿಯೇ ಮರಣವು ಒದಗಿ ಪರಲೋಕದಲ್ಲಿ ಉತ್ತಮ ಗತಿಯಾಗುವದು; ಆದರೆ, ಯಾವ ಗತಿಯಾಗುವದೆಂದು ಕೇಳಿದರೆ, ಅದಕ್ಕೆ ಹೇಳುವೆನು. ಸತ್ವಗುಣವು ವೃದ್ಧಿಯಾಗಿರುವ ಬೇಕಾದ ಕಾಲಕ್ಕೆ ಮರಣ ಬಂದರೂ ಚಿಂತೆಯಿಲ್ಲ. ಪರಮಾತ್ಮನ ತತ್ವಬಲ್ಲವರೂ, ಜ್ಞಾನ—ಯೋಗಾಭ್ಯಾಸಿಗಳೂ, ನಿವೃತ್ತ ಕರ್ಮವನ್ನಾಚರಿಸುವವರೂ, ಆದ ಜ್ಞಾನಿ ಗಳು ನಿರ್ಮಲ ಕುಲದಲ್ಲಿ ಜನ್ಮಹೊಂದುವರು. ಈ ವಿಷಯಕ್ಕೆ (೩—೧—೨೮,೨೯) ಸೂತ್ರಗಳಲ್ಲಿ ಹೇಳಿಯಿದೆ. ಇಂಥವರ ಕುಲದಲ್ಲಿ ಹುಟ್ಟಿದವರು ಮೋಕ್ಷಸಾಧನಜ್ಞಾನ, ಅದಕ್ಕೆ ಸಾಧನವಾದ ನಿವೃತ್ತ ಕರ್ಮಗಳಿಗೆ ಅಧಿಕಾರಿಯಾಗುವರು. ಆದುದರಿಂದ ಯಾವಾಗಲೂ ಸತ್ವಗುಣವುಳ್ಳವನಾಗಿರಬೇಕಾ ದರೆ, ಆ ಗುಣದ ಬೆಳೆಗೆಯೇ ಆವಶ್ಯಕವು. ಇಲ್ಲಿ ತು ಶಬ್ದವು ಆಯಾ ಅವಸ್ಥೆಗಳಲ್ಲಿ ಮರಣದಿಂದಾ ಗುವ ಗತಿವಿಶೇಷವನ್ನು ಸೂಚಿಸುವದು.

೧೫.

**रजसि प्रलयं गत्वा कर्मसंगिषु जायते ।**
**तथा प्रलीनस्तमसि मूढयोनिषु जायते ॥ १५ ॥**

ಅಂ— ರಜೋಗುಣವು ಪ್ರವೃದ್ಧಿಯಾಗಿರಲು ಮರಣಬಂದರೆ, ಆ ಪ್ರಾಣಿಗೆ ಕಾಮ್ಯಕರ್ಮ ಮಾಡುವವರ ಕುಲದಲ್ಲಿ ಜನ್ಮಬರುವದು. ತಮೋಗುಣವು ಬೆಳೆದಾಗ ಸಾವು ಬಂದರೆ, ಆ ಪ್ರಾಣಿಯು ನಿಷಿದ್ಧ ಕರ್ಮಾಚರಿಸುವ ದೈತ್ಯಕುಲದಲ್ಲಿ ಜನಿಸುವನು. ಹೀಗೆ ರಜಸ್ತಮೋಗುಣಗಳು ಯಾವಾಗಲೂ

ಹೀನಕುಲದ ಯೋನಿಗಳಿಗೆ ಪ್ರಾಣಿಯನ್ನು ಎಳೆದೊಯ್ಯುವವು. ಪ್ರಾಣಿಗಳಿಗೆ ಪರಲೋಕದಲ್ಲುಂಟಾಗುವ ಶುಭಾಶುಭ ಗತಿಗಳು ಅವರವರ ಪುಣ್ಯಪಾಪಗಳಿಗನುಸರಿಸಿದ್ದಾಗ್ಯೂ, ಅಂತಹ ಕರ್ಮಗಳಿಗನುಸರಿಸಿ ಆಯಾ ಗುಣಗಳ ವೃದ್ಧಿಕಾಲದಲ್ಲಾಗುವ ಮರಣ ಬರುವದು. ತಮೋಗುಣದವರ ಅವಸ್ಥೆಯಾದರೂ ಹೀಗೆಯೇ.

೧೬. ಸಾತ್ವಿಕಾದಿ ಗುಣಗಳಿಂದಾಗುವ ಫಲಗಳನ್ನು ಹೇಳಿದ್ದು:—

कर्मणः सुकृतस्याहुः सात्त्विकं निर्मलं फलम् ।
रजसस्तु फलं दुःखमज्ञानं तमसः फलम् ॥ १६ ॥

ಅಂ—ವಿದ್ವಾಂಸರ ಕುಲದಲ್ಲಿ ಹುಟ್ಟಿ, ಸತ್ಕರ್ಮಮಾಡುವವನಿಗೆ ದುಃಖಲೇಶವಿಲ್ಲದ ನಿರ್ಮಲವಾದ ಸಾತ್ವಿಕಫಲವು ದೊರೆಯುವದೆಂದು ಹೇಳುವರು; ಅದರಂತೆ ರಾಜಸಕರ್ಮಿಗಳಿಗೆ ದುಃಖಮಿಶ್ರಿತ ಸುಖಫಲವೆಂತಲೂ, ತಾಮಸ ಕರ್ಮಿಗಳಿಗೆ ಅಜ್ಞಾನಫಲವೆಂತಲೂ, ಹೇಳುವರು.

ವಿಂ ಅಂ—ನಿವೃತ್ತ ಕರ್ಮಾನುಷ್ಠಾನದಲ್ಲಿ ನಿರತ ಕುಲದಲ್ಲಿ ಹುಟ್ಟಿದವನು ಫಲಾಸಕ್ತಿಯಿಲ್ಲದೆ ಸಾತ್ವಿಕಕರ್ಮ ಮಾಡುವನು; ಮತ್ತು ಅದರಿಂದ ಸತ್ವಗುಣ ಪ್ರಾಚುರ್ಯ ಮೂಲಕ ಜ್ಞಾನದಿಂದ ಹುಟ್ಟುವ ದುಃಖಸಂಬಂಧವಿಲ್ಲದ ಮೋಕ್ಷಸುಖವನ್ನನುಭವಿಸುವನು. ಕಾಮ್ಯಕರ್ಮಾನುಷ್ಠಾನದಲ್ಲಿ ನಿರತರಾದ ಕುಲದಲ್ಲಿ ಹುಟ್ಟಿದವನು ಫಲಾಸಕ್ತಿಯಿಂದ ಕಾಮ್ಯಕರ್ಮಾಚರಿಸುವನು, ಅದರಿಂದ ದುಃಖಮಿಶ್ರಿತ ಐಹಿಕಸುಖವನ್ನೂ, ಸ್ವರ್ಗಾದಿಸುಖವನ್ನೂ, ಹೊಂದುವನು. ಅದೇ ಮೇರೆಗೆ ನಿಷಿದ್ಧ ಕರ್ಮಾನುಷ್ಠಾನ ತತ್ಪರರಾದವರ ಕುಲದಲ್ಲಿ ಹುಟ್ಟಿದವನು ತಾಮಸ ಕರ್ಮಿಯಾಗಿ ಅಜ್ಞಾನಪ್ರಚುರ ಪಶ್ವಾದಿ ಯೋನಿಗಳಲ್ಲಿ ಹುಟ್ಟಿ, ನಿದ್ರೆ, ಆಲಸ್ಯಾದಿ ಸುಖಗಳನ್ನು ಪಡೆಯುವನು. ದುಃಖಮಿಶ್ರ ಸುಖವೆಂದರೆ, ದುಃಖದ ಹೆಚ್ಚಳ, ಅದರಂತೆ ಅಜ್ಞಾನ ಪ್ರಾಚುರ್ಯಮೂಲಕ ದುಃಖವೆಂದರೆ ಅಜ್ಞಾನದ ಆಧಿಕ್ಯ. ಈ ಅವಸ್ಥೆಗಳಲ್ಲಿ ಆಲಸ್ಯ, ನಿದ್ರೆ, ಇವುಗಳ ಆಧಿಕ್ಯವು ಒಂದು ವೇಳೆ ಸುಖದಂತೆ ಕಂಡಾಗ್ಯೂ. ಅವುಗಳ ಪರ್ಯವಸಾನವು ದುಃಖವೇ ಸರಿ. ಇಲ್ಲಿ ಮಾಡತಕ್ಕ ವಿವೇಕವೇನಂದರೆ, ಹಿಂದಿನ ಜನ್ಮದಲ್ಲಿ ಮಾಡಿದ ಸಾತ್ವಿಕಾದಿ ಕರ್ಮಗಳು ಪ್ರಬಲವಾಗಿದ್ದರೆ, ತಡವಾಗದೆ ಅವುಗಳ ಫಲಗಳು ದೊರೆಯುವವು; ಅವು ಪ್ರಬಲವಾಗಿರದಿದ್ದರೆ, ಆಯಾ ಯೋನಿಗಳಲ್ಲಿ ಹಿಂದೆ ನಿರೂಪಿಸಿದಂತೆ ಜನ್ಮಗಳು ಬರುವವು. ಸಾತ್ವಿಕಾದಿ ಕರ್ಮಗಳಿಗೆ ಸಾತ್ವಿಕಾದಿ ಫಲಗಳುಂಟೆಂದು ಮುಂದೆ (೧೮—೩೭, ೩೮) ಈ ಶ್ಲೋಕಗಳಲ್ಲಿ ವಿವರಿಸಲಾಗುವದು. ರಾಜಸ—ತಾಮಸ ಕರ್ಮಗಳಿಗಾಗುವ ಫಲವು ದುಃಖರೂಪವೆಂದು ಈ ಶ್ಲೋಕದಲ್ಲಿಯ ತು ಶಬ್ದವು ಸೂಚಿಸುವದು.

೧೭. ಹಿಂದಣ ಶ್ಲೋಕದಲ್ಲಿ ಹೇಳಿದ ಫಲಗಳನ್ನು ವಿಸ್ತಾರವಾಗಿ ಹೇಳಿದ್ದು:—

सत्त्वात्संजायते ज्ञानं रजसो लोभ एव च ।
प्रमादमोहौ तमसो भवतोऽज्ञानमेव च ॥ १७ ॥

ಅಂ—ಸತ್ವಗುಣದಿಂದ ಪರಾಪರತತ್ವವಿಷಯಕ ಜ್ಞಾನಹುಟ್ಟುವದು, ರಜೋಗುಣದಿಂದ ಸ್ವರ್ಗಾದಿಫಲದಲ್ಲಿ ಆಸಕ್ತಿಯಾಗುವದು, ಮತ್ತೆ ತಮೋಗುಣದಿಂದ ಪ್ರಮಾದ—ಮೋಹಗಳು ಹುಟ್ಟುವವಲ್ಲದೆ, ಅಜ್ಞಾನವೂ ಬೆನ್ನಟ್ಟುವದು.

ವಿಂ ಅಂ—ಸತ್ವಗುಣವೃದ್ಧಿಯಿಂದ ವಿವೇಕಜ್ಞಾನ ಬೆಳಗುವದು. ಅದರಿಂದ ಮೋಕ್ಷಸಾಧನವಾದ ನಿಷ್ಕಾಮಕರ್ಮಗಳಿಗೆ ಮನಸು ಎಳೆಸುವದು. ರಜೋಗುಣ ಬೆಳೆಯಲು ವಿಷಯಾಸಕ್ತಿಯು

ಬೆಳೆಯುವದೇ ಹೊರ್ತು ಸತ್ವಕಾರ್ಯದಲ್ಲಿ ಅಲ್ಲ. ಅದರಿಂದ ವಿಷಯಸುಖಾನುಭವಕ್ಕೆ ಸಾಧನವಾದ ಕಾಮ್ಯಕರ್ಮಗಳಿಗೆ ಮನಸು ಓಡುವದು. ಅದರಂತೆ ತಮೋಗುಣ ಹೆಚ್ಚಾದಾಗ ಪ್ರಮಾದ, ಮೋಹ, ನಿದ್ರೆ, ಆಲಸ್ಯಾದಿಗಳು ಬಲಿಯುವವೇ ಹೊರ್ತು ಸತ್ವ–ರಜಕಾರ್ಯಗಳಲ್ಲ. ಅದರಿಂದಲೇ ಪಶ್ವಾದಿ ಯೋನಿಗಳ ಪ್ರಾಪ್ತಿಗೆ ಸಾಧನವಾದ ನಿಷಿದ್ಧಕರ್ಮಗಳಿಗೆ ಮನಸು ಹಾರುವದು. ಅಜ್ಞಾನವು ಸಕಲ ದೋಷಗಳಿಗೆ ಮುಖ್ಯ ಕಾರಣವಾದುದರಿಂದ ಇಲ್ಲಿ ಅದನ್ನು ಬೇರೆ ಹೇಳಿದೆ. ಈ ರೀತಿಯಾಗಿ, ಆಯಾ ಫಲಗಳಿಗೆ ಸಾಧನವಾದ ಕರ್ಮಗಳನ್ನು ಮಾಡುವದರಿಂದ ಆಯಾ ಫಲಗಳು ಹುಟ್ಟುವವು.

೧೮. ಜ್ಞಾನ–ಲೋಭ–ಪ್ರಮಾದಾದಿಗಳು ಸತ್ವಾದಿಗುಣಗಳಿಂದಲೇ ನೇರವಾಗಿ ಹುಟ್ಟಿದಾಗ್ಯೂ, ಅವುಗಳ ಸ್ವರೂಪಫಲಗಳಲ್ಲ; ಆದುದರಿಂದ ಅವುಗಳಿಂದಾಗುವ ಫಲಗಳನ್ನು ಹೇಳುವದು:—

**ऊर्ध्वं गच्छंति सत्त्वस्था मध्ये तिष्ठंति राजसाः ।**
**जघन्यगुणवृत्तिस्था अधो गच्छंति तामसाः ॥ १८ ॥**

**ಅ೦**—ಸಾತ್ವಿಕರು ಜ್ಞಾನದಿಂದ ಊರ್ಧ್ವದಲ್ಲಿರುವ ಜನ–ತಪ ಮುಂತಾದ ಲೋಕಗಳನ್ನೈದುವರು. ಕಾಮ್ಯಕರ್ಮತತ್ಪರರಾದ ರಾಜಸರು ಮಧ್ಯಲೋಕವಾದ ಸ್ವರ್ಗಾದಿಗಳನ್ನು ಪಡೆಯುವರು. ಕೀಳರಾದ ತಮೋಗುಣಿಗಳು ಅದರ ಪರಿಣಾಮವಾದ ಅಜ್ಞಾನದಲ್ಲಿಯೇ ಮುಸುಕಿ, ಕೊನೆಗೆ ಅಧೋಲೋಕವಾದ ನರಕಕ್ಕೆ ಹೋಗುವರು.

**ವಿ೦ ಅ೦**—ಸತ್ವಗುಣ ಬಿಡದೆ, ಅದರಲ್ಲಿಯೇ ಮುಳುಗಿದವರು ಊರ್ಧ್ವಾದಿಲೋಕಗಳನ್ನು ಕುರಿತು ಹೋಗುವರು. ರಾಜಸರು ಮಧ್ಯಲೋಕಗಳಾದ ಸ್ವರ್ಗ–ಭೂಲೋಕಗಳಲ್ಲಿ ವಾಸಮಾಡುವರು. ಅವರಿಗೆ ಊರ್ಧ್ವ ಮತ್ತು ಅಧೋಲೋಕಗಳ ಗತಿಯಿಲ್ಲ. ತಮೋಗುಣದವರು ನರಕಭಾಗಿಯಾಗುವರು. ಅಥವಾ ಈ ಮೂರು ಗುಣದವರು ಕ್ರಮದಿಂದ ದೇವ–ಮನುಷ್ಯ–ಪಶ್ವಾದಿ ಯೋನಿಗಳಲ್ಲಿ ಹುಟ್ಟುವರು. ಆದ್ದರಿಂದ ಸತ್ವಗುಣದಲ್ಲಿಯೇ ಪ್ರವೃತ್ತಿ ಇರಬೇಕಲ್ಲದೆ, ರಜಸ್ತಮೋಗುಣಗಳಲ್ಲಲ್ಲ. ಇಲ್ಲಿ **सात्विकाः** ಎಂದು ಹೇಳದೆ **सत्त्वस्थाः** ಎಂದು ಹೇಳಿದ್ದರಿಂದ, ಸಾತ್ವಿಕಗುಣದ ಕಡೆಗೇ ಯಾವಾಗಲೂ ಪ್ರಯತ್ನಪೂರ್ವಕವಾಗಿ ಮನದೊಲವನ್ನು ಇಡಬೇಕೆಂಬುದು ಸೂಚಿತವಾಗುವದು. ರಾಜಸರಿಗೆ **जघन्यगुणवृत्तिस्था** ಎಂದು ವಿಶೇಷಣ ಕೊಟ್ಟಿದ್ದರಿಂದ ತಮೋಗುಣ ಪ್ರಾಚುರ್ಯಮೂಲಕ ನಿದ್ರೆ, ಆಲಸ್ಯವುಳ್ಳವರಿಗೆ ಸತ್ವಗುಣದವರಿಗಾಗುವ ಸುಖಫಲವಿಲ್ಲದಿದ್ದರೂ, ತಮೋಗುಣಿಗಳಿಗೊದಗುವ ಪೂರ್ಣಫಲವಾದ ನರಕವಿಲ್ಲ; ಆದರೆ, ಅದೇ ವಿಶೇಷಣವು ತಾಮಸನಿಗೂ ಹತ್ತುವದರಿಂದಲೂ, ಅವರು ಸದಾ ತಾಮಸಕರ್ಮದಲ್ಲಿಯೇ ತೊಡಗಿದವರಾದ್ದರಿಂದಲೂ, ಅವರಿಗೆ ನರಕವು ಕಟ್ಟಿಟ್ಟದ್ದೇ ಸರಿ. ಹೇಗಂದರೆ, ಕೀಳಾದ ಗುಣವೃತ್ತಿಯುಳ್ಳ ತಾಮಸರು ಜೂಜು, ಕಳವು ಮುಂತಾದವುಗಳಿಂದ ಜೀವಿಸುವದರಿಂದ ಅವರಿಗೆ ಅಧೋಗತಿಯಾಗುವದು. ಇಲ್ಲಿ ಸಾತ್ವಿಕತಾಮಸರನ್ನು ಉದ್ದೇಶಿಸಿ **गच्छन्ति** ಎಂಬ ಕ್ರಿಯಾಪದದಿಂದ ಸಾತ್ವಿಕರು ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾಗಿ ಉತ್ತಮ–ಗತಿಯನ್ನೂ, ತಾಮಸರು ಪರಮಾತ್ಮನ ಕೋಪಕ್ಕೆ ಗುರಿಯಾಗಿ ಪರಲೋಕದಲ್ಲಿ ಕೀಳು–ಗತಿಯನ್ನೂ, ಹೊಂದುವರೆಂದು ಸೂಚಿತವಾಯಿತು; ಮತ್ತು ರಾಜಸರನ್ನು ಕುರಿತು **तिष्ठन्ति** ಎಂದು ಕ್ರಿಯಾಪದವನ್ನು ಉಪಯೋಗಿಸಿದ್ದರಿಂದ ಅವರು ಮೇಲಿನವರಂತೆ ಮೇಲು–ಕೀಳು ಗತಿಗಳನ್ನು ಹೊಂದದೆ, ಅಲ್ಪಸುಖಕ್ಕಾಗಿ ಕಾಮ್ಯಕರ್ಮನಿರತರಾಗಿ ತಿರುಗುತ್ತಿರುವರೆಂದು ಸ್ಪಷ್ಟವಾಗುವದು. ಇದರಿಂದ ಹಿಂದಿನ (೧೪–೫,೧೩–೨೨) ಈ ಶ್ಲೋಕಗಳು ವಿವರಿಸಲ್ಪಟ್ಟವು.

೧೯. ಕೃಷ್ಣಾ, ಈ ಬಗೆಯಾಗಿ, ಮೂರು ಗುಣಗಳನ್ನು ಕುರಿತು ಸಾಕಷ್ಟು ವರ್ಣಿಸಿದ್ದಾಯಿತು, ಅವುಗಳು ಈ ಜಗವನ್ನು ಬಂಧಿಸುವವೆಂದೂ, ಅವುಗಳಿಂದ ಸಾಕ್ಷಾತ್ತಾಗಲಿ, ಪರಂಪರೆ

ಯಿಂದಾಗಲಿ, ಹುಟ್ಟುವ ಫಲಗಳನ್ನೂ ಹೇಳಲಾಯಿತು; ಅಂದರೆ, ಹಿಂದೆ (೩–೫)ನೆಯ ಶ್ಲೋಕದಲ್ಲಿ ಸಂಕ್ಷೇಪವಾಗಿ ನಿರೂಪಿಸಲ್ಪಟ್ಟ ಪ್ರಮೇಯವು ಇಲ್ಲಿ ಬೆಳಸಿ ಹೇಳಲ್ಪಟ್ಟಿತು. ಇದರಿಂದ ಗುಣಗಳೇ ಶ್ರೇಷ್ಠವಾದವುಗಳೇ ಹೊರ್ತು ಅವುಗಳಿಗಿಂತ ಯಾವ ಹೆಚ್ಚಿನ ವಸ್ತುವೂ ಇಲ್ಲವೋ ಹೇಗೆಂಬುವ ಸಂದೇಹ ಉಂಟಾಗುವದು ಅದನ್ನು ನಿವಾರಿಸಲು ಮುಂದಿನಂತೆ ಹೇಳುವದು:—

नान्यं गुणेभ्यः कर्तारं यदा द्रष्टाऽनुपश्यति ।
गुणेभ्यश्च परं वेत्ति मद्भावं सोऽधिगच्छति ॥ १९ ॥

**ಅಂ**— ಗುಣ–ಪರಿಣಾಮಕ್ಕೆ ಕಾರಣನಾಗುವ, ಗುಣಗಳಿಗಿಂತ ಶ್ರೇಷ್ಠನಾದ ಮತ್ತು ಸ್ವತಂತ್ರನಾದ ಪರಬ್ರಹ್ಮವಸ್ತು ಎಂಬುದು ಉಂಟೆಂದು ತಿಳಿದ ಜೀವವು ಜ್ಞಾನಾನಂದಸ್ವರೂಪವುಳ್ಳ ಸ್ಥಿತಿಯನ್ನು ನನ್ನಲ್ಲಿ ಹೊಂದುವದು, ಅಥವಾ, ಗುಣಗಳಿಗಿಂತ ಅನ್ಯ ಸ್ವತಂತ್ರಕರ್ತನಾದ ಪರಮಾತ್ಮನು ಉಂಟೆಂದು ತಿಳಿಯುವವನೇ ಪುರುಷನು, ಮಿಕ್ಕವರು ಪಶುಗಳು, ಗುಣಗಳಿಂದ ಭಿನ್ನನೂ, ಕರ್ತನೂ ಆದ ಪರಮಾತ್ಮನೆಂಬುವನು ಇರುವನೆಂದು ತಿಳಿದವನೇ ಪುರುಷನೆಂತಲ್ಲ; ಆದರೆ, ಗುಣಗಳಿಗಿಂತ ಮಿಗಿಲಾದ ಪರಮಾತ್ಮನು ಇರುವನೆಂದು ತಿಳಿದವನು ಪುರುಷನು, ಏಕೆಂದರೆ, ಇಂಥವನಿಗೆ ನನ್ನಲ್ಲಿ ಗತಿಯಾಗುವದು.

**ವಿಂ ಅಂ**— ಗುಣಗಳಿಂದ ಭಿನ್ನನೂ, ನಿಮಿತ್ತಕರ್ತನೂ, ಆದ ಪರಮಾತ್ಮನು ಉಂಟೆಂದು ತಿಳಿದವನು ಸಾರೂಪ್ಯಮುಕ್ತಿಯನ್ನು ಹೊಂದುವನು. ಘಟಕ್ಕೆ ಮಣ್ಣು ಕಾರಣವಾದಂತ ಗುಣಗಳು ಜಗಕ್ಕೆ ಉಪಾದಾನಕಾರಣಗಳೆಂತಲೂ, ಕುಂಬಾರನು ಘಟಕ್ಕೆ ಕಾರಣನಾದಂತೆ ಪರಮಾತ್ಮನು ನಿಮಿತ್ತಕಾರಣನೆಂತಲೂ, ತಿಳಿದವನು ಮೋಕ್ಷಹೊಂದುವನು. ಗುಣಗಳಿಂದ ಭಿನ್ನವಾದ ಜೀವವು ಅಸ್ವತಂತ್ರ ಕರ್ತೃವೆಂತಲೂ, ಪರಮಾತ್ಮನು ಸ್ವತಂತ್ರ ಕರ್ತನೆಂತಲೂ, ತಿಳಿಯಬೇಕು. ಜೀವವೂ, ಪರಮಾತ್ಮನೂ, ಗುಣಗಳಿಂದ ಭಿನ್ನರೆಂದು ತಿಳಿಯಬೇಕಷ್ಟೇ ಅಲ್ಲದೆ, ಪರಮಾತ್ಮನು ಎಲ್ಲರಿಗಿಂತ ಶ್ರೇಷ್ಠನೆಂತಲೂ ತಿಳಿಯತಕ್ಕದ್ದು, ಮತ್ತು ಈ ಗುಟ್ಟನ್ನರಿತವನೇ ಪುರುಷನು, ಮಿಕ್ಕವರು ಪಶುಗಳು. ಈ ಬಗ್ಗೆ ನಾನು ಹಿಂದೆ (೧೩–೨೪) ಈ ಶ್ಲೋಕದಲ್ಲಿ ಹೇಳಿರುವೆ. ಅರ್ಜುನಾ, ಪ್ರಕೃತಿ, ಅದರ ಗುಣಗಳು, ಅವುಗಳಿಂದಾಗುವ ಕಾರ್ಯಗಳು, ಜೀವ, ಪರಮಾತ್ಮ, ಹೀಗೆ ಎಲ್ಲರನ್ನು ಯಥಾರ್ಥವಾಗಿ ತಿಳಿದರೇನೇ ನಿನಗೆ ಮೋಕ್ಷಫಲ ದೊರೆಯುವಲ್ಲಿ ಸಂದೇಹವಿಲ್ಲ. ಅದಕ್ಕಾಗಿಯೇ, ಇದನ್ನೆಲ್ಲ ನಾನು ನಿನ್ನನ್ನು ಕುರಿತು ವಿಸ್ತರಿಸಿರುವೆನು.

೨೦. ಈ ಪ್ರಕಾರ, ಸುಖದುಃಖಾದಿಗಳೆಂಬ ಬಂಧನವು ಗುಣತ್ರಯಗಳ ಬಂಧನಕ್ಕೆ ಅಧೀನವಾದುದರಿಂದ, ಆ ಬಂಧನ ಮೀರುವದೇ ಬಂಧನ ಹಾನಿಯೆಂಬುದಕ್ಕೆ ಹೇಳುವದು:—

गुणानेतानतीत्य त्रीन्देही देहसमुद्भवान् ।
जन्ममृत्युजरादुःखैर्विमुक्तोऽमृतमश्नुते ॥ २० ॥

**ಅಂ**—ದೇಹಧರಿಸಿದ ಪ್ರಾಣಿಯು ತನ್ನ ದೇಹದಲ್ಲಿ ಹುಟ್ಟುವ ಈ ಮೂರು ಗುಣಗಳನ್ನು ಮಿಕ್ಕಿದರೆ, ಜನ್ಮ, ಮರಣ, ಮುಪ್ಪು, ಸಿಟ್ಟುಗಳೆಂಬ ದುಃಖಗಳಿಂದ ಬಿಡುಗಡೆಹೊಂದಿ ಪರಬ್ರಹ್ಮನನ್ನು ಹೊಂದುವನು.

**ವಿಂ ಅಂ**—ದೇಹವುಳ್ಳವನು ದೇಹದಲ್ಲಿ ಪ್ರಕಟವಾಗುವ ಅಂದರೆ, ದೇಹದ ಉತ್ಪತ್ತಿಗೆ ಕಾರಣಗಳಾಗಿ ದೇಹರೂಪದಿಂದ ಪರಿಣಮಿಸಿದ ಮತ್ತು ಪ್ರಕೃತಿಯಿಂದ ಹುಟ್ಟಿದ ಸತ್ವರಜತಮಸ್ಸುಗಳೆಂಬೀ

ಮೂರು ಗುಣಗಳನ್ನು ಮೀರಿ, ಅಂದರೆ, ಆ ಗುಣಾತ್ಮಕವಾದ ಪ್ರಕೃತಿ ಬಂಧನದಿಂದ ಮುಕ್ತನಾಗುವನು. ಅದರಿಂದ ಹುಟ್ಟು, ಮುಪ್ಪು, ಸಾವುಗಳಿಂದ ಒದಗುವ ದುಃಖಗಳಿಂದಲೂ, ಬೇರೆ ಬೇರೆ ಸಾಂಸಾರಿಕ ದುಃಖಗಳಿಂದಲೂ, ಪೂರ್ಣ ಮುಕ್ತನಾಗಿ ಸಾರೂಪ್ಯಮುಕ್ತಿಯನ್ನು ಹೊಂದುವನು. ಆದುದರಿಂದ ಪ್ರಕೃತಿಬಂಧನದಿಂದ ಬಿಡುಗಡೆ ಹೊಂದುವದೇ ಮೋಕ್ಷವು, ಈ ವಿಷಯಕ್ಕೆ ಹಿಂದೆ (೭–೧೪) ನೆಯ ಶ್ಲೋಕದಲ್ಲಿ ಹೇಳಿ ಇದೆ. ಸಾತ್ವಿಕಾಹಾರದ ಸೇವನೆಯಿಂದಲೂ, ಫಲಾಸಕ್ತಿಯನ್ನು ತೊರೆದು, ಭಗವದಾರಾಧನೆಗಾಗಿ ಮಾಡುವ ಕರ್ಮಾನುಷ್ಠಾನದಿಂದಲೂ, ರಜ–ತಮಗಳನ್ನು ಸಂಪೂರ್ಣವಾಗಿ ದೂರಿಸಿ, ಶ್ರೇಷ್ಠವಾದ ಸತ್ವಗುಣವುಳ್ಳವನಾಗಿ, ಗುಣ–ಜೀವಗಳಿಗಿಂತ ಹೆಚ್ಚಿನವನಾದ ಪರಮಾತ್ಮನಿರುವನೆಂದು ಯಥಾರ್ಥವಾಗಿ ತಿಳಿದರೆ, ಅಂತಹ ಜ್ಞಾನದಿಂದ ಮೋಕ್ಷಪಡೆಯುವನು. ಈದೀಗ ಹಿಂದೆ ಹೇಳಲ್ಪಟ್ಟ ಸಾರೂಪ್ಯಮುಕ್ತಿ ಎನಿಸುವದು. ಅದನ್ನೇ ಇಲ್ಲಿ ವಿಶದವಾಗಿ ಹೇಳಿ ಇದೆ.

೨೧. ಕೃಷ್ಣಾ, ಪ್ರಕೃತಿ ಮತ್ತು ಅದರ ಗುಣಗಳಿಗೆ ಮೀರಿದವನು ಮೋಕ್ಷಹೊಂದುವನೆಂದು ಹೇಳಿರುವಿ, ಆದರೆ, ಅವುಗಳನ್ನು ಮೀರಲು ಉಪಾಯವೇನು ? ಎಂಬುದನ್ನು ತಿಳಿಯುವದು ಅವಶ್ಯವು; ಆದ್ದರಿಂದ ಗುಣಾತೀತನ ಲಕ್ಷಣವನ್ನು ಕುರಿತು ನನಗೆ ತಿಳಿಹೇಳುವಿಯಾ ?

**अर्जुन उवाच ।**
**कैर्लिंगैस्त्रीन्गुणानेतानतीतो भवति प्रभो ।**
**किमाचारः कथं चैतांस्त्रीन्गुणानतिवर्तते ॥ २१ ॥**

**ಅಂ**—ಮಹಾಸ್ವಾಮಿ, ಎಲ್ಲಕ್ಕೂ ಬಂಧಕವಾದ ಈ ಸತ್ವಾದಿಗುಣಗಳನ್ನು ಮೀಕ್ಕಿದವನ ಲಕ್ಷಣಗಳೇನು ? ಅವನ ಆಚಾರವು ಹೇಗಿರುತ್ತದೆ ? ಅವನು ಹೇಗೆ ಯಾವ ಉಪಾಯದಿಂದ ಈ ಮೂರು ಗುಣಗಳನ್ನು ದಾಟುವನು ?

**ವಿಂ ಅಂ**— ಸತ್ವಾದಿ ಈ ಮೂರು ಗುಣಗಳನ್ನು ದಾಟಿದವನು ಯಾವ ಲಕ್ಷಣವುಳ್ಳವನು ? ಗುಣಾತೀತನಾದವನು ಹೇಗೆ ಆಚರಿಸುತ್ತಾನೆ ? ಅಂದರೆ, ಅವನ ಸ್ವರೂಪವನ್ನು ತಿಳಿಯಲು ಲಕ್ಷಣವುಳ್ಳ ಆಚಾರವು ಯಾವುದು ? ಇಲ್ಲಿ 'ಲಕ್ಷಣ' ಶಬ್ದದಿಂದ ಅಂತರಂಗಿಕ ಪರಮಾತ್ಮನಲ್ಲಿ ನಿಷ್ಠೆ, ಇಂದ್ರಿಯನಿಗ್ರಹ, ಮುಂತಾದ ಅಸಾಧಾರಣ ಧರ್ಮಗಳೆಂತಲೂ, 'ಆಚಾರ' ಶಬ್ದದಿಂದ ಬಾಹ್ಯ ಕರ್ಮಾನುಷ್ಠಾನ ಮೊದಲಾದ ಅಸಾಧಾರಣ ಧರ್ಮಗಳೆಂತಲೂ, ತಿಳಿಯಬೇಕು. ತಾನು ಗುಣಾತೀತನು ಅಹುದೋ ಅಲ್ಲವೋ ಎಂಬುದನ್ನು ತಿಳಿಯುವದು ಲಕ್ಷಣಪ್ರಶ್ನವು. ಪರರಿಗೆ ಅವನ ಗುಣಾತೀತತ್ವದ ಜ್ಞಾನವಾಗಬೇಕೆಂದರೆ, ಬಾಹ್ಯಾಚಾರ ಪ್ರಶ್ನವು; ಅವನು ಸ್ವೇಚ್ಛಾಚಾರಿಯಾಗಿರುವನೋ, ಅಥವಾ ವಿಧಿಗನುಸಾರವಾಗಿ ಆಚರಿಸುವನೋ ? ಕೃಷ್ಣಾ, ಪ್ರಕೃತಿ ಮತ್ತು ಅದರ ಗುಣಗಳಿಂದ ಮುಕ್ತಮಾಡಲು ನೀನೇ ಸಮರ್ಥನು, ಆದುದರಿಂದ ಕರುಣೆಯಿಂದ ನನ್ನನ್ನು ಉದ್ಧರಿಸು ಕಂಡ್ಯಾ.

**೨೨.** ಗುಣಾತೀತನ ಲಕ್ಷಣಗಳು ಯಾವವು ಎಂಬುದಕ್ಕೆ ಉತ್ತರ ಹೇಳಿದ್ದು —

**श्रीभगवानुवाच ।**
**प्रकाशं च प्रवृत्तिं च मोहमेव च पांडव ।**
**न द्वेष्टि संप्रवृत्तानि न निवृत्तानि कांक्षति ॥ २२ ॥**

**ಅಂ**— ಸತ್ವಾದಿಗುಣಗಳು ಸೂಕ್ಷ್ಮಸ್ಥೂಲವೆಂದು, ಎರಡು ವಿಧ; ಸ್ಥೂಲದಿಂದ ಲೌಕಿಕವಾದ ಪ್ರಕಾಶ, ಪ್ರವೃತ್ತಿ, ಮೋಹಗಳು ಹುಟ್ಟುವವು, ಸೂಕ್ಷ್ಮದಿಂದ ಪರಮಾತ್ಮನ ಸಂಬಂಧವಾದ ವಿಷಯು

ಗಳು. ಅವುಗಳಲ್ಲಿ ಮೊದಲನೆಯು ವಿಧವಾದ ಸತ್ವಾದಿಗುಣಗಳಿಂದ ಕ್ರಮೇಣ ಜ್ಞಾನ, ಉದ್ಯೋಗ, ಅಜ್ಞಾನ, ಇವು ಹುಟ್ಟುವವು. ಗುಣಾತೀತನು ಅವುಗಳು ಪ್ರಾಪ್ತವಾದರೆ, ಪ್ರಾಯಿಕವಾಗಿ ದ್ವೇಷಿಸುವದಿಲ್ಲ; ನಿವೃತ್ತವಾದರೆ ಅಪೇಕ್ಷಿಸುವದಿಲ್ಲ; ಇಂಥವನೇ ಗುಣಾತೀತನು. ಸೂಕ್ಷ್ಮದಲ್ಲಿ, ಪರಮಾತ್ಮ ವಿಷಯಕ ಜ್ಞಾನ, ಪ್ರವೃತ್ತಿಗಳನ್ನು ಬಯಸುವನು; ಅಥವಾ ಅನ್ಯ ಪುರುಷನಲ್ಲಿ ಇದ್ದ ಜ್ಞಾನ ಮೊದಲಾದ ಸದ್ಗುಣಗಳನ್ನು ಕಂಡು ಹೊಟ್ಟೆಕಿಚ್ಚು ಪಡುವದಿಲ್ಲ. ಅವನು ಪರರಿಗೆ ಇಷ್ಟಹಾನಿ, ಅನಿಷ್ಟ ಪ್ರಾಪ್ತಿ ಯಾಗಬೇಕೆಂದು ಎಂದೂ ಬಯಸುವದಿಲ್ಲ.

**ವಿಂ ಅಂ—** ಸತ್ವ, ರಜ, ತಮೋಗುಣಗಳು ಸೂಕ್ಷ್ಮ-ಸ್ಥೂಲವೆಂದು ಇಬ್ಬಗೆಯಾಗಿವೆಯಷ್ಟೇ! ಸ್ಥೂಲದಿಂದ ಲೌಕಿಕ ವಿಷಯಗಳಲ್ಲಿ ಜ್ಞಾನ, ಉದ್ಯೋಗ, ಅಜ್ಞಾನಗಳು ಹುಟ್ಟುವವು; ಸೂಕ್ಷ್ಮದಿಂದ ಇವುಗಳು ಪರಮಾತ್ಮನ ವಿಷಯದಲ್ಲಿ ಹುಟ್ಟುವವು. ದ್ವೇಷಿಸದಿರೋಣ, ಬಯಸದಿರೋಣ, ಇವು ಸ್ಥೂಲಗುಣದಿಂದ ಹುಟ್ಟಿದ ಜ್ಞಾನಾದಿ ವಿಷಯಕವಾಗಿವೆ, ಇನ್ನು, ಸೂಕ್ಷ್ಮ ಗುಣದಿಂದ ಹುಟ್ಟಿದ ಪರಮಾತ್ಮ ವಿಷಯಕ ಜ್ಞಾನ ಮತ್ತು ಉದ್ಯೋಗ ಇವುಗಳನ್ನು ಬಯಸುವನು; ಮತ್ತು ಭಗವದ್ವಿಷಯಕ ಅಜ್ಞಾನವನ್ನು ದ್ವೇಷಿಸುವನು, ಅಂದರೆ ಪರಮಾತ್ಮನ ವಿಷಯದಲ್ಲಿ ಆ ಮೂರನ್ನು ದ್ವೇಷಿಸದೆ, ಅಜ್ಞಾನವನ್ನು ಮಾತ್ರ ದ್ವೇಷಿಸುವನು. ಅದರಂತೆಯೇ ಪರಮಾತ್ಮನ ಬಗ್ಗೆ ಅಜ್ಞಾನ ಬಯಸದೆ ಜ್ಞಾನ ಮತ್ತು ಉದ್ಯೋಗ ಇವುಗಳನ್ನೇ ಬಯಸುವನು.

೨೩. ಗುಣಾತೀತನ ಲಕ್ಷಣಗಳು ಯಾವುವೆಂಬುದಕ್ಕೆ ಈ ರೀತಿಯಾಗಿ ಉತ್ತರ ಹೇಳಿ, ಇನ್ನು ಅವನ ಆಚಾರದ ಬಗ್ಗೆ ವಿಸ್ತರಿಸುವದು —

**उदासीनवदासीनो गुणैर्यो न विचाल्यते ।**
**गुणा वर्तंत इत्येवं योऽवतिष्ठति नेंगते ॥ २३ ॥**

**ಅಂ—** ಗುಣಾತೀತನು ಉದಾಸೀನನಂತೆ ತೋರುವನೇ ಹೊರ್ತು ನಿಜವಾಗಿ ಹಾಗಿರುವದಿಲ್ಲ. ಅವನು ವೈಷ್ಣವ ಧರ್ಮಾಚರಣೆಯಲ್ಲಿ ತತ್ಪರನಾದುದರಿಂದ ಸತ್ವಾದಿ ಗುಣಗಳಿಂದುಂಟಾಗುವ ವಿಕಾರಗಳಿಗೆ ಸಿಲುಕುವದಿಲ್ಲ. ಆದರೆ ಅವುಗಳು ಸ್ವತಂತ್ರವಾಗಿರದೆ, ಪರಮಾತ್ಮನ ಇಚ್ಛೆಗನುಸರಿಸಿ ಕಾರ್ಯ ಮಾಡುವವೆಂದು ತಿಳಿಯುವನು. ಅದರಿಂದ ಗುಣಗಳಿಂದುಂಟಾಗುವ ಅವೈಷ್ಣವ ಕರ್ಮದಲ್ಲಿ ತೊಡಗದೆ ವೈಷ್ಣವ ಕರ್ಮಗಳನ್ನೇ ಆಚರಿಸುವನು; ಇದೇ ಅವನ ಆಚರಣೆ ಎಂದು ತಿಳಿ.

**ವಿಂ ಅಂ-**ವಾದವಿವಾದದಲ್ಲಿ ತೊಡಗಿದ ಇಬ್ಬರಲ್ಲಿ ಯಾವ ಪಕ್ಷವನ್ನೂ ಅಂಗೀಕರಿಸದೆ,ರಾಗದ್ವೇಷರಹಿತನಾಗಿ, ಏನೂಮಾಡದೆ,ಮಾತಾಡದೆಸುಮ್ಮನಿರುವವನೇ ಉದಾಸೀನನೆನಿಸುವನು;ಗುಣಾತೀತನಾದರೂ ಹೀಗೆಯೇ ಇರುವನು.ಪರಮಾತ್ಮನ ಆರಾಧನೆಗಾಗಿಯೂ,ಶರೀರಯಾತ್ರೆಗಾಗಿಯೂ,ಅವನು ಕರ್ಮನಡಿಸುವನು. ಇಂಥವನು ಕೇವಲ ಉದಾಸೀನನಾಗಿರದೆ, ರಾಗದ್ವೇಷಗಳಿಲ್ಲದ ಮೂಲಕ ಉದಾಸೀನನಿಗೆ ಸದೃಶನಾಗಿರುವನು; ಅಂತೆಯೇ, ಇಲ್ಲಿ **उदासीनतया** ಎಂದು ಹೇಳದೆ **उदासीनवत्** ಎಂದು ಹೇಳಿಯಿದೆ. ಅರ್ಜುನಾ,ಇದೇ ವಿಷಯವನ್ನು ಕುರಿತು ನಾನು(೯—೯)ನೆಯ ಶ್ಲೋಕದಲ್ಲಿ ನಿರೂಪಿಸಿದ **वति** ಪ್ರತ್ಯಯ ಪ್ರಯೋಗದ ಅಭಿಪ್ರಾಯವನ್ನು ಜ್ಞಾಪಕಮಾಡಿಕೊಳ್ಳು. ಅವನು ಸತ್ವಾದಿಗುಣಗಳಿಗೂ, ಅವುಗಳ ಕಾರ್ಯಗಳಾದ ಸುಖ, ದುಃಖ, ಮೋಹಾದಿಗಳಿಗೂ, ಒಳಗಾಗದ್ದರಿಂದ ತನ್ನ ಅನುಷ್ಠಾನ ಮತ್ತು ಭಗವದ್ಧ್ಯಾನಗಳಿಂದ ಭ್ರಷ್ಟನಾಗಲರಿಯುಸು ಗುಣಾದಿಗಳಿಗೆ ಸಿಲುಕದ ಅವನಿಗೆ ಯೋಗಕ್ಷೇಮಗಳ ಚಿಂತೆ ಇರುವದಿಲ್ಲವೇ ಹೇಗೆಂದು ಕೇಳಿದರೆ, ‘ಗುಣಗಳು ತಮ್ಮ ತಮ್ಮ ಕಾರ್ಯಗಳನ್ನು ಜರಗಿಸುತ್ತಿರುವವು, ಅದಕ್ಕೆ ನಾನು ಮಾಡುವದೇನು?’ ಎಂದು ನಿಶ್ಚಯಿಸಿ, ಕಾಲಕಳೆಯುವನು; ಹೊರ್ತು

ರಾಗದ್ವೇಷಮೂಲಕ ಅವುಗಳಿಂದಾಗುವ ಕಾರ್ಯದಲ್ಲಿ ತಾನು ತೊಡಗುವದಿಲ್ಲ ಮತ್ತು ಅವಶ್ಯವಲ್ಲದ ಕೆಲಸಕ್ಕೆ ಕೈಹಾಕುವದಿಲ್ಲ. ಈ ವಿಷಯಕ್ಕೆ ಹಿಂದೆ ( ೩-೨೭,೨೮,೧೩-೩೦)ನೆಯ ಶ್ಲೋಕಗಳಲ್ಲಿ ಹೇಳಿ ಇದೆ. ಇಂತಹ ಗುಣಗಳುಳ್ಳವನೇ ಗುಣಾತೀತನು. ಇದುವೇ ಅವನ ಬಾಹ್ಯಾಚಾರ ಲಕ್ಷಣ. ಇದರಿಂದ ಪ್ರಯತ್ನಪೂರ್ವಕ ಸಾಧಿಸಿದ ಸಾಧನದಿಂದ ಗುಣಾತೀತನಾಗಬಹುದೆಂದು ಹೇಳಿದಂತಾಯಿತು. ಅಥವಾ, ಪರಮಾತ್ಮನು ಸರ್ವೋತ್ತಮನೆಂಬ ಸಂಗತಿಯು ಪ್ರಸಿದ್ಧವು; ಅವನು ಸರ್ವೋತ್ತಮನೆಂದು ಆಚಾರ್ಯರು ಉಪದೇಶಮಾಡುವರು. ಅವರ ಹತ್ತರ ಕುಳಿತು ಕೇಳುವ ಶ್ರೋತೃವು ಗುರುಗಳಲ್ಲಿದ್ದ ಅಥವಾ ಮಾತ್ಸರ್ಯದಿಂದ ಆರೋಪಿಸಲ್ಪಟ್ಟ ದೋಷಗಳಿಗೆ ಒಳಗಾಗದೆ, ಭಕ್ತಿಪೂರ್ವಕವಾಗಿ ಅವರ ಮುಖದಿಂದ ಹೊರಟ ತತ್ವಶ್ರವಣದಿಂದ ಹಿಂದಿರುಗನು; ಆದರೆ, ಅವನು ತಿಳಿಯುವದೇನಂದರೆ "ನನ್ನ ಗುಣಗಳು ಹೇಗಿದ್ದರೂ, ಅವರಲ್ಲಿಯ ದೋಷಗಳನ್ನು ನಾನೆಣಿಸಲಾಗದು, ಗುರುಗಳ ದೋಷಗಳನ್ನು ಬಚ್ಚಿಡುವವನೇ ಶಿಷ್ಯನೆನಿಸುವನು." ಶಿಷ್ಯನು ಚಲಿಸದಕಾರಣವೇನೆಂದು ಕೇಳಿದರೆ, ಯಾವ ಗುಣಗಳ ಮೂಲಕ ಇವರು ತನ್ನ ಗುರುಗಳೆಂದು ಸ್ವೀಕರಿಸಿರುವನೋ, ಆ ಗುಣಗಳು ತತ್ವಬೋಧಿಸುವದರಲ್ಲಿ ಸಮರ್ಥವಾಗಿದ್ದು, ಅವುಗಳಲ್ಲಿ ಈಗ ಯಾವವೂ ಕುಂದಿರುವದಿಲ್ಲವೆಂದು ನಿಶ್ಚಯಿಸಿ, ಗುರುಗಳನ್ನು ಉತ್ತಮ ಭಕ್ತಿಪೂರ್ವಕ ಆರಾಧಿಸುವವನೇ ಗುಣಾತೀತನೆನಿಸುವನು; ಇದೀಗ ಅವನ ಬಾಹ್ಯಾಚಾರವು.

೨೪-೨೫ ಗುಣಾತೀತನ ಅನ್ಯ ಲಕ್ಷಣಗಳನ್ನು ಹೇಳಿದ್ದು—

समदुःखसुखः स्वस्थः समलोष्ठाश्मकांचनः ।
तुल्यप्रियाप्रियो धीरस्तुल्यनिंदात्मसंस्तुतिः ॥ २४ ॥
मानापमानयोस्तुल्यस्तुल्यो मित्रारिपक्षयोः ।
सर्वारंभपरित्यागी गुणातीतः स उच्यते ॥ २५ ॥

**ಅಂ**—ಗುಣಾತೀತನು ಪ್ರಾಯಃ ವೈಷಯಿಕ ಸುಖವನ್ನು ದುಃಖಕ್ಕೆ ಸಮಾನವೆಂದು ಬಗೆಯುವನು. ಅವನು ಸಾಮಾನ್ಯವಾಗಿ ಸುಖದುಃಖಗಳಿಂದ ವಿಕಾರಹೊಂದುವದಿಲ್ಲ. ನಿಂದ್ಯವಾದ ಮಣ್ಣಿನ ಹೆಂಟೆ-ಕಲ್ಲಿನಂತೆ ಅವನು ಬಂಗಾರವನ್ನು ತಿಳಿಯುವನು. ಅಪ್ರಿಯ ವಸ್ತುವು ನಿಂದ್ಯವಿರುವಂತೆಯೇ ಪ್ರಿಯವಸ್ತುವನ್ನು ನಿಂದ್ಯವೆಂದು ಭಾವಿಸುವನು ಆತ್ಮಸ್ತುತಿಯೆಂದರೆ, ನಿಂದೆಯೆಂತಲೇ ಗ್ರಹಿಸುವನು. ಈ ಬಗೆಯ ಅವನ ಸಮತ್ವಕ್ಕೆ ಧೈರ್ಯವೇ ಕಾರಣವಾಗಿರುತ್ತದೆ. ಅಥವಾ, ಪರಮಾತ್ಮನ ಆರಾಧನೆಯಲ್ಲಿ ದುಃಖ ಒದಗಿದರೂ, ಅದನ್ನು ಬಿಡುವವರಿಂದ ಸುಖವಾದರೂ, ಅವನೆಂದೂ ಪರಮಾತ್ಮನ ಆರಾಧನೆಯನ್ನು ಬಿಡದೆ ನಡಿಸುವನು. ಸೇವೆಯಲ್ಲಿ ತನಗೆ ಬೇಡಾದ ಮಣ್ಣಿನ ಹೆಂಟೆಯು ಪ್ರಾಪ್ತವಾದರೂ, ಬೇಕಾದ ಚಿನ್ನವು ದೊರೆತರೂ, ಆ ಧ್ಯೇಯ ವಸ್ತುವಿನ ಆರಾಧನೆಯನ್ನು ಬಿಡಲರಿಯನು. ಲೌಕಿಕಪುರುಷಾರ್ಥಗಳ ಪ್ರಾಪ್ತಿ ಅಥವಾ ಹಾನಿಯು ಉಂಟಾದಾಗ್ಯೂ, ವಿಷ್ಣುಭಜನೆಗೆ ಅವನು ದೂರಾಗುವದಿಲ್ಲ. ಅವನ ಅನುಷ್ಠಾನದಿಂದ ಪ್ರಿಯವೂ, ಅದನ್ನು ಮಾಡದ್ದರಿಂದ ಅಪ್ರಿಯವೂ, ಪ್ರಾಪ್ತವಾದಾಗ್ಯೂ, ಆರಾಧನೆಯಲ್ಲಿ ಎಳ್ಳಷ್ಟಾದರೂ ಹಿಂಜರಿಯನು; ಅಂದರೆ ಅನುಷ್ಠಾನಪರನಾಗಿರುವನು ಯಾವಾಗಲೂ, ಅಂತೆಯೇ, ಅನುಷ್ಠಾನದಿಂದ ಆತ್ಮಸ್ತುತಿ, ಅದನ್ನು ಬಿಟ್ಟದ್ದರಿಂದ ನಿಂದೆ, ಇವುಗಳು ಒದಗಿದರೂ, ವಿಷ್ಣುಭಕ್ತಿಯಿಂದ ಕದಲದೆ, ಸಮನಾಗಿರುವನು. ಇದಕ್ಕೆಲ್ಲ ಅವನ ಧೈರ್ಯವೇ ಕಾರಣವು. ಇಲ್ಲಿ ಧೈರ್ಯವೆಂದರೆ, ಪರಮಾತ್ಮನ ಮಹಿಮೆಯ ಜ್ಞಾನ, ಅವನ ವಿಷಯಕವಾದ ಧರ್ಮಾಚರಣೆಗಳನ್ನು ಬಿಡದಿರೋಣ, ಎಂಬರ್ಥ. ಅನುಷ್ಠಾನ-ಅನನುಷ್ಠಾನಗಳಿಂದ ಮಾನಾಪ

ಮಾನಗಳೂ, ಶತ್ರುತ್ವ ಮಿತ್ರತ್ವಗಳೂ, ಪ್ರಾಪ್ತವಾದಾಗ್ಯೂ, ಅವನು ಮಾಡುವ ವಿಷ್ಣುಭಕ್ತಿಯಲ್ಲಿ ಕುಂದುಕೊರತೆ ಇರದು. ಮೊತ್ತಮೊದಲು, ಅವೈಷ್ಣವ ಕರ್ಮಮಾಡುವದಿಲ್ಲೆಂದು ಸಾಮಾನ್ಯವಾಗಿ ಹೇಳಿ, ಈಗ ವಿಶೇಷ ಪ್ರಯೋಜನಮೂಲಕ ಅವನು ಅಂಥ ಕರ್ಮಮಾಡುವದಿಲ್ಲೆಂದು ಹೇಳಿದ್ದು. ಗುಣಾತೀತನು ಯಾವದೇ ಪ್ರಯೋಜನದಿಂದ ಅವೈಷ್ಣವ ಕರ್ಮವನ್ನಾಚರಿಸಲಾರನು. ಅಥವಾ, ಮೊದಲು ಅಲ್ಪ ಅವೈಷ್ಣವ ಕರ್ಮತ್ಯಾಗವು ಹೇಳಲ್ಪಟ್ಟಿದ್ದರೂ, ಇಲ್ಲಿ ದೀರ್ಘ ಅವೈಷ್ಣವ ಕರ್ಮತ್ಯಾಗವನ್ನು ಹೇಳಿದ್ದರಿಂದ ಪುನರುಕ್ತಿಯು ದೋಷವಿಲ್ಲ.

**೨೪ ೨೫**—ಗುಣಾತೀತನಿಗೆ ಸುಖದುಃಖಗಳು ಸಮವಾದುದರಿಂದ ಅವನು ಯಾವಾಗಲೂ ವಿಕಾರಹೊಂದಲಾರನು. ತನ್ನಲ್ಲಿ ಅಂತರ್ಗತನಾದ ಪರಮಾತ್ಮನು ಸ್ವತಂತ್ರನಾದುದರಿಂದ, ಅವನಲ್ಲಿ ಅಚಲ ಭಕ್ತಿಯುಳ್ಳವನಾಗಿಯೂ, ಅನ್ಯವಿಷಯಗಳಲ್ಲಿ ವಿರಕ್ತನಾಗಿಯೂ, ಇರುವನು. ಆದ್ದರಿಂದ ಅವನಿಗೆ ಮಣ್ಣಿನ ಹೆಂಟೆ, ಕಲ್ಲು, ಮತ್ತು ಬಂಗಾರ, ಇವು ಮೂರು ಒಂದೇಸಮವಾಗಿವೆ. ಸುಖದುಃಖಗಳಿಗೆ ಸ್ಥಾನವಾದ ಪ್ರಿಯ—ಅಪ್ರಿಯ ವಸ್ತುಗಳು ಅವನಿಗೆ ಸಮವಾಗಿವೆ. ಇಂತಹ ಸಮತ್ವವು ಅವನಿಗೆ ಆದೆಂತು ಉಂಟಾಗುವದೆಂದು ಕೇಳಿದರೆ, ಅದಕ್ಕೆ ಧೈರ್ಯವೇ ಕಾರಣವೆಂದು ಹೇಳುವೆವು. ಈ ಬಗ್ಗೆ ಹಿಂದೆ (೨—೨೫) ನೆಯ ಶ್ಲೋಕದಲ್ಲಿ ನಿರೂಪಿತವಾಗಿದೆ. ಇಂಥವನು ನಿಂದೆ, ಆತ್ಮಸ್ತುತಿಗಳನ್ನು ಒಂದೇ ಎಂದು ಭಾವಿಸುವಮೂಲಕ ಅವನಿಗೆ ಮಾನಾಪಮಾನಗಳ ಲೇಪವಿಲ್ಲ; ಅಂತೆಯೇ ಅವನಿಗೆ ಶತ್ರುಮಿತ್ರರಲ್ಲಿ ಸಮಬುದ್ಧಿ ಇರುವದು. ಇನ್ನು, ನಿಂದೆ—ಸ್ತುತಿಗಳಿಂದಾಗುವ ಶೋಕ—ಹರುಷಗಳ ಅನುಭವದಿಂದ ಶತ್ರು—ಮಿತ್ರಭಾವನೆಗಳು ಹುಟ್ಟುತ್ತವೆ; ಆದರೆ, ನಿಂದೆ—ಸ್ತುತಿಗಳಿಗೆ ಸಮಾನನಾಗಿರುವವನಿಗೆ ಈ ಪಕ್ಷಗಳಿಲ್ಲ. ಗುಣಾತೀತನು ಹೇಗಿರುವನೆಂದು ಕೇಳಿದರೆ, ಅವನು ಸಕಲ ಅವೈಷ್ಣವಕರ್ಮ, ನಿಷಿದ್ಧಕರ್ಮ, ಕಾಮ್ಯಕರ್ಮ, ಸಾಂಸಾರಿಕಕರ್ಮ, ಇವುಗಳನ್ನು ಬಿಟ್ಟವನಾಗಿ, ದೇಹಯಾತ್ರೆಯ ಹೊರತು ಅನ್ಯಕರ್ಮಗಳನ್ನು ಬಿಟ್ಟಿರುವನು. ನಿಂದೆ ಸ್ತುತಿಗಳು ವಾಚಿಕವ್ಯಾಪಾರಗಳು ಮಾನಾಪಮಾನಗಳು ಕಾಯಿಕ—ವಾಚಿಕ—ವ್ಯಾಪಾರಗಳು; 'ಲೋಕದಲ್ಲಿ ನಿಂದಕನು ತನ್ನಲ್ಲಿಯ ದೋಷಗಳನ್ನೆಣಿಸದೆ ಅನ್ಯರನ್ನು ನಿಂದಿಸುವನಲ್ಲ! ಅಂಥವನು ನಿಂದಿಸಲಿ, ಅದರಿಂದ ಹಾನಿಯಾಗುವದೇನು?' ಎಂದು ನಿಂದಕನು ಮೂರ್ಖನೆಂದು ತಿಳಿದು, ಹಿಂದೆ (೯—೧೧)ನೆಯ ಶ್ಲೋಕದಲ್ಲಿ ಹೇಳಿದ ನ್ಯಾಯಕ್ಕನುಸರಿಸಿ ಗುಣಾತೀತನು ಆ ನಿಂದಕನ ವಿಷಯದಲ್ಲಿ ಉದಾಸೀನನಾಗಿರುವನು. ಇನ್ನು, ಗುಣಾತೀತನನ್ನು ಸ್ತುತಿಸುವವನೇ ವಿದ್ವಾಂಸನೆಂದು ತಿಳಿದು, "ಅವನು ಸ್ತುತಿಸಿದರೂ, ನನ್ನಲ್ಲಿಯ ಯೋಗ್ಯತೆಯು ಜನರಿಗೆ ಕಂಡದ್ದೇ ಇದೆ. ನನ್ನಲ್ಲಿಯ ಅಲ್ಪಗುಣವನ್ನೇ ಬೆಳಿಸಿ ಹೇಳಿ ಸಂತೋಷಪಡುವವನು ಪಡಲಿ" ಎಂದು ಸ್ತುತಿಸುವವನಬಗ್ಗೆ ಉದಾಸೀನನಿರುವನು. ಗುಣಾತೀತನಾಗ ಬಯಸುವವನು ಬಾಹ್ಯಾಚಾರ ಮತ್ತು ಆಂತರಿಕ ಲಕ್ಷಣಗಳನ್ನು ಯತ್ನಪೂರ್ವಕವಾಗಿ ಸಾಧಿಸತಕ್ಕದ್ದು. ಇನ್ನು, ಇಲ್ಲಿ ಹೇಳಿದ ಪ್ರಶ್ನೋತ್ತರಗಳನ್ನು ಕುರಿತು ಕೆಲವರಿಗೆ ಸ್ವಲ್ಪ ಸಂದೇಹ ಬರಬಹುದು. ಹಿಂದೆ (೨—೫೪) ನೆಯ ಶ್ಲೋಕದಲ್ಲಿ ಅಸಂಪ್ರಜ್ಞಾತಸಮಾಧಿಯುಳ್ಳವನ ಲಕ್ಷಣವೇನೆಂದು ಕೇಳಿದ ಪ್ರಶ್ನಕ್ಕೆ ಹೇಳಿದ ಉತ್ತರವು ಅದರ ಮುಂದೆಯೇ ಇರುವ ಶ್ಲೋಕದಲ್ಲಿಯೇ ಸ್ಪಷ್ಟವಾಗಿದೆ. ಇಲ್ಲಿ, ಲಕ್ಷಣ ಮತ್ತು ಉತ್ತರಗಳು ಹೇಳಲ್ಪಟ್ಟಿದ್ದು, ಅವೇ ಜ್ಞಾನಿಯ ಲಕ್ಷಣಪ್ರಶ್ನಗಳು ಮತ್ತು ಅದಕ್ಕೆ ಉತ್ತರಗಳೆಂದು ತಿಳಿಯಬೇಕು; ಆದರೆ, ಇಲ್ಲಿ ಹೇಳಿದ ಪ್ರಶ್ನೋತ್ತರಗಳು ಗುಣಾತೀತನ ಉದ್ದೇಶವಾಗಿವೆ. ಹಿಂದೆ ಹೇಳಿದ (೨—೧೫, ೧೨—೧೩ ೧೨—೧೬, ೬—೮, ೧೨—೨೮, ೬—೭) ಈ ಶ್ಲೋಕಗಳಲ್ಲಿ ಹೇಳಿದ್ದರಲ್ಲಿ ಕೆಲವೆಡೆ ಶಬ್ದಮೂಲಕ, ಮತ್ತು (೨—೩೮, ೨—೫, ೫—೨೦, ೬—೯, ೧೨—೧೭) ಈ ಶ್ಲೋಕಗಳಲ್ಲಿ ಕೆಲವೆಡೆ ಅರ್ಥಮೂಲಕ, ಪುನರುಕ್ತಿಯ ದೋಷವು ಕಂಡುಬಂದಾಗ್ಯೂ, ಆಯಾ ಪ್ರಕರಣಗಳ ಅಭಿಪ್ರಾಯಭೇದಕಲ್ಪನೆಯಿಂದ ಸಮಾಧಾನ ಹೇಳತಕ್ಕದ್ದು. ಮೇಲಾಗಿ, ತತ್ವವಿಷಯವಿದ್ದಾಗ ಪುನರುಕ್ತಿಯು ದೋಷವೆನಿಸದು.

೨೬. ಹೀಗೆ ಗುಣಾತೀತನಾದವನ ಲಕ್ಷಣ ಮತ್ತು ಆಚಾರಗಳನ್ನು ನಿರೂಪಿಸಿ, ಅವನ ಗುಣಗಳು ಹೇಗಿರುವವೆಂಬ ಪ್ರಶ್ನಕ್ಕೆ ಉತ್ತರಹೇಳಿದ್ದು; ಅಥವಾ "ಕೃಷ್ಣಾ, ನೀನು ಹೇಳಿದ ಸಾಧನ ಸಂಪಾದನೆಯಿಂದ ಗುಣಗಳನ್ನು ಮಿಕ್ಕುವ ಬಗೆ ಹೇಗೆ? ನನಗಂತೂ ಅದು ಅಸಾಧ್ಯವೆಂದೇ ತೋರುವದು; ಆದುದರಿಂದ ಅಹಹ! ನಾನಿನ್ನೇನು ಮಾಡಲಿ!" ಎಂದು ಅರ್ಜುನನು ಕೇಳಿದ್ದಕ್ಕೆ ಉತ್ತರಹೇಳಿದ್ದು:—

**मां च योऽव्यभिचारेण भक्तियोगेन सेवते ।**
**स गुणान्समतीत्यैतान् ब्रह्मभूयाय कल्पते ॥ २६ ॥**

ಅಂ— ನಿರ್ದುಷ್ಟವಾದ ಭಕ್ತಿಯಿಂದ ಅಂದರೆ ಭಕ್ತಿಯೆಂಬ ಉಪಾಯದಿಂದಲೇ ನಿತ್ಯದಲ್ಲಿ ನನ್ನನ್ನು ಸೇವಿಸಬೇಕು; ಅಂದರೆ, ಸತ್ವಾದಿಗುಣಗಳಿಂದಲೂ, ಅವುಗಳಿಗೆ ಅಭಿಮಾನಿಯಾದ ಶ್ರೀ-ಭೂ-ದುರ್ಗಾದೇವಿಯರಿಂದಲೂ, ಉಂಟಾದ ಬಂಧನವನ್ನು ಹರಿದು, ಲಕ್ಷ್ಮೀದೇವಿಯು ಪ್ರಿಯಳಿರುವಂತೆಯೇ ಗುಣಾತೀತನಾದರೂ ನನಗೆ ಪ್ರಿಯನಾಗುವನು. ಅಥವಾ ಚಿತ್‌ಪ್ರಕೃತಿಯ ಪ್ರಾಪ್ತಿಗೆ ಸಮರ್ಥನಾಗುವನು.

ವಿಂ ಅಂ— ಅರ್ಜುನನೇ, ನೀನು ನನ್ನನ್ನೇ ಸೇವಿಸು. ಗುಣಾತೀತನಾಗಲು ಬೇಕಾದ ಸಾಧನಗಳನ್ನು ನಾನು ನಿನಗೆ ಒದಗಿಸಿಕೊಡುವೆನು; ನೀನು ಹೆದರದಿರು. ನನ್ನ ಭಕ್ತಿಯೇ ಸಕಲ ಪುರುಷಾರ್ಥಗಳಿಗೆ ಸಾಧನವಾಗಿದೆ. ಈವಿಷಯಕ್ಕೆ ಹಿಂದೆ (೭—೧೪)ನೇ ಶ್ಲೋಕದಲ್ಲಿ ಹೇಳಿ ಇದೆ.

೨೭. ಹಿಂದಣ ಶ್ಲೋಕದಲ್ಲಿ ಗುಣಾತೀತನಿಗೆ ಪರಮಾತ್ಮನ ಪ್ರಾಪ್ತಿಯೆಂತಲೇ ಹೇಳತಕ್ಕದ್ದು. ಹೀಗಿದ್ದು ಲಕ್ಷ್ಮಿಯ ಪ್ರಾಪ್ತಿಯ ಕಾರಣವನ್ನು ಹೇಳಿದ ಉದ್ದೇಶವೇನೆಂದು ಕೇಳಿದರೆ, ಅದಕ್ಕೆ "ಲಕ್ಷ್ಮೀದೇವಿಯ ಪ್ರಾಪ್ತಿಯೇ ನನ್ನ ಪ್ರಾಪ್ತಿಯು; ಏಕೆಂದರೆ, ಅವಳು ಭಿನ್ನಳಾಗಿ ನನ್ನಲ್ಲಿಯೇ ವಾಸವಾಗಿರುವಳು" ಎಂಬುದೇ ಅಲ್ಲಿ ಅಭಿಪ್ರೇತವಾಗಿರುವದೆಂಬ ಬಗ್ಗೆ ಹೇಳುವದು.

**ब्रह्मणो हि प्रतिष्ठाहममृतस्याव्ययस्य च ।**
**शाश्वतस्य च धर्मस्य सुखस्यैकांतिकस्य च ॥ २७ ॥**

ಅಂ— ಮಹಾಲಕ್ಷ್ಮಿಗೂ, ನಾಶವಿಲ್ಲದ ಮುಕ್ತಿವರ್ಗಕ್ಕೂ, ಅಕ್ಷಯಫಲಕ್ಕೂ, ನಿಷ್ಕಾಮ ಧರ್ಮಕ್ಕೂ, ಎಲ್ಲಕ್ಕೂ ಹಿರಿದಾದ ಮೋಕ್ಷಸುಖಕ್ಕೂ, ನಾನೇ ಆಧಾರನು. ಲಕ್ಷ್ಮೀದೇವಿಯು ನನ್ನನ್ನು ಅಗಲದಿರುವದರಿಂದ, ಅವಳ ಪ್ರಾಪ್ತಿಯೇ ನನ್ನ ಪ್ರಾಪ್ತಿ ಎನಿಸುವದು. ಗುಣಾತೀತನು ಮೊದಲು ಲಕ್ಷ್ಮೀದೇವಿಯ ಸಾಮಿಪ್ಯವನ್ನುಹೊಂದಿ, ಮುಂದೆ ಅವಳ ಅನುಗ್ರಹದಿಂದ ನನ್ನನ್ನು ಹೊಂದುವನು; ಹೀಗೆ ಪರಂಪರೆಯಿಂದ ಪ್ರಾಪ್ತಿ ಎಂದು ತಿಳಿಯಲಿಕ್ಕೆಂದೇ ಇಷ್ಟೆಲ್ಲ ಹೇಳಬೇಕಾಯಿತು.

ವಿಂ ಅಂ— 'ಬ್ರಹ್ಮ' ಶಬ್ದವಾಚ್ಯಳಾದ ಲಕ್ಷ್ಮೀದೇವಿಗೂ ನಾನು ಆಧಾರನು. ಏಕೆಂದರೆ, ಅವಳು ಚತುರ್ಮುಖಾದಿ ಜಗತ್ತಿನಂತೆಯೇ ನನ್ನನ್ನವಳು ಆಶ್ರಯಿಸಿರುವಳು. ನನ್ನ ಸೇವೆಯಿಂದಲೇ ಅವಳ ಅನುಗ್ರಹಪ್ರಾಪ್ತಿ; ಆದರೆ, ಅಂತಹ ಅನುಗ್ರಹಕ್ಕಾಗಿ ಕೇವಲ ಅವಳನ್ನೇ ಸ್ವತಂತ್ರವಾಗಿ ಸೇವಿಸಲಾಗದು. ಏಕೆಂದರೆ, ಆಕೆಯ ಸೇವೆಯಿಂದ ನನ್ನ ಪ್ರಾಪ್ತಿಯು ಕಷ್ಟಸಾಧ್ಯವಾಗುವದೆಂಬ ವಿಷಯಕ್ಕೆ (೧೨—೫) ನೆಯ ಶ್ಲೋಕದಲ್ಲಿ ಹೇಳಿ ಇದೆ. ನೀನು ಬದ್ಧ ಜಗತ್ತಿಗೆ ಆಧಾರನು; ಅಂದಮೇಲೆ, ಅವಳಿಗೆ ನಿನ್ನಲ್ಲಿ ಆಶ್ರಯವೆಂತು? ಏಕೆಂದರೆ, ಅವಳು ನಿತ್ಯಮುಕ್ತಳಲ್ಲವೇ? ಎಂದು ಪ್ರಶ್ನಮಾಡಿದರೆ, ನಾನು ಬದ್ಧಜಗತ್ತಿಗಷ್ಟೇ ಆಶ್ರಯನಾಗಿರದೆ, ವಿಕಾರಹೊಂದದ ಮುಕ್ತವರ್ಗಕ್ಕೂ ಆಶ್ರಯನು; ಅದ

ರಂತೆ, ಶಾಶ್ವತ ಮೋಕ್ಷಫಲಕ್ಕೂ, ನಿಷ್ಕಾಮಕರ್ಮಗಳಿಗೂ, ಆಶ್ರಯನು; ಇವೆಲ್ಲವೂ ನನಗೆ ಅಧೀನವಾಗಿವೆ. ಎಲ್ಲ ಫಲಗಳಿಗೂ ಶ್ರೇಷ್ಠವಾದ ಮೋಕ್ಷಸುಖಕ್ಕೂ ನಾನೇ ಆಶ್ರಯನು. ಭಕ್ತಿಪೂರ್ವಕವಾಗಿ ನನ್ನನ್ನು ಸೇವಿಸುವವನಿಗೆ ನಿಷ್ಕಾಮಕರ್ಮಗಳಲ್ಲಿ ಪ್ರವೃತ್ತಿಯನ್ನು ಹುಟ್ಟಿಸಿ, ಅವುಗಳನ್ನು ಅವನಿಂದ ಮಾಡಿಸಿ, ಅದರಿಂದ ಅವನ ಅಂತಃಕರಣವನ್ನು ನಿರ್ಮಲಗೊಳಿಸುವೆ. ಶ್ರವಣ, ಮನನಾದಿಗಳಿಂದ ಹುಟ್ಟಿದ ಜ್ಞಾನದ್ವಾರಾ ಅವನಲ್ಲಿ ಭಕ್ತಿಯನ್ನು ಹುಟ್ಟಿಸುವೆ; ಮತ್ತು ಮೇಲ್ಕಾಣಿಸಿದ ಸಾಧನಗಳನ್ನೂ ಅನಾಯಾಸವಾಗಿ ಕೈಗೂಡಿಸಿ, ಅದರಿಂದ ತ್ರಿಗುಣಾತ್ಮಕ ಪ್ರಕೃತಿಬಂಧನದಿಂದ ಅವನನ್ನು ಬಿಡಿಸಿ, ಜಗತ್ತಿಗೆ ತಾಯಿಯಂತಿರುವ ಮಹಾಲಕ್ಷ್ಮಿಯ ಪರಮ ಅನುಗ್ರಹಕ್ಕೆ ಪಾತ್ರನನ್ನಾಗಿಮಾಡಿ, ಕೊನೆಗೆ ಅವಳ ಮುಖಾಂತರ ನನ್ನ ಸಮೀಪಕ್ಕೆ ಬರುವಂತೆಮಾಡಿ ಅವನನ್ನು ಮುಕ್ತ–ಕೋಟಿಗೆ ಸೇರಿಸಿ, ಶಾಶ್ವತವಾದ ಮೋಕ್ಷಸುಖವನ್ನು ಅವನಿಗೆ ಸೂರೆಮಾಡುವೆನು. ಅರ್ಜುನಾ, ಆದುದರಿಂದ, ನನ್ನನ್ನೇ ಸೇವಿಸಿ ಸಂಸಾರ ಸಾಗರವನ್ನು ದಾಟು. ಗುಣಗಳು ಬಂಧಕವೆಂದು ಭಾವಿಸಿ, ಅವುಗಳಿಂದ ಪಾರಾಗಲು ಪ್ರವೃತ್ತಿಯುಂಟಾಗಬೇಕೆಂದು ಗುಣ ಮತ್ತು ಅವುಗಳ ಕಾರ್ಯಗಳನ್ನು ಕುರಿತು ನಿನಗೀ ಉಪದೇಶವು. ಲೋಕದಲ್ಲಿ ಕೂಡ ಸಮುದ್ರಪ್ರವಾಹವು ಅಗಾಧವೆಂದು ತಿಳಿದರೇನೇ ಅದನ್ನು ದಾಟಲು ಸಾಧನವಾದ ಹಡಗವನ್ನಾಶ್ರಯಿಸುವ ಬುದ್ಧಿಯುಂಟಾಗುವದು ಪ್ರಸಿದ್ಧವಿದೆಯಷ್ಟೇ?

**इति श्रीमद्भगवद्गीतासूपनिषत्सु ब्रह्मविद्यायां योगशास्त्रे श्रीकृष्णार्जुनसंवादे प्रकृतित्रयगुणविभागो नाम चतुर्दशोऽध्यायः ॥ १४ ॥**

**ಅಂ** — ಈ ಮೇರೆಗೆ, ಷಡ್ಗುಣೈಶ್ವರ್ಯಸಂಪನ್ನನಾದ ಪರಮಾತ್ಮನಿಂದ ಮನೋಹರ, ಅಲಂಕಾರಿಕ ಮತ್ತು ಇಷ್ಟ ಶಬ್ದಗಳಿಂದ ಉಪದೇಶಿಸಲ್ಪಟ್ಟದ್ದೂ, ಉಪನಿಷತ್ತಿಗೆ ಸಮಾನವೂ ಪರಬ್ರಹ್ಮವಿಷಯಕ ವಿದ್ಯೆಯೂ ಎನಿಸುವ ಮತ್ತು ಕರ್ಮ ಯೋಗಾದಿಗಳನ್ನು ಪ್ರತಿಪಾದಿಸುವ, ಶ್ರೀಕೃಷ್ಣನಿಗೂ ಅರ್ಜುನನಿಗೂ ನಡೆದ ಸಂವಾದರೂಪ **ಗೀತಾಶಾಸ್ತ್ರದಲ್ಲಿಯ ಪ್ರಕೃತಿತ್ರಯಗುಣವಿಭಾಗವೆಂಬ ಹದಿನಾಲ್ಕನೆಯ** ಅಧ್ಯಾಯವು ಮುಗಿಯಿತು.



# ೧೫ನೆಯ ಅಧ್ಯಾಯವು.

೧. ೧೪ನೆಯ ಅಧ್ಯಾಯದಲ್ಲಿ ಸಂಸಾರಕ್ಕೆ ಕಾರಣವಾದ ಪ್ರಕೃತಿ, ಮಹದಹಂಕಾರ, ಮುಂತಾದ ತತ್ವಸಮೂಹವುಳ್ಳ ಮತ್ತು 'ಕ್ಷೇತ್ರ' ಶಬ್ದವಾಚ್ಯವಾದ ಜಗತ್ತಿನ ಸ್ವರೂಪವು ಹೇಳಿ ಇದೆ, ಮತ್ತು (೧೪–೨೦) ನೆಯ ಶ್ಲೋಕದಲ್ಲಿ ಸಂಸಾರವನ್ನು ಮಿಕ್ಕುವ ಕಾರಣವು ಪರಮಾತ್ಮ ವಿಷಯಕ ಜ್ಞಾನವೆಂದು ಹೇಳಿಯಿದೆ; ಅವೆರಡು ವಿಷಯಗಳೇ ಪ್ರಕೃತ ಅಧ್ಯಾಯದಲ್ಲಿ ನಿರೂಪಿಸಲ್ಪಡುವವು. ಹಾಗಾದರೆ, ಇವೆರಡನ್ನು ಹಿಂದಿನ ಅಧ್ಯಾಯದಲ್ಲಿ ಹೇಳಿಲ್ಲವೇ ? ಎಂದು ಕೇಳಿದರೆ, ಆ ಅಧ್ಯಾಯದಲ್ಲಿ ಸಂಸಾರಕ್ಕೆ ಕಾರಣಗಳಾದ ಗುಣಗಳ ಪ್ರವೃತ್ತಿಯು ಅಲ್ಪಾಂಶದಿಂದಲೇ ಹೇಳಲ್ಪಟ್ಟಿದೆ, ಆದರೆ, ಇಲ್ಲಿ ಸಂಸಾರಕ್ಕೆ ಕಾರಣವಾದ ಪ್ರಕೃತ್ಯಾದಿಗಳೆಂಬ ಜಗತ್‌ಸ್ವರೂಪವನ್ನು ಪೂರ್ಣವಾಗಿ ಹೇಳಿ, ಅದನ್ನು ನಾಶಗೊಳಿಸಲು ಇಚ್ಛೆಯನ್ನು ಹುಟ್ಟಿಸಿ, ಅದಕ್ಕೆ ಬೇಕಾದ ಸಾಧನವು ಯಾವುದೆಂದು ತಿಳಿಯಲಿಚ್ಛಿಸುವವನನ್ನು ಕುರಿತು ಹಿಂದೆ ಹೇಳಿದ ಅದನ್ನು ಮೀರಲು ಅವಶ್ಯವಿರುವ ಸಾಧನವು ಮತ್ತೆ ನಿರೂಪಿಸಲ್ಪಡುವದು. ಆದುದರಿಂದಲೇ ಹಿಂದಿನ ಅಧ್ಯಾಯನಂತರ ಈ ಅಧ್ಯಾಯದ ಪ್ರಸಕ್ತಿಯುಂಟಾಯಿತು, ಅಂದರೆ, ಸಂಸಾರವನ್ನು ದಾಟುವ ಸಾಧನವಿಸ್ತಾರವೂ, ಪ್ರಸಂಗಾನುಸಾರವಾಗಿ ಪರಮಾತ್ಮನ ಮಹಿಮೆಯೂ, ಇವೆರಡು ಈ ಅಧ್ಯಾಯದಲ್ಲಿ ನಿರೂಪಿಸಲಾಗುವವೆಂದು ತಿಳಿಯಬೇಕು. ಈಗ ಜಗತ್ತಿನ ಸ್ವರೂಪವನ್ನು ಮುಂದಿನ ಎರಡುವರೆ ಶ್ಲೋಕದಿಂದ ತೆಗೆದುಕೊಂಡಿದ್ದು; ಅಥವಾ, " ದೋಷರಹಿತ ಭಕ್ತಿಯೋಗದಿಂದ ನಿನ್ನನ್ನು ಸೇವಿಸುವವನು ಗುಣಗಳನ್ನು ನಾಶಗೊಳಿಸಿ, ಪರಬ್ರಹ್ಮನನ್ನು ಹೊಂದುವನೆಂದು ನೀನೇ ಹೇಳಿರುವಿ, ಆದರೆ, ನಿನ್ನನ್ನು ಸೇವಿಸುವವನು ನಿನ್ನನ್ನು ಹೊಂದಲಿ; ಬ್ರಹ್ಮನನ್ನು ಹೊಂದುವ ಬಗೇಹೇಗೆಂದು ಕೇಳಿದರೆ, ಯಾವ ಬ್ರಹ್ಮನನ್ನು ಹೊಂದಿರುವೆನೆಂದು ನೀನು ಹೇಳಿರುವಿಯೋ ಆ ಬ್ರಹ್ಮನಿಗೆ ( ಮಹಾಲಕ್ಷ್ಮಿಗೆ ) ನೀನು ಆಧಾರನೆಂದು ಹೇಳಿರುವಿ; ಅಂದಬಳಿಕ ಗುಣಗಳನ್ನು ನಾಶಗೊಳಿಸುವದೆಂದರೇನು ? ಪರಬ್ರಹ್ಮನ ಪ್ರಾಪ್ತಿಯೆಂದರೇನು ? ಮತ್ತು ಆ ಭಕ್ತಿಯೋಗವು ಎಂತಹದು ? ಸುದೃಢಸ್ನೇಹವೇ ಭಕ್ತಿಯೆಂದು ಹೇಳಿದರೆ, ಪರಮಾತ್ಮನ ಮಹಾಮಹಿಮೆಯ ಜ್ಞಾನಪೂರ್ವಕ ಸುದೃಢಸ್ನೇಹವೇ ಭಕ್ತಿಯೋ ? ಗುಣಗಳನ್ನು ನಾಶಗೊಳಿಸಿದರೆ, ಪರಬ್ರಹ್ಮನನ್ನು ಹೊಂದಲು ಸಮರ್ಥನಾಗುವನೆಂದು ಹೇಳಿದ್ದರಿಂದ, ಗುಣನಾಶಮಾಡದ ಮೊದಲು, ಅವುಗಳಿಂದ ಬದ್ಧನಾಗಿ, ಅಜ್ಞಾನಮೋಹಾದಿಗಳಿಂದಲೂ, ರಾಗದ್ವೇಷಾದಿಗಳಿಂದಲೂ, ಸುಖದುಃಖಾದಿಗಳಿಂದಲೂ, ಸಂಸಾರಚಕ್ರದಲ್ಲಿ ತಿರುಗುವನೆಂದು ಹೇಳಿದಂತಾಯಿತು; ಅಂದಬಳಿಕ, ಆ ಸಂಸಾರ ಬಂಧನವು ಎಂತಹದು ? ಅದನ್ನು ಭಕ್ತಿಯೋಗವೆಂಬ ಶಸ್ತ್ರದಿಂದ ಛೇದಿಸುವ ಬಗೆ ಏನು ? ಇದನ್ನೆಲ್ಲ ವಿಂಗಡಿಸಿ, ಉಪದೇಶಿಸಬೇಕೆಂದು" ನುಡಿದ ಅರ್ಜುನನ ವಾಕ್ಯವನ್ನು ಕೇಳಿ, ಅದಕ್ಕೆ ಸಮಾಧಾನ ಹೇಳಿದ್ದು:—

**श्रीभगवानुवाच ।**

**ऊर्ध्वमूलमधःशाखमश्वत्थं प्राहुरव्ययम् ।**
**छंदांसि यस्य पर्णानि यस्तं वेद स वेदवित् ॥ १ ॥**

ಅಂ—ಇಲ್ಲಿ 'ಊರ್ಧ್ವ' ಶಬ್ದವು ಉನ್ನತಾರ್ಥದಲ್ಲಿದ್ದು, ಶ್ರೀವಿಷ್ಣು, ಚಿದಚಿತ್‌ಪ್ರಕೃತಿಪರವಾಗಿದೆ ಎಂದು ತಿಳಿಯಬೇಕು. ಏಕೆಂದರೆ, ಶ್ರೀವಿಷ್ಣುವು ಸರ್ವರಿಗೂ, ಚಿತ್‌ಪ್ರಕೃತಿಯು ಪರತಂತ್ರ

ರಾದ ಎಲ್ಲರಿಗೂ, ಅಚಿತ್‌ಪ್ರಕೃತಿಯು ಅಚೇತನಪದಾರ್ಥಗಳಿಗೂ, ಅನುಕ್ರಮವಾಗಿ ಉತ್ತಮರು. ರೂಢಿಯಲ್ಲಿರುವ ವೃಕ್ಷಕ್ಕೆ ಬೇರುಗಳು ಹೇಗೋ ಹಾಗೆ, ಸವಿಕಾರ–ಅವ್ಯಕ್ತಾದಿ ಇಪ್ಪತ್ತೈದು ತತ್ವಾತ್ಮಕವಾದ ಜಗತ್ತೆಂಬ ವೃಕ್ಷಕ್ಕೆ ಮೇಲ್ಕಾಣಿಸಿದ ಉತ್ತಮರಾದ ಶ್ರೀವಿಷ್ಣು, ಚಿದಚಿತ್‌ಪ್ರಕೃತಿಗಳು ಬೇರುಗಳಂತಿರುವರು. ಈ ಜಗತ್ತೆಂಬ ವೃಕ್ಷಕ್ಕೆ 'ಅಶ್ವತ್ಥ' ವೆಂಬ ಬಿರುದುಂಟು; ಏಕೆಂದರೆ, ಅದು ಒಂದೇ ವಿಧವಾಗಿರದೆ ಚಂಚಲವಾಗಿದೆ. ಜಗತ್ತೆಂಬುದೇ ಚಿದಚಿದಾತ್ಮಕವೃಕ್ಷವು. ಇಲ್ಲಿ ವಿವೇಕ ವೇನಂದರೆ, ಸಾಮಾನ್ಯವೃಕ್ಷಕ್ಕೆ ಹೇಗೆ ಧರಾದೇವಿಯು ಆಧಾರಳೋ ಹಾಗೆ ಜಗತ್ತೆಂಬ ವೃಕ್ಷಕ್ಕೆ ಶ್ರೀವಿಷ್ಣುವು ಸ್ವತಂತ್ರ ಆಧಾರನು. ಸಾಮಾನ್ಯವೃಕ್ಷಕ್ಕೆ ಮಣ್ಣಿನ ಪರಿಣಾಮವಾದ ಮೂಲವೇ ಹೇಗೆ ಕಾರಣವೋ ಹಾಗೆ, ಸತ್ವಾದಿ ತ್ರಿಗುಣಾತ್ಮಕ ಜಡಪ್ರಕೃತಿಯು ಉಪಾದಾನ ಕಾರಣಳು. ಜಗತ್ ವೃಕ್ಷವು ಮೂರು ಬೇರುಗಳುಳ್ಳದ್ದು. ಜಡಪ್ರಕೃತಿಯು ಕೂಡ ತ್ರಿಗುಣಾತ್ಮಕವಾದುದರಿಂದ ಮೂರು ಗುಣಗಳಿಂದ ಮೂರು ಬೇರುಗಳಾಗಿ ಪರಿಣಮಿಸುವದು. ಅದೇ ಮೇರೆಗೆ ಚಿತ್‌ಪ್ರಕೃತಿಯು ಜಡ ಪ್ರಕೃತಿಗೆ ಅಭಿಮಾನಿಯಾದ್ದರಿಂದ ಮೂಲ ಬೇರಿನ ( ಶ್ರೀವಿಷ್ಣುವಿನ ) ಭಂಗವೆಂತಲೇ ತಿಳಿಯಬೇಕು. ಇನ್ನು, ಅಧಃ ಶಬ್ದವು 'ಕೀಳ' ಎಂಬರ್ಥವನ್ನು ಕೊಡುವದು. ಜಗದಲ್ಲಿಯ ವೃಕ್ಷಕ್ಕೆ ಹೇಗೆ ಶಾಖೆ ಗಳೋ ಹಾಗೆ ಈ ವೃಕ್ಷಕ್ಕೂ ಹಿಂದೆ ಹೇಳಿದ ವಿಷ್ಣು ಮೊದಲಾದ ಮೂವರಿಗಿಂತ ಕೀಳವಾದ ಪಂಚ ಮಹಾಭೂತಗಳೂ, ಮಹತ್, ಅಹಂಕಾರ, ಬುದ್ಧಿ ಈ ಎಂಟು ಪದಾರ್ಥಗಳೂ, ಅವುಗಳ ಅಭಿಮಾನಿ ಗಳೂ, ಟೊಂಗೆಗಳಂತಿರುವರು. ಈ ವೃಕ್ಷವನ್ನು ಛೇದಿಸಲು ಶಕ್ಯವಲ್ಲ, ಏಕೆಂದರೆ, ಹಿಂದಿನ ಕಲ್ಪ ದಲ್ಲಿ ಹೇಗಿರುವದೋ ಹಾಗೆ ಅನ್ಯ ಕಲ್ಪಗಳಲ್ಲಿ ಇದು ಇರುವದು, ಅಂದರೆ, ಇದು ಪ್ರವಾಹದಿಂದ ಅನಾದಿ ಎಂದು ತಿಳಿಯಬೇಕು ಎಂದು ವಿದ್ವಾಂಸರು ಹೇಳುವರು. ವಾಡಿಕೆಯಲ್ಲಿ ವೃಕ್ಷಕ್ಕೆ ಮೊದಲು ಎಲೆ, ಆ ಮೇಲೆ ಫಲೋತ್ಪತ್ತಿಯಾಗುವದುಂಟು. ವೇದಗಳು ಕಾಮ, ಮೋಕ್ಷಗಳೆಂಬ ಫಲಗಳಿಗೆ ಕಾರಣವಾದುದರಿಂದ, ಜಗದ್‌ವೃಕ್ಷಕ್ಕೆ ವೇದವಾಕ್ಯಗಳ ಸಮೂಹವೂ, ಅದಕ್ಕೆ ಅಭಿಮಾನಿಗಳೂ, ಎಲೆಗಳಂತಿರುವವು. ಇದರಿಂದ ಜಗದ್‌ವೃಕ್ಷವು ಕಾಮ, ಮೋಕ್ಷಗಳೆಂಬ ಎರಡೇ ಫಲಗಳುಳ್ಳದ್ದೆಂದು ಹೇಳಿದಂತಾಯಿತು; ಮತ್ತು ಈ ವೃಕ್ಷವನ್ನು ಮೇಲೆ ಹೇಳಿದಂತೆ ಅರಿತವನು ವೇದಾರ್ಥವನ್ನು ಬಲ್ಲವನೆಂದು ತಿಳಿಯಬೇಕು.

**೪೦ ೪೦**—ಲೋಕದಲ್ಲಿ ಚೇತನ, ಅಚೇತನ ಎಂಬೆರಡು ಪದಾರ್ಥಗಳು. ಚೇತನಗಳಲ್ಲಿ ಉತ್ತ ಮವಾದ ಒಂದನ್ನೂ, ಅಚೇತನಗಳಲ್ಲಿ ಒಂದನ್ನೂ, ಸ್ವೀಕರಿಸಬೇಕು ಚೇತನಗಳಲ್ಲಿ ಲಕ್ಷ್ಮೀದೇವಿಯೂ, ಅಚೇತನಗಳಲ್ಲಿ ಜಡಪ್ರಕೃತಿಯೂ, ಶ್ರೀಮನ್ನಾರಾಯಣನು ಅವರಿಬ್ಬರಿಗೂ ಉತ್ತಮರು. ಈ ಮೂವರು ಚಿತ್ ಪ್ರಕೃತಿಯಿಂದ ನಿರ್ಮಿಸಲ್ಪಟ್ಟ ಜಗದ್‌ವೃಕ್ಷಕ್ಕೆ ಬೇರುಗಳಂತಿರುವರು. ಈ ಮೂವ ರಿಗಿಂತ ಕೀಳರಾದ ಪಂಚಭೂತ ಮುಂತಾದ ಎಂಟು ಪದಾರ್ಥಗಳೂ, ಅವುಗಳ ಅಭಿಮಾನಿಗಳಾದ ಬ್ರಹ್ಮಾದಿದೇವತೆಗಳೂ, ಈ ಜಗತ್‌ವೃಕ್ಷಕ್ಕೆ ಶಾಖೆಗಳಂತಿರುವರು. ಇನ್ನು ಜಗತ್‌ವೃಕ್ಷವೇ ಅಶ್ವತ್ಥ ವೃಕ್ಷವೆಂದು ತಿಳಿ. ಈ ಜಗತ್ತಿಗೆ ವೃಕ್ಷದ ಸಾಮ್ಯ ಕೊಡುವ ಕಾರಣವೇನೆಂದು ಕೇಳಿದರೆ, ವೃಕ್ಷವು ಛೇದಿಸಲು ಯೋಗ್ಯವಾದುದರಿಂದ, ಕಡಿಯಲಿಕ್ಕೆ ಸಾಧನವಾದ ಶಸ್ತ್ರಸಂಪಾದನೆಯ ಪ್ರವೃತ್ತಿಯನ್ನು ಹುಟ್ಟಿಸಲು ಹಾಗೆ ಹೇಳಿಯಿದೆ. ಅದನ್ನು ಕಡಿಯುವದು ಅವಶ್ಯವೋ ಹೇಗೆಂದು ಕೇಳಿದರೆ, ಯಾವ ನೊಬ್ಬನು ಮನೆಯಿಂದ ಹೊರಟು ಉದ್ದಿಷ್ಟ ಸ್ಥಾನಕ್ಕೆ ಹೋಗುವಾಗ ಮಾರ್ಗದಲ್ಲಿ ಒಂದು ಮಹಾವೃ ಕ್ಷವು ಅಡ್ಡಲಾಗಿ ಬಿದ್ದದ್ದನ್ನು ಕಂಡರೆ, ಅದನ್ನು ಕಡಿದು ತೆಗೆಯದೆ ಅವನು ತನ್ನ ಧ್ಯೇಯಸ್ಥಾನಕ್ಕೆ ಹೋಗಲರಿಯನು; ಅದರಂತೆಯೇ, ಪ್ರಕೃತ ಮೋಕ್ಷವು ಉದ್ದಿಷ್ಟವಿದ್ದು ಅದರ ಕಡೆಗೆ ಹೋಗುವ ಶ್ರವಣ, ಮನನಗಳೆಂಬ ದಾರಿಯಲ್ಲಿ ಪ್ರತಿಬಂಧಕವಾಗಿ ಬಿದ್ದಿರುವ ಪ್ರಕೃತಿಸಮುದಾಯವನ್ನು ಭಕ್ತಿ, ವಿರಕ್ತಿಗಳೆಂಬ ಶಸ್ತ್ರಗಳಿಂದ ಕಡಿದು ಇಷ್ಟಸ್ಥಾನಕ್ಕೆ ಸಾಗುವನು. ಆದುದರಿಂದ ಕಡಿಯುವ ಅವಶ್ಯ

ಕತೆಯುಂಟೆಂದು ತೋರಿಸಲು ಇಲ್ಲಿ ವೃಕ್ಷದ ಸಾಮ್ಯವನ್ನು ಕೊಡಲಾಗಿದೆ, ಅದಂತಿರಲಿ. ವೃಕ್ಷಸಾ ಮ್ಯವನ್ನು ಹೇಳುವಾಗ ಅಶ್ವಥ್ಥವೃಕ್ಷವನ್ನೇ ಆರಿಸಿದ್ದೇಕೆಂದು ಕೇಳಿದರೆ, ಉಪಮಾನಕ್ಕಾಗಿ ಯಾವುದಾದ ರೊಂದು ಮಹಾವೃಕ್ಷವು ಅವಶ್ಯವು. ಆಲ, ಹುಣಸೆ, ಮಾವು ಮುಂತಾದ ಗಿಡಗಳ ಸಾಮ್ಯಕೊಟ್ಟರೆ, ಅವುಗಳಿಗೆ ವಾಚಕವಾದ ಶಬ್ದಪ್ರಯೋಗವು ಅವಶ್ಯವು. ಇಲ್ಲಿ, ಜಗದ್ವೃಕ್ಷದಲ್ಲಿ ವಿಶ್ವಾಸವನ್ನಿಡ ಕೂಡದೆಂಬ ಅರ್ಥವು ಬೇಕಿದೆ. ಆದುದರಿಂದ ಈ ಮರಗಳು ಉಪಯೋಗವಾಗಲರಿಯವು. ಅಂತೆಯೇ, ಅಶ್ವಥ್ಥವೃಕ್ಷದ ಸಾಮ್ಯಕೊಡಲಾಗಿದೆ. ಜಗದ್ವೃಕ್ಷವು ಕುದುರೆಯಂತೆ ಅತಿವೇಗವುಳ್ಳದ್ದೂ, ನಶ್ವ ರವೂ, ಇರುವದರಿಂದ ಅದನ್ನು ನಂಬಕೂಡದೆಂಬ ಅರ್ಥವು ಸಲ್ಲುವದು. ( ಕಾಠಕ ೬–೧ ) ಎಂಬ ಮಂತ್ರದಲ್ಲಿ ಸಹ ಇದೇ ಸಾಮ್ಯ ಉಂಟು. ಈ ವೃಕ್ಷಕ್ಕೆ ಪ್ರತಿಕ್ಷಣದಲ್ಲಿ ನಾಶವಿದ್ದರೂ ( ೧–೧೪ ನಾರಾಯಣಶ್ರುತಿ ) ( ೧–೩–೩೦ ಬ್ರಹ್ಮಸೂತ್ರ ) ಇವುಗಳಿಗನುಸರಿಸಿ, ಅದರ ನಾಮರೂಪಗಳು ಒಂದೇ ವಿಧವಾಗಿದ್ದು ಅದು ಪ್ರವಾಹದಿಂದ ನಿತ್ಯವಾಗಿದೆ. ಈ ವಿಷಯಕ್ಕೆ ಹಿಂದೆ (೯–೧೦) ನೆಯ ಶ್ಲೋಕದಲ್ಲಿ ಹೇಳಿಯಿದೆ.

೨.

अधश्चोर्ध्वं प्रसृतास्तस्य शाखा
गुणप्रवृद्धा विषयप्रवालाः ।
अधश्च मूलान्यनुसंततानि
कर्मानुबंधीनि मनुष्यलोके ॥ २ ॥

ಅಂ—ಜಗದ್ವೃಕ್ಷಕ್ಕೆ ಶಾಖೆಗಳಾಗಿರುವ ಮಹದಾದಿ ಎಂಟು ಪದಾರ್ಥಗಳು ಚಿದಚಿದ್ರೂಪ ಗಳಾಗಿವೆ. ಕಾರ್ಯಗಳಾದ ಶರೀರಾದಿಗಳು ಅವುಗಳಿಗಿಂತ ಕೀಳವಾಗಿವೆ. ಅವುಗಳು ತಮಗಿಂತ ಉತ್ತಮವಾದ ಮತ್ತು ಕಾರಣವಾದ ಅವ್ಯಕ್ತದಲ್ಲಿ ಸೂಕ್ಷ್ಮರೂಪದಿಂದ ವ್ಯಾಪಿಸಿಕೊಂಡಿವೆ. ಈ ಶಾಖೆ ಗಳು ಸತ್ವಾದಿ ಗುಣಗಳಿಂದ ಬೆಳೆದಿರುವವು, ಅಂದರೆ, ಗುಣಗಳು ಮೂಲ ಬೇರುಗಳಾದುದರಿಂದ ಅಂಥ ಬೇರುಗಳಿಂದಲೇ ಬೆಳೆದ ವೃಕ್ಷದಲ್ಲಿ ಶಾಖೆಗಳ ವೃದ್ಧಿಯು ಕಂಡು ಬರುವದೆಂಬ ಅಭಿಪ್ರಾಯವು. ತಾತ್ಕಾ ಲಿಕ ಸುಖಕ್ಕೆ ಕಾರಣವಾದ್ದರಿಂದ ಶಬ್ದಾದಿ ವಿಷಯಗಳೇ ಹವಳಕ್ಕೆ ಸದೃಶವಾದ ಪಲ್ಲವಗಳಂತಿರು ವವು. 'ಊರ್ಧ್ವ'ಪದದಿಂದ ಹೇಳಲ್ಪಟ್ಟ ವಿಷ್ಣು, ಚೇತನಾಚೇತನ ಪ್ರಕೃತಿ, ಸತ್ವ, ರಜ, ತಮಗುಣ ಗಳು, ಆ ವೃಕ್ಷದ ಕೆಳಭಾಗದಲ್ಲಿ ಅಂದರೆ ಶಾಖೆಗಳಲ್ಲಿ ವ್ಯಾಪಿಸಿರುವವು. ಆ ಬೇರುಗಳು ಕಾಮ್ಯ ಕರ್ಮಕ್ಕನುಸರಿಸಿರುವವು; ಏಕೆಂದರೆ, ಮನುಷ್ಯಲೋಕದಲ್ಲಿ ಕಾಮ್ಯಕರ್ಮಕ್ಕನುಸರಿಸಿಯೇ ಫಲವಾ ಗುವದು ಕಂಡ ಮಾತಾಗಿದೆ. ಈ ವಿಷಯಕ್ಕೆ ಭಾಲ್ಲವೇಯ ಶಾಖೆಯಲ್ಲಿ " ಈ ಪ್ರಪಂಚವೆಂಬ ವೃಕ್ಷಕ್ಕೆ ಪರಬ್ರಹ್ಮನು ಬೇರಿನಂತಿರುವನು; ಪ್ರಕೃತಿಯು ಬೇರು ಸಹಿತವಾಗಿರುವಳು; ಸತ್ವಾದಿಗುಣ ಗಳು ಹಿಂದಿನಿಂದಾದ ಬೇರುಗಳು; ವೇದಗಳು ಎಲೆಗಳು; ಪಂಚಭೂತ, ದೇವ, ಮನುಷ್ಯ, ಪಶು, ಪಕ್ಷ್ಯಾ ದಿಗಳೇ ಇದಕ್ಕೆ ಶಾಖೆಗಳು; ಎಲೆಗಳ ನಂತರ ಫಲಗಳು ಹುಟ್ಟುವವು; ಪಂಚತನ್ಮಾತ್ರಗಳು ಬೇರುಗ ಳಂತಿದ್ದು, ಮುಕ್ತಿ–ಅಮುಕ್ತಿಗಳೇ ಫಲಗಳಾಗಿವೆ, ಮೋಕ್ಷವು ರಸಕ್ಕೆ ಸದೃಶವಾಗಿದೆ" ಎಂದು ಹೇಳಿ ಇದೆ.

ವಿ ಅಂ·— ಇಲ್ಲಿ ವಿವೇಕವೇನಂದರೆ, ಮುಖ್ಯ ಬೇರಿನಿಂದ ಕಾಂಡವೃದ್ಧಿ; ಅಂದರೆ ಬೊಡ್ಡೆ ಯಿಂದ ಟೊಂಗೆಗಳು ಬೆಳೆಯುವವು. ಸತ್ವಾದಿಗುಣಗಳು ಅವಾಂತರ ಬೇರು ಅಂದರೆ, ಟೊಂಗೆಗಳಾ ದ್ದರಿಂದ, ಶಾಖಾಸ್ಥಾನದಲ್ಲಿರುವ ಮಹದಂಕಾರಗಳ ಪರಿಣಾಮ ವೃದ್ಧಿಯಾಗುವದು. ಇನ್ನುಮೇಲೆ

ಹೇಳಿದ ವಿಷ್ಣು, ಚೇತನಾಚೇತನ ಪ್ರಕೃತಿ, ಸತ್ವ–ರಜ–ತಮಗಳು, ಹೀಗೆಲ್ಲ ಮಹದಹಂಕಾರಾದಿ ಜಡಗಳಿಗೂ, ಅವುಗಳಿಗೆ ಅಭಿಮಾನಿಗಳಾದ ದೇವತೆ ಮುಂತಾದ ಚೇತನಗಳಿಗೂ, ಸಂಬಂಧಿಸಿವೆ ಎಂದು ಹೇಳಿ ಇದೆ. ಅದರಿಂದ ಎಲ್ಲಕ್ಕೂ ಸಾಮ್ಯಸ್ಥಿತಿಯುಂಟೆಂದು ಹೇಳಿದಂತಾಯಿತಲ್ಲವೇ? ಎಂದು ಕೇಳಿದರೆ, ಪ್ರಾಣಿಗಳ ಕರ್ಮಕ್ಕನುಸರಿಸಿ ಅವುಗಳ ಸಂಬಂಧವಿರುವದರಿಂದ ಎಲ್ಲಕ್ಕೂ ಸಾಮ್ಯ ಸ್ಥಿತಿಯಿಲ್ಲ.

೩.

न रूपमस्येह तथोपलभ्यते
नांतो न चादिर्न च संप्रतिष्ठा ।
अश्वत्थमेनं सुविरूढमूल-
मसंगशस्त्रेण दृढेन छित्त्वा ॥ ३ ॥

**ಅಂ**—ಈ ಪ್ರಪಂಚವೆಂಬ ವೃಕ್ಷದ ರೂಪವು ಹೇಗಿರುವದೆಂಬುದು ಇಹಲೋಕದಲ್ಲಿ ಕಾಣುವದಿಲ್ಲ; ಏಕೆಂದರೆ, ಅದಕ್ಕೆ ವಿಕಾರವುಂಟು. ಪ್ರಪಂಚಕ್ಕೆ ಸೃಷ್ಟಿ ಸಂಹಾರಾದಿಗಳಾಗುವದರಿಂದ 'ಆದ್ಯಂತ' ಪದಗಳಿಂದ ಹೇಳಲ್ಪಟ್ಟ ವಿಷ್ಣುವು ಅದರಲ್ಲಿ ಅಂತರ್ಗತನಾದಾಗ್ಯೂ, ಅವನು ಕಾಣುವದಿಲ್ಲ. **नान्त', न चादि., न च सम्प्रविष्ट उपलभ्यत** (ಈ ಪ್ರಪಂಚ ವೃಕ್ಷದ ಸೃಷ್ಟಿ, ಸ್ಥಿತಿ, ನಾಶಗಳನ್ನು ತಿಳಿಯುವದು ಅಶಕ್ಯವು; ಅಂದರೆ ಅದರ ಆದ್ಯಂತಕರ್ತನೂ, ಅಂತರ್ಗತನೂ, ಆದ ವಿಷ್ಣುವು ಕೂಡ ಕಾಣುವದಿಲ್ಲ) ಈ ಮೂರು ವಾಕ್ಯಗಳಿಂದ ಕಾಣುವದಿಲ್ಲೆಂದು ಹೇಳಿದ್ದು ಆದರಾರ್ಥದಲ್ಲಿ ಇದೆಯೆಂದು ತಿಳಿಯಬೇಕು. ಪ್ರಬಲವಾದ ವಿಷ್ಣ್ವಾದಿಗಳೇ ಮೂಲವಾಗಿವುಳ್ಳ ಹಿಂದೆ ಹೇಳಿದ ಅಶ್ವತ್ಥವೆಂಬ ಪ್ರಪಂಚವೆಂಬ ವೃಕ್ಷವನ್ನು ಸಂಗರಹಿತಜ್ಞಾನವೆಂಬ ಖಡ್ಗದಿಂದ ಛೇದಿಸಬೇಕು; ಅಂದರೆ, ಮೂಲಕಾರಣನಾದ ವಿಷ್ಣುವು ಪ್ರಕೃತ್ಯಾತ್ಮಕ ಜಗತ್ತಿಗಿಂತ ವಿಲಕ್ಷಣನೆಂತಲೂ, ಜಗತ್ತು ಅವಾಂತರ ಭೇದವುಳ್ಳದ್ದೆಂತಲೂ, ಪರತಂತ್ರವೆಂತಲೂ, ಪ್ರವಾಹರೂಪದಿಂದ ನಾಶರಹಿತವೆಂತಲೂ, ತಿಳಿಯಬೇಕೆಂಬ ಅರ್ಥವು; ಅಂದರೆ, ಜ್ಞಾನರೂಪ ಖಡ್ಗದಿಂದಲೇ ಅದನ್ನು ಕಡಿಯಬೇಕೆಂಬ ಅರ್ಥವು.

**ವಿಂ ಅಂ**— ಈ ಪ್ರಪಂಚ–ವೃಕ್ಷವು ಮುಖ್ಯಕಾರಣಗಳಿಂದ ಯುಕ್ತವಾಗಿದೆ. ಅದಕ್ಕೆ ಕರ್ಮವಾಸನೆ, ಕರ್ಮಗಳು ಅವಾಂತರಕಾರಣಗಳಾಗಿವೆ. ಆದುದರಿಂದ, ಅಂಥ ವೃಕ್ಷವನ್ನು ತೀಕ್ಷ್ಣವಾದ ಶಸ್ತ್ರದಿಂದ ಛೇದಿಸಬೇಕು. ಆ ಶಸ್ತ್ರವು ಯಾವುದೆಂದು ಕೇಳಿದರೆ, ಸಂಗರಾಹಿತ್ಯವು. ಆ ಸಂಗವು ಎಂತಹದೆಂದರೆ, ವಿಷಯಗಳಲ್ಲಿ ಆಸಕ್ತಿಯಿಲ್ಲದ ವೈರಾಗ್ಯರೂಪವು. ಹಾಗಾದರೆ, ವಿಷಯ ವೈರಾಗ್ಯದಿಂದಲೇ ಪ್ರಪಂಚ–ವೃಕ್ಷದ ಛೇದನೆಯಾಗಬಹುದೇ? ಎಂದು ಕೇಳಿದರೆ, 'ಅ'ಕಾರವಾಚ್ಯ ಪರಮಾತ್ಮನಲ್ಲಿ ಭಕ್ತಿರೂಪ ಸಂಗರಾಹಿತ್ಯವೇ ಅದರ ಛೇದನವು. ಇಂತಹ ಶಸ್ತ್ರದಿಂದ ಪ್ರಪಂಚ–ವೃಕ್ಷವನ್ನು ಛೇದಿಸತಕ್ಕದ್ದು. ಇಲ್ಲಿ ಛೇದನೆಯೆಂದರೆ, ಕೆಲವೆಡೆ ನಾಶಗೊಳಿಸುವದು, ಮತ್ತೆ ಕೆಲವೆಡೆ ದೂರಮಾಡೋಣವು, ಇನ್ನು ಕೆಲವೆಡೆ ವಿವೇಕಪೂರ್ವಕ ಯಥಾರ್ಥಜ್ಞಾನವನ್ನು ಹೊಂದೋಣವು. ಭಕ್ತಿವೈರಾಗ್ಯಗಳು ಅವಶ್ಯವೆಂದು ಹಿಂದೆ (೬–೩೫,೧೩–೯,೧೩–೧೧,೧೩–೮) ನೆಯ ಶ್ಲೋಕಗಳಲ್ಲಿ ಹೇಳಿ ಇದೆ. ಹೆಮ್ಮರವನ್ನು ತೀಕ್ಷ್ಣವಲ್ಲದ ಶಸ್ತ್ರದಿಂದ ಛೇದಿಸುವದು ಅಶಕ್ಯವಾಗುವಂತೆ ಸುದೃಢವಾದ ಭಕ್ತಿವಿರಕ್ತಿಗಳು ಇರದಿದ್ದರೆ ಪ್ರಪಂಚ–ವೃಕ್ಷವನ್ನು ಛೇದಿಸುವದು ಅಶಕ್ಯವಾಗುವದು. ಆದ್ದರಿಂದ ಪರಮಾತ್ಮನಲ್ಲಿ ಭಕ್ತಿಯನ್ನೂ, ಅನ್ಯತ್ರದಲ್ಲಿ ವಿರಕ್ತಿಯನ್ನೂ, ಸಂಪಾದಿಸಲು ಯತ್ನಿಸಬೇಕು.

೪.

तत: पदं तत्परिमार्गितव्यम्
यस्मिन्गता न निवर्तंति भूयः ।
तमेव चाद्यं पुरुषं प्रपद्ये
यतः प्रवृत्तिः प्रसृता पुराणी ॥ ४ ॥

ಅಂ—ಪರಾಪರತತ್ವಗಳನ್ನು ಚನ್ನಾಗಿ ತಿಳಿದಬಳಿಕ–'ಊರ್ಧ್ವ'ಪದದಿಂದ ಹೇಳಿದ ಪರಬ್ರಹ್ಮ ನನ್ನು ಶ್ರವಣಾದಿಗಳಿಂದ ವಿಷಯೀಕರಿಸಬೇಕು. ಅವನು ಸಕಲ ಜಗತ್ತಿಗಿಂತ ವಿಲಕ್ಷಣನೆಂಬ ಜ್ಞಾನವಾದರೇನೇ ಅವನ ಸ್ವರೂಪವನ್ನು ಶೋಧಿಸಲು ಶಕ್ಯವೆಂಬ ಅಭಿಪ್ರಾಯವು. ಅವನು ಎಂಥವ ನೆಂದರೆ, ಅವನನ್ನು ಹೊಂದಿದವರು ಗರ್ಭಯಾತನೆಯನ್ನುಂಟುಮಾಡುವ ಸಂಸಾರಕ್ಕೆ ತಿರಿಗಿಬರುವ ದಿಲ್ಲ. ಪ್ರಪಂಚವೃಕ್ಷದ ಛೇದನೆಗಾಗಿ ಉಪಾಯ ಹೇಳಿದ್ದು. ಅನಾದಿಕಾಲದಿಂದಿರುವ ಸಂಸಾರ ಪ್ರವೃತ್ತಿಯು ಯಾವನಿಂದ ವಿಸ್ತೃತವಾಗಿರುವದೋ, ಆ ಮುಖ್ಯನಾದ ಶ್ರೀವಿಷ್ಣುವನ್ನು ಮೊರೆ ಹೋಗಬೇಕು. ಅದರಿಂದಲೇ ಅದರ ಛೇದನೆಯಾಗುವದು. ಈ ವಿಷಯದಲ್ಲಿ "ಜೀವ ಸಮುದಾ ಯವು ಪರಮಾತ್ಮನ ಭಿನ್ನಾಂಶವಾಗಿದೆ; ಆದುದರಿಂದ ಅವನನ್ನೇ ಮೊರೆಹೋಗಬೇಕು" ಎಂದು ನಾರಾ ಯಣ ಶ್ರುತಿಯ ವಚನವುಂಟು.

ವಿಂ ಅಂ—ಭಕ್ತಿವಿರಕ್ತಿಗಳಿಲ್ಲದೆ ಸಂಸಾರವೆಂಬ ವೃಕ್ಷವನ್ನು ಛೇದಿಸುವದು ಶಕ್ಯವಲ್ಲ. ಅದನ್ನು ಛೇದಿಸಿದರೇನೇ ಭಗವದಪರೋಕ್ಷಜ್ಞಾನವಾಗುವದು ಶಕ್ಯ. ಈ ಬಗ್ಗೆ (ಭಾಂ ೮–೧೫–೧, ಬ್ರಂ ಸೂಂ ೪–೪–೨೩, ಗೀತಾ ೮–೧೫,೮–೧೬,೮–೨೧) ಇವುಗಳಲ್ಲಿ ಹೇಳಲ್ಪಟ್ಟಿದೆ. ಇಲ್ಲಿ निवर्तन्ति ಎಂದು ಹೇಳಿದ ಪರಸ್ಮೈಪದ ಪ್ರಯೋಗವು "ತಿರುಗಿ ಜನ್ಮಕ್ಕೆ ಬರದೆ, ಅವನ ಲೋಕದಲ್ಲಿಯೇ ಅವನ ಸೇವಕ ನಾಗಿಯೇ ಹೊರ್ತು ತನಗಾಗಿ ಅಲ್ಲವೆಂಬ ಅನುಸಂಧಾನವು ಮೋಕ್ಷೇಚ್ಛುಗಳಿಗೆ ಇರಬೇಕು" ಎಂದು ಸೂಚಿಸುವದು. ಇನ್ನು, ಹಿಂದೆ ಹೇಳಿದ ಶಸ್ತ್ರವನ್ನು ದೊರಕಿಸುವದು ಅಶಕ್ಯವೆಂದು ಆಕ್ಷೇಪಿಸಿದರೆ, ಅನಾದಿಕಾಲದಿಂದ ನಡೆದು ಬಂದಿರುವ ಈ ಸಂಸಾರವು ಪರಮಾತ್ಮನಿಂದ ಸಾಗಿರುವದರಿಂದ (ತೈಂ ೨–೬) ಸಂಸಾರಕ್ಕೆ ಮೂಲಕಾರಣನಾದ ಪರಮಾತ್ಮನಿಗೆ ಮೊರೆಹೋಗಬೇಕು. ಅದರಿಂದ ಅವನು ಸಂತುಷ್ಟನಾಗಿ ಮೇಲೆ ಹೇಳಿದ ಶಸ್ತ್ರವನ್ನು ಕೊಟ್ಟು, ಅದರಿಂದ ಪ್ರಪಂಚವೃಕ್ಷವನ್ನು ಕಡಿಯಹಚ್ಚುವನು ಮತ್ತು ಜ್ಞಾನವನ್ನು ಅನುಗ್ರಹಿಸಿ ಸಾಕ್ಷಾತ್ಕಾರಮಾಡಿಸುವನು, ಹೀಗಾದರೆ ಮುಂದೆ ಅವನಿಗೆ ತಿರುಗಿ ಜನ್ಮಕ್ಕೆಬರುವ ಕಾರಣವಿಲ್ಲ. ಆದ್ದರಿಂದ ಅವನ ಸ್ವರೂಪವನ್ನು ತಿಳಿಯಲು ಯತ್ನಿಸಬೇಕು; ಈ ಬಗ್ಗೆ (೧೮–೬೬)ನೆಯ ಶ್ಲೋಕದಲ್ಲಿ ಹೇಳಲಾಗುವದು.

೫. ಪರಮಾತ್ಮನನ್ನು ಹೊಂದಲು ಬೇಕಾದ ಅನ್ಯಸಾಧನಗಳನ್ನು ಹೇಳಿದ್ದು, ಅಥವಾ, ಪರ ಮಾತ್ಮನ ಸ್ಥಾನವನ್ನು ಹೊಂದಿದವರ ಲಕ್ಷಣಗಳೇನು? ಅದನ್ನು ಹೊಂದಲು ಬಯಸುವವರು ಯಾವ ಗುಣಗಳನ್ನು ಸಂಪಾದಿಸಿ ಯಾವ ದೋಷಗಳನ್ನು ತ್ಯಜಿಸಬೇಕು? ಎಂಬುದನ್ನು ಕುರಿತು ಹೇಳಿದ್ದು:—

निर्मानमोहा जितसंगदोषा
अध्यात्मनित्या विनिवृत्तकामाः ।
द्वंद्वैर्विमुक्ताः सुखदुःखसंज्ञै-
र्गच्छंत्यमूढाः पदमव्ययं तत् ॥ ५ ॥

**ಅಂ**—ಅಹಂಕಾರ, ಮಿಥ್ಯಾಜ್ಞಾನಗಳಿಲ್ಲದವರು, ವಿಷಯಾಸಕ್ತಿದೋಷವಿಲ್ಲದವರು, ಪರಮಾತ್ಮನ ಜ್ಞಾನಕ್ಕಾಗಿ ಮಾಡುವ ಶ್ರವಣಾದಿಗಳಲ್ಲಿ ಯಾವಾಗಲೂ ತತ್ಪರರು, ವಿಷಯಗಳಲ್ಲಿ ವಿಷಯತೃಷ್ಣೆಯಿಂದ ಹಿಮ್ಮುಖರಾದವರು, ಸುಖದುಃಖಗಳೆಂಬ ಸಂಜ್ಞೆಯುಳ್ಳ ಲಾಭ—ಅಲಾಭ, ಜಯ—ಅಪಜಯಗಳೆಂಬ ದ್ವಂದ್ವಗಳಿಂದ ದೂರಾದವರು, ಮತ್ತು ರಾಜಸತಾಮಸ ಗುಣಗಳನ್ನು ಅಳಿದವರು, ಪರಮಾತ್ಮನ ನಿತ್ಯವಾದ ಸ್ಥಾನವನ್ನು ಹೊಂದುವರು. ಇದರಿಂದ ಮೋಕ್ಷೇಚ್ಛುಗಳು ಶ್ರವಣ—ಮನನಾದಿ ಸಾಧನಾನುಷ್ಠಾನ ಸದ್ಗುಣಗಳನ್ನು ಸಂಪಾದಿಸಬೇಕೆಂತಲೂ, ದುರಭಿಮಾನ, ಮೋಹ, ವಿಷಯಾಸಕ್ತಿ, ಮುಂತಾದ ದೋಷಗಳನ್ನು ತ್ಯಜಿಸಬೇಕೆಂತಲೂ, ಹೇಳಿದಹಾಗಾಯಿತು.

೬. ಪರಮಾತ್ಮನ ಪ್ರಾಪ್ತಿಯೆಂದರೆ ಮೋಕ್ಷಫಲ ಎಂದು ಹೇಳಿಯಿದೆ; ಅಂದಮೇಲೆ ಅವನ ಸ್ಥಾನವು ಎಂತಹದೆಂಬುದನ್ನು ಕುರಿತು ಹೇಳಿದ್ದು —

**न तद्भासयते सूर्यो न शशांको न पावकः ।**
**यद्गत्वा न निवर्त्तते तद्धाम परमं मम ॥ ६ ॥**

**ಅಂ**— ಅಲ್ಲಿ ಸೂರ್ಯಪ್ರಕಾಶವಿಲ್ಲ, ಅದರಂತೆ ಚಂದ್ರ—ಅಗ್ನಿಗಳದೂ ಇಲ್ಲ. ಈ ಬಗ್ಗೆ (ಕಾಠಕ ೫—೧೫) ನೆಯ ಮಂತ್ರ ಪ್ರಮಾಣವಾಗಿದೆ. ಯಾವ ಭಗವತ್ ಸ್ವರೂಪವನ್ನು ಹೊಂದಿದರೆ, ಸಂಸಾರಕ್ಕೆ ತಿರುಗಿಬರುವದಿಲ್ಲವೋ ಅಂತಹ ಸ್ವರೂಪವೇ ನನ್ನದೆಂದು ತಿಳಿ.

೭. ಸಂಸಾರವೆಂಬ ವೃಕ್ಷವನ್ನು ಕಡಿದುಹಾಕಲು ಚತುರ್ಮುಖಾದಿಗಳ ಜ್ಞಾನವು ಸಾಕು; ಆದರೆ, ಪರಮಾತ್ಮನ ಜ್ಞಾನವೇಕೆಂದು ಕೇಳಿದ್ದಕ್ಕೆ ಹೇಳಿದ್ದು; ಅಥವಾ "ಜೀವವು ಬಂಧನದಿಂದ ಮೋಕ್ಷಹೊಂದಲು ಭೇದಿಸಲ್ಪಡುವ ವಸ್ತು, ಭೇದನೋಪಾಯ, ಭೇದಿಸುವವನಲ್ಲಿರತಕ್ಕ ಅವಶ್ಯ ಗುಣಗಳು. ಭೇದನೋಪಾಯ ಸಂಪಾದಿಸಲು ಶರಣುಹೋಗತಕ್ಕ ವಸ್ತು, ಭೇದಿಸಿದಬಳಿಕ ಹೊಂದುವ ಸ್ಥಾನ, ಅದರ ಮಹಿಮೆ, ಇವೆಲ್ಲವುಗಳನ್ನು ಹೇಳಿರುವಿ. स कः, त्वं कः ಅವನ್ಯಾರು? ನೀನ್ಯಾರೂ? ಅವನಿಗೂ, ನಿನಗೂ, ಸಂಬಂಧವೇನು? ಅವನನ್ನು ಬಂಧನದಿಂದ ಬಿಡಿಸಲು ನೀನಿಷ್ಟು ಪ್ರಯಾಸಪಡುವದೇಕೆ? ಮೇಲಾಗಿ, ಪರಮಾತ್ಮನಿಗೆ ಮೊರೆಹೋಗಬೇಕೆಂದು ಹೇಳಿ ಇದೆ. ಆದ್ದರಿಂದ ನಿನ್ನನ್ನೇ ಮೊರೆಹೋಗಬೇಕೋ? ಚತುರ್ಮುಖಾದಿಗಳಿಗೆ ಶರಣುಹೋದರೆ ಸಾಕೋ? ಇದನ್ನೆಲ್ಲ ನನಗೆ ತಿಳುಹು" ಎಂದು ಅರ್ಜುನನು ಕೇಳಿದ್ದಕ್ಕೆ ಸಮಾಧಾನಹೇಳಿದ್ದು:—

**ममैवांशो जीवलोके जीवभूतः सनातनः ।**
**मनःषष्ठानीन्द्रियाणि प्रकृतिस्थानि कर्षति ॥ ७ ॥**

**ಅಂ**—ಚತುರ್ಮುಖಾದಿ ಜೀವರಾಶಿಗಳ ಶರೀರದಲ್ಲಿರುವ ಅನಾದಿನಿತ್ಯವಾದ ಜೀವವು ನನ್ನ ಭಿನ್ನಾಂಶವಾಗಿದೆ; ಹೊರತು ಮತ್ಸ್ಯಾದಿಗಳಂತೆ ನನ್ನ ಸ್ವರೂಪಾಂಶವಲ್ಲ, ಅದು ಭಿನ್ನವಾದಾಗ್ಯೂ, ಸೂರ್ಯನ ಮುಂದೆ ಹೊನ್ನಿಯಹುಳದಂತೆ, ಜೀವವು ನನಗೆ ಅಲ್ಪ ಸದೃಶವಾದ್ದರಿಂದ ನನ್ನ ಅಂಶವೆನಿಸುವದು ಚತುರ್ಮುಖಾದಿ ಜೀವಗಳು ನನ್ನ ಭಿನ್ನಾಂಶಗಳಾದುದರಿಂದ ಅಸಮರ್ಥರು. ಅತಏವ ಅವರ ಜ್ಞಾನವನ್ನು ಬಿಟ್ಟು ಪರಮಾತ್ಮನ ಜ್ಞಾನವನ್ನೇ ಸಂಪಾದಿಸಬೇಕೆಂಬ ಅರ್ಥವು. ಜೀವರಾಶಿಗಳು ಪರಮಾತ್ಮನ ಅಂಶಗಳಾದರೆ, ಅವುಗಳಿಗೆ ಯಾವ ಕಾರ್ಯದಲ್ಲಿಯೂ ಸಾಮರ್ಥ್ಯವಿಲ್ಲೇ ಹೇಗೆಂದು ಕೇಳಿದರೆ, ಅದಕ್ಕೆ ಸಮಾಧಾನಹೇಳಿದ್ದು, ಪ್ರಕೃತಿಕಾರ್ಯವಾದ ಶರೀರದಲ್ಲಿ ಶ್ರೋತ್ರ, ಮುಂತಾದ ಐದು ಮತ್ತು ಮನಸು ಹೀಗೆ ಆರು ಇಂದ್ರಿಯಗಳನ್ನು ನನ್ನ ಅಂಶವಾದ ಜೀವವು ಸ್ಥಿತಿ

ಕಾಲದಲ್ಲಿ ವಿಷಯಾದಿಗಳನ್ನು ಕುರಿತು ಸೆಳೆಯುವದು; ದೇಹಸಂಬಂಧವಾಗುವ ಕಾಲಕ್ಕೆ ಮೂಲಕಾರಣ ದಿಂದ ಸೆಳೆಯುವದು ಮತ್ತು ಮರಣಕಾಲಕ್ಕೆ ಮೂಲರೂಪದಿಂದ ಸೆಳೆಯುವದು.

**೭ಂ ಅಂ**—ಜೀವಸಂಬಂಧ ಶರೀರದಲ್ಲಿ ಜೀವವೆಂಬ ಅನಾದಿ ಒಂದು ಪದಾರ್ಥವಿರುವದು. ಅದು ಪ್ರತಿಬಿಂಬವಾದುದರಿಂದ ನನ್ನ ಭಿನ್ನಾಂಶವು; ಹೊರತು ಮತ್ಸ್ಯಕೂರ್ಮಾದಿಗಳಂತೆ ಸ್ವರೂ ಪಾಂಶವಲ್ಲ. ಭಿನ್ನವಾದ್ದರಿಂದ ಅಂಶವು ಹೇಗೆಂದು ಕೇಳಿದರೆ, ಪ್ರತಿಬಿಂಬವಾದ ಆ ಜೀವವು ಬಿಂಬನಾದ ನನಗೆ ಆಧೀನವಾಗಿಯೂ, ಅಲ್ಪ ಸದೃಶವಾಗಿಯೂ, ಇರುವದರಿಂದ ಅದು ನನ್ನ ಅಂಶವೆಂದೇ ಹೇಳ ಲ್ಪಟ್ಟಿದೆ. ಆದ್ದರಿಂದ ಅದರ ಉದ್ಧಾರಕ್ಕಾಗಿ ನಾನು ಇಷ್ಟೊಂದು ಪ್ರಯತ್ನಪಡಬೇಕಾಗಿದೆ. ಜೀವವು ನಿನ್ನ ಅಂಶವಾದುದರಿಂದಲೂ, ನಿನಗೆ ಅಲ್ಪ ಸದೃಶವಾದುದರಿಂದಲೂ, ಅದನ್ನು ಉದ್ಧರಿಸುವ ಕಾರಣ ವೇನೆಂದು ಕೇಳಿದರೆ, ಪ್ರಕೃತಿಯಲ್ಲಿ ಸೂಕ್ಷ್ಮ ರೂಪದಿಂದಿರುವ ಐದು ಜ್ಞಾನೇಂದ್ರಿಯಗಳು ಮತ್ತು ಮನಸ್ಸು ಹೀಗೆ ಆರು ಇಂದ್ರಿಯಗಳನ್ನು ಉತ್ಪತ್ತಿಯ ಕಾಲಕ್ಕೆ ಮೂಲಕಾರಣದಿಂದ ಜೀವವು ಸೆಳೆ ಯುವದು, ಸ್ಥಿತಿಕಾಲದಲ್ಲಿ ಇಂದ್ರಿಯಗಳಲ್ಲಿ ಕುಳಿತು ವಿಷಯಗಳನ್ನು ಸೆಳೆಯುವದು; ಮರಣ ಕಾಲದಲ್ಲಿ ಪ್ರಕೃತಿಯಿಂದ ನಿರ್ಮಿಸಲ್ಪಟ್ಟ ಮೊದಲಿನ ಶರೀರದಿಂದ ಅನ್ಯ ಶರೀರವನ್ನು ಕುರಿತು ಸೆಳೆ ಯುವದು. ಹೀಗೆ ಇಂದ್ರಿಯಗಳಿಗೂ, ವಿಷಯಗಳಿಗೂ, ಸಂಬಂಧವಾಗಿ ಜೀವವು ಮೋಹಕ್ಕೆ ಒಳಗಾಗಿ ವಿವಿಧ ಯೋನಿಗಳಲ್ಲಿ ಸಂಚರಿಸುವದು (೧೩-೨೨). ಜೀವವು ನನ್ನ ಅಂಶವಾದರೂ, ಅನೇಕ ವಿಧಗಳಿಂದ ನನಗಿಂತ ಕೀಳವಿರುವದರಿಂದ ನನ್ನಿಂದಲೇ ಅದರ ಉದ್ಧಾರ. ಚತುರ್ಮುಖಾದಿ ಜೀವ ಗಳಲ್ಲಿ ಯಾವುದರಿಂದಲೂ ಅದರ ಉದ್ಧಾರವಾಗದು. ಏಕೆಂದರೆ, ಎಲ್ಲವೂ ಜೀವಗಳಾದುದರಿಂದ, ಒಂದು ಜೀವದಿಂದ ಅನ್ಯಜೀವದ ಉದ್ಧಾರವಾಗುವದು ಲೋಕದಲ್ಲಿ ಕಂಡ ಮಾತಲ್ಲ; ಆದ್ದರಿಂದ ನಾನೇ ಅದನ್ನು ಸಂಸಾರಬಂಧನದಿಂದ ಮುಕ್ತನನ್ನಾಗಿ ಮಾಡುವದು ಯೋಗ್ಯವು, ಹೀಗೆ ಅನ್ಯ ಮೋಚಕರಿಲ್ಲದ್ದರಿಂದ, ಸಕಲ ಜೀವರಾಶಿಗಳು ನನಗೆ ಶರಣಾಗತರಾಗಬೇಕು.

೮. ಹಿಂದಿನ ಶ್ಲೋಕದಲ್ಲಿ ಜೀವವು ಮನಸು ಮುಂತಾದ ಆರು ಇಂದ್ರಿಯಗಳನ್ನು ಸೆಳೆಯುವ ದೆಂದು ಹೇಳಿದ್ದರಿಂದ ಅದಕ್ಕೆ ಸ್ವಾತಂತ್ರ್ಯವುಂಟೆಂದು ಕಂಡುಬರುವದು, ಜೀವಕ್ಕೆ ಅಂತಹ ಸ್ವಾತಂತ್ರ್ಯ ಉಂಟೇ ಎಂದು ಕೇಳಿದ್ದಕ್ಕೆ ಸಮಾಧಾನ ಹೇಳಿದ್ದು —

**शरीरं यदवाप्नोति यच्चाप्युत्क्रामतीश्वरः ।**
**गृहीत्वैतानि संयाति वायुर्गंधानिवाशयात् ॥ ८ ॥**

**ಅಂ**—ಪರಮಾತ್ಮನು ಜೀವದ ಶರೀರವನ್ನು ಪ್ರವೇಶಿಸಿದಬಳಿಕ ಜೀವವು ಅವನಿಂದ ಪ್ರೇರಿಸ ಲ್ಪಟ್ಟ ಇಂದ್ರಿಯಗಳನ್ನು ಸೆಳೆಯುವದು, ಆದರೆ, ಸ್ವತಂತ್ರನಾದ ಪರಮಾತ್ಮನೇ ಸಕಲ ಇಂದ್ರಿಯ ಗಳಿಗೆ ವಿಷಯಗಳನ್ನು ಕುರಿತು ಪ್ರೇರಿಸುವನು. ಈ ಬಗ್ಗೆ (೨-೪-೧೫)ನೆಯ ಸೂತ್ರವು ಪ್ರಮಾಣ ವಾಗಿದೆ. ಅದರಂತೆಯೇ. ಪರಮಾತ್ಮನು ಜೀವವನ್ನು ದೇಹದಿಂದ ಎಳೆದುಕೊಂಡೊಯ್ಯುವಾಗ, ವಾಯುವು ಗಂಧವುಳ್ಳ ಪುಷ್ಪಗಳ ಅವಯುವಗಳ ಅಂಶಗಳನ್ನು ಪುಷ್ಪಸ್ಥಾನದಿಂದ ಅಷ್ಟಷ್ಟೇ ಒಯ್ಯು ವಂತೆ, ಸೂಕ್ಷ್ಮ ಇಂದ್ರಿಯಗಳ ಅಂಶಗಳನ್ನು ತೆಗೆದುಕೊಂಡು ಅನ್ಯದೇಹವನ್ನು ಕುರಿತು ಜೀವವು ಹೋಗುವದು. ಹಾಗಾದರೆ, ಬೃಹದಾರಣ್ಯಕ (೫-೨-೧೩) ನೆಯ ಮಂತ್ರದಿಂದ ಇಂದ್ರಿಯಗಳಿಗೆ ಅಗ್ನಿಯಲ್ಲಿ ಗತಿಯಾಗುವದು ಎಂದು ಉಕ್ತವಾಗಿದ್ದು, ಇಲ್ಲಿ ಜೀವವು ಅವುಗಳನ್ನು ಸೆಳೆದು ಒಯ್ಯುವ ದೆಂದು ಹೇಳಿದ್ದರಿಂದ ವಿರೋಧಬರಲಿಲ್ಲೇ ? ಎಂದು ಕೇಳಿದರೆ, "ಆ ಮಂತ್ರದಲ್ಲಿ ಇಂದ್ರಿಯಗಳಿಗೆ ಅಭಿಮಾನಿಗಳಾದ ದೇವತೆಗಳು ಸೂಕ್ಷ್ಮಾಂಶಗಳಿಂದ ಅಗ್ನಿಯಲ್ಲಿ ಲಯಹೊಂದಿ, ಉಳಿದ ಅಂಶಗಳಿಂದ

ಜೀವವನ್ನು ಹಿಂಬಾಲಿಸಿ, ಅದು ಅನ್ಯ ಶರೀರವನ್ನು ತೊಡುವಾಗ ಅದರ ಸಂಗಡಲೇ ಬರುವವು" ಎಂದಿದೆ. ಹಾಗಾದರೆ, ಅಗ್ನಿಶ್ರುತಿಯ ಗತಿ ಏನೆಂದು ಕೇಳಿದರೆ, ಈ ವಿಷಯಕ್ಕೆ(೩-೧-೪)ನೆಯ ಸೂತ್ರದಲ್ಲಿ ಸಮಾಧಾನ ಹೇಳಿ ಇದೆ ಅದರಿಂದ ತಿಳಿಯತಕ್ಕದ್ದೇನೆಂದರೆ, ವಾಯುವು ಪುಷ್ಪಗಳನ್ನು ಅವುಗಳ ಸ್ಥಾನದಲ್ಲಿ ಬಿಟ್ಟು ಗಂಧಾಂಶಗಳನ್ನು ಒಯ್ಯುವಂತೆ ಸೂಕ್ಷ್ಮೇಂದ್ರಿಯ ಅಂಶಗಳನ್ನು ಅವುಗಳ ಅಭಿಮಾನಿ ದೇವತೆಗಳು ಒಯ್ಯುವ ಮುಂತಾದ ಕ್ರಮವನ್ನು ಮೇಲ್ಕಾಣಿಸಿದಂತೆ ತಿಳಿಯಬೇಕು; ಆದ್ದರಿಂದ ಇಲ್ಲಿ ಗಂಧದಂತೆ ಎಂದು ದೃಷ್ಟಾಂತ ಹೇಳಿದೆ. ಸಕಲ ಇಂದ್ರಿಯಗಳಿಗೆ ಪರಮಾತ್ಮನೇ ಪ್ರೇರಕನಾದ್ದರಿಂದ ಅನ್ಯ ದೇವತೆಗಳ ಜ್ಞಾನವು ಪ್ರಪಂಚವೆಂಬ ವೃಕ್ಷವನ್ನು ಛೇದಿಸುವದು; ಅಥವಾ ಜೀವವು ಶರೀರವನ್ನು ಹೊಂದಲು ಪರಮಾತ್ಮನು ಸೂಕ್ಷ್ಮೇಂದ್ರಿಯಾಂಶಗಳನ್ನು ಗ್ರಹಿಸಿ ಶರೀರವನ್ನು ಪ್ರೇರಿಸುವನು, ಮತ್ತು ಜೀವವು ಶರೀರವನ್ನು ತೊರೆದು ಹೋಗಲು, ಅವನು ಅವುಗಳನ್ನು ಸ್ವೀಕರಿಸಿ ಜೀವಸಹಿತವಾಗಿ ಅನ್ಯದೇಹವನ್ನು ಕುರಿತು ಸಾಗುವನು.

೯. ಇಂದ್ರಿಯಗಳಲ್ಲಿ ಪ್ರವರ್ತಕನಾಗಿ ಅಂತರ್ಗತನಾದ ಪರಮಾತ್ಮನಿಗೆ ಇಂದ್ರಿಯದ್ವಾರಾ ವಿಷಯಭೋಗ ಉಂಟು ಎಂಬುದನ್ನು ಕುರಿತು ಹೇಳಿದ್ದು .—

**श्रोत्रं चक्षुः स्पर्शनं च रसनं घ्राणमेव च ।**
**अधिष्ठाय मनश्चायं विषयानुपसेवते ॥ ९ ॥**

**ಅಂ**—ವಿಷಯಬೋಗಕ್ಕೆ ಸಾಧನಗಳಾದ ಕಿವಿ, ಕಣ್ಣು, ಮೈ, ನಾಲಿಗೆ, ಮೂಗು, ಮನಸು, ಹೀಗೆ ಆರು ಇಂದ್ರಿಯಗಳನ್ನಾಶ್ರಯಿಸಿ, ಜೀವವು ಶಬ್ದಾದಿ ವಿಷಯಗಳನ್ನು ಅನುಭವಿಸುವದು; ಅಂದರೆ ಆಯಾ ಕರ್ಮಗಳ ಫಲಗಳಾದ ಸುಖದುಃಖಾದಿಗಳ ಭೋಗಕ್ಕಾಗಿ ಅಲ್ಲಲ್ಲಿ ಹೋಗುವದು ಮತ್ತು ಬರುವದು. ಈ ಜೀವವು ಆ ಇಂದ್ರಿಯಗಳ ಸಹಿತವಾಗಿ ಹೋಗುವದರಿಂದಲೇ ಅದಕ್ಕೆ ಸುಖದುಃಖಗಳ ಅನುಭವವಾಗುವದು. ಜೀವವು ಇಂದ್ರಿಯಗಳನ್ನು ಆಶ್ರಯಿಸಿಯೇ ವಿಷಯಗಳನ್ನು ಉಪಭೋಗಿಸುವದು. ಚ ಕಾರದಿಂದ ಕರ್ಮೇಂದ್ರಿಯಗಳನ್ನೂ, ಬುದ್ಧಿಯನ್ನೂ, ಆಶ್ರಯಿಸುವದೆಂದು ತಿಳಿಯಬೇಕು. ಪರಮಾತ್ಮನು ಕೂಡ ಅವುಗಳಲ್ಲಿ ಪ್ರವರ್ತಕನಾಗಿ ವಾಸಮಾಡಿ, ಜೀವವು ಉಪಭೋಗಿಸುವ ವಿಷಯಗಳಲ್ಲಿ ತನ್ನ ಸ್ವಾಖ್ಯರಸವನ್ನು ಭೋಗಿಸುವನು. ಈ ಬಗ್ಗೆ ಕಾರಕ (೩-೧) ಶ್ರುತಿಯನ್ನೂ, (೧-೨-೧೧)ನೇ ಸೂತ್ರವನ್ನೂ. "ಪರಮಾತ್ಮನು ಯಾವಾಗಲೂ ಶುಭವನ್ನು ಭೋಗಿಸುವನು" ಎಂಬ ಸ್ಮೃತಿಯನ್ನೂ, ನೋಡಬೇಕು. ಇಲ್ಲಿ ಸ್ವಾಖ್ಯರಸವೆಂದರೆ, ಶುಭರಸವಷ್ಟೇ ಗ್ರಾಹ್ಯ; ಅಂದರೆ ಪರಮಾತ್ಮನ ರೂಪಗಳು ಪ್ರತಿಯೊಂದು ಪದಾರ್ಥಗಳಲ್ಲಿರುವದರಿಂದ ಆ ರೂಪವು ಪರಮಾತ್ಮನಲ್ಲಿ ಐಕ್ಯಹೊಂದುವದು. ಇದೇ ಅವನ ಸ್ವಾಖ್ಯರಸಭೋಗ. ಈ ವಿಷಯದಲ್ಲಿ ಹೂವಿನ ಮೂಸುವಿಕೆಯಿಂದ ಅದರ ಭೋಗವು ಹೇಗೋ ಹಾಗೆ ಎಂದು ತಿಳಿಯಬೇಕು.

೧೦. ಇನ್ನು, ಪರಮಾತ್ಮನಿಗೆ ಜೀವದಂತೆ, ಅಶುಭಭೋಗ ಉಂಟೇ ಹೇಗೆಂದು ಕೇಳಿದರೆ, ಅವನಿಗೆ ಅಂತಹ ಭೋಗವಿರದೆ ಶುಭಗಳನ್ನೇ ಭೋಗಿಸುವನೆಂದು ಹೇಳಿ, ಅವನು ಏಕೆ ಲಭ್ಯನಲ್ಲೆಂಬ ಸಂದೇಹವನ್ನು ನಿರಾಕರಿಸಿದ್ದು :—

**उत्क्रामंतं स्थितं वापि भुंजानं वा गुणान्वितम् ।**
**विमूढा नानुपश्यंति पश्यंति ज्ञानचक्षुषः ॥ १० ॥**

**ಅಂ**—ಸದ್ಗುಣಗಳಿಂದ ಯುಕ್ತನಾದ ಭಗವಂತನು ಅವಿವೇಕಿಗಳಿಗೆ ಲಭ್ಯನಲ್ಲ; ಆದರೆ, ಪ್ರಮಾಣದಿಂದ ನಿಶ್ಚಯವುಳ್ಳ ವಿವೇಕಿಗಳಿಗೇ ಲಭ್ಯನು.

೧೧. ಪರಮಾತ್ಮನ ಪ್ರಾಪ್ತಿಗಾಗಿ ಯತ್ನಿಸಿದರೂ, ಅವನು ಅದೇಕೆ ಲಭ್ಯನಲ್ಲೆಂಬುದಕ್ಕೆ ಹೇಳಿದ್ದು; ಅಥವಾ ಶಾಸ್ತ್ರಶ್ರವಣದಿಂದ ಹುಟ್ಟಿದ ಜ್ಞಾನವುಳ್ಳವರು ಪರಮಾತ್ಮನನ್ನು ನೋಡುವರೆಂದು ಹಿಂದಿನ ಶ್ಲೋಕದಲ್ಲಿ ಹೇಳಿ ಇದೆ, ಆದರೆ; ಅಂತಹ ಜ್ಞಾನವುಳ್ಳವರು ಜ್ಞಾನಿಗಳಾದಾಗ್ಯೂ, ರಾಗ ದ್ವೇಷಾದಿಗಳಿಗೆ ಒಳಗಾಗಬಹುದು. ಇನ್ನು (೩–೩೯) ನೆಯ ಶ್ಲೋಕದಲ್ಲಿ ಹೇಳಿದಂತೆ, ರಾಗದ್ವೇಷಾದಿ ಗಳಿಗೆ ಒಳಗಾಗುವದು ಜ್ಞಾನಕ್ಕೆ ವಿರೋಧವಾಗಿದೆ. ಮೇಲಾಗಿ, (೧೩–೧೨) ನೆಯ ಶ್ಲೋಕದಲ್ಲಿ ಇದೇ ವಿಷಯ ಹೇಳಲ್ಪಟ್ಟಿದೆ, ಅಂದಬಳಿಕ, ಅಂಥ ಜ್ಞಾನದಿಂದ ಪರಮಾತ್ಮನ ಸಾಕ್ಷಾತ್ಕಾರವಾಗುವ ಬಗೆ ಹೇಗೆಂದು ಕೇಳಿದ್ದಕ್ಕೆ ಉತ್ತರವೆಂದು ನಿರೂಪಿಸಿದ್ದು —

**यतंतो योगिनश्चैनं पश्यंत्यात्मन्यवस्थितम् ।**
**यतंतोऽप्यकृतात्मानो नैनं पश्यंत्यचेतसः ॥ ११ ॥**

**ಅಂ**—ಜ್ಞಾನೋಪಾಯವನ್ನಾಚರಿಸುವ ಯೋಗಿಗಳು ಹೃತ್ಕಮಲದಲ್ಲಿ ಅಂತರ್ಗತನಾದ ಪರ ಮಾತ್ಮನನ್ನು ಸಾಕ್ಷಾತ್ಕರಿಸುವರು; ಆದರೆ, ಅಶುದ್ಧ ಅಂತಃಕರಣವುಳ್ಳ ಅವಿವೇಕಿಗಳು ಎಷ್ಟು ಪ್ರಯ ತ್ನಿಸಿದರೂ, ಅವರಿಗೆ ಅವನ ಸಾಕ್ಷಾತ್ಕಾರವಾಗದು.

**ವಿಂ ಅಂ**—ಶ್ರವಣಾದಿಗಳಿಂದ ಪರಮಾತ್ಮನ ದರ್ಶನಕ್ಕಾಗಿ ಯತ್ನಿಸುವವರೆಲ್ಲರಿಗೆ ಅವನ ಸಾಕ್ಷಾತ್ಕಾರವಾಗದು, ಆದರೆ, ಜ್ಞಾನಯೋಗಿಗಳಿಗಷ್ಟೇ ಹೃದಯ, ಬುದ್ಧಿ, ಅಥವಾ ದೇಹದಲ್ಲಿ ವಾಸ ವಾಗಿರುವ ಪರಮಾತ್ಮನ ಸಾಕ್ಷಾತ್ಕಾರವಾಗುವದು. ಮನಸು ಚಂಚಲವಾಗದಿರುವದೇ ಯೋಗವೆನಿ ಸುವದು, ಇಂತಹ ಯೋಗವುಳ್ಳವನಿಗೇನೇ ಪರಮಾತ್ಮನ ಸಾಕ್ಷಾತ್‌ದರ್ಶನವು ಲಭ್ಯವು. ಅಂತಹ ಯೋಗವಿಲ್ಲದವರಿಗೆ ಸಾವಿರಾರು ಪ್ರಯತ್ನಗಳಿಂದಲೂ ಸಾಕ್ಷಾತ್ಕಾರವು ಸಾಧ್ಯವಲ್ಲ, ಒಂದು ವೇಳೆ ಶ್ರವಣಾದಿಗಳಿಂದ ಯತ್ನಿಸಿದರೂ, ಕರ್ಮಯೋಗದಿಂದ ಮನೋನಿಗ್ರಹವಾಗದಿದ್ದರೆ, ಅವರು ಅವಿ ವೇಕಿಗಳೇ ಸರಿ. ಅವರಿಗೆ ಸಾಕ್ಷಾತ್ಕಾರವಿಲ್ಲ. ಶಾಸ್ತ್ರಜನ್ಯ ಜ್ಞಾನವು ಪಾಂಡಿತ್ಯಕ್ಕೆ ಸಾಧನವೇ ಹೊರ್ತು ಮತ್ತೇತಕ್ಕಲ್ಲ. ಸತ್ಕುಲದಲ್ಲಿ ಹುಟ್ಟಿ, ವಿವೇಕದಿಂದ ಮನೋನಿಗ್ರಹ ಗೈಯ್ಯುವದೇ ಸಾಕ್ಷಾ ತ್ಕಾರಕ್ಕೆ ಸಾಧನವಾಗಿದೆ. ಇದೇ ಅಭಿಪ್ರಾಯದಿಂದ, ಶಾಸ್ತ್ರದಿಂದ ಹುಟ್ಟಿದ ಜ್ಞಾನವುಳ್ಳವರಿಗೆನೇ ಅವನ ದರ್ಶನವೆಂದು ಹೇಳಲಾಗಿದ. ಆದ್ದರಿಂದ ಇಲ್ಲಿ ಜ್ಞಾನಿಗಳಿಗೆ ಎಂದು ಹೇಳದೆ, ಕೇವಲ ಶಾಸ್ತ್ರ ಜ್ಞಾನವುಳ್ಳವರಿಗೆ ಎಂದು ಹೇಳಿಯಿದೆ. ಅದರಿಂದ, ಕೇವಲ ಶಾಸ್ತ್ರಜ್ಞಾನವುಳ್ಳವರಿಗೆ ದರ್ಶನವಿಲ್ಲೆಂತಲೂ, ಶ್ರವಣಾದಿಗಳಿಂದ ಆತ್ಮಾನಾತ್ಮಜ್ಞಾನಜನ್ಯವಿವೇಕದಿಂದ ಮನೋನಿಗ್ರಹಾದಿ ಸಾಧನ ಸಂಪತ್ತುಳ್ಳವರಿ ಗೆನೇ ಸಾಕ್ಷಾತ್ಕಾರ ಉಂಟೆಂದೂ ತಿಳಿಯಬೇಕು.

೧೨. ಹಿಂದೆ ೭ನೆಯ ಶ್ಲೋಕದಿಂದ ಪರಮಾತ್ಮನು ಸರ್ವಾಂತರ್ಯಾಮಿ ಎಂದು ವಿಶೇಷಜ್ಞಾ ನವು ಮತ್ತು 'ಊರ್ಧ್ವ' ಶಬ್ದದಿಂದ ಅವನು ಸರ್ವೋತ್ತಮನೆಂದು ಹೇಳಲ್ಪಟ್ಟಿತು. ಇವೆರಡು ವಿಷ ಯಗಳನ್ನೇ ಅಧ್ಯಾಯದ ಉಳಿದ ಭಾಗದಲ್ಲಿ ಹೇಳಲಾಗುವದು, ಅಥವಾ, ಜೀವವು ಪ್ರಕೃತಿಬಂಧನಕ್ಕೆ ಒಳಗಾಗಿದೆ; ಅದು ಕರ್ಮಕಲಾಪಗಳಿಂದ ಬಿಗಿಯಲ್ಪಟ್ಟು ದೇಹವೆಂಬ ಕಾರಾಗೃಹದಲ್ಲಿ ಬಿದ್ದುಕೊಂಡಿ ರುವದು. ಅದರಲ್ಲಿ ಪ್ರವೇಶಮಾಡುವ ಮತ್ತು ಅಲ್ಲಿಂದ ಹೊರಡುವ ಕಾಲಕ್ಕೆ ಅದು ಒದಗುವ ಕ್ಲೇಶ ಗಳನ್ನು ಸಹಿಸುವದು. ಅಲ್ಲಿ ವಿಷಮಿಶ್ರಿತ ಜೇನತುಪ್ಪಕ್ಕೆ ಸದೃಶವಾದ ಕೀಳ ವಿಷಯಗಳನ್ನು ಸೇವಿ ಸುವದು. ವಿವೇಕಿಗಳಿಗೆ ಪರಮಾತ್ಮನ ಸಾಕ್ಷಾತ್ಕಾರವು ಜ್ಞಾನದೃಷ್ಟಿಯಿಂದಾದರೂ, ಅವಿವೇಕಿಯಾದ ಜೀವಕ್ಕೆ ಅಂಥ ಸಾಕ್ಷಾತ್ಕಾರವಿಲ್ಲ. ಪರಮಾತ್ಮನ ಪ್ರಾಪ್ತಿಗೆ ಪ್ರತಿಬಂಧಕವಾದ ಸಂಸಾರಬಂಧನದಿಂದ ಮುಕ್ತಿ ಹೊಂದಲು ಸಂಸಾರದ ಸ್ವರೂಪವನ್ನು ವೃಕ್ಷದ ದೃಷ್ಟಾಂತಕೊಟ್ಟು ನಿರೂಪಿಸಲಾಗಿದೆ. ಅದ

ರಿಂದ ಬಿಡುಗಡೆಹೊಂದಬೇಕಾದರೆ, ಭಕ್ತಿವಿರಕ್ತಿಗಳೆಂಬ ಶಸ್ತ್ರವು ಅದರ ಛೇದನಕ್ಕೆ ಮುಖ್ಯ ಸಾಧನಗಳೆಂದು ಹಿಂದೆಯೇ ಹೇಳಿ ಇದೆ. ಈ ಮೇರೆಗೆ, ಸಂಸಾರವೃಕ್ಷವನ್ನು ಛೇದಿಸಿದನಂತರ ಮಾರ್ಗದಲ್ಲಿ ಅಡ್ಡಲಾಗಿದ್ದ ವೃಕ್ಷವನ್ನು ಛೇದಿಸಿದ ಬಳಿಕ ತಾನು ಹೋಗತಕ್ಕ ಸ್ಥಳವನ್ನು ಶೋಧಿಸುವಂತೆ ಬ್ರಹ್ಮವಿಚಾರವನ್ನು ಮಾಡಬೇಕೆಂತಲೂ, ಅಂಥ ವಿಚಾರದಿಂದ ಲಭಿಸುವ ಮೋಕ್ಷ ಸ್ವರೂಪವನ್ನು ವರ್ಣಿಸಿ, ಬ್ರಹ್ಮಜ್ಞಾನಕ್ಕಾಗಿಯೂ, ಬ್ರಹ್ಮಜ್ಞಾನದಿಂದ ದೊರಕುವ ಮೋಕ್ಷಕ್ಕಾಗಿಯೂ, ಪರಮಾತ್ಮನಿಗೆ ಶರಣಾಗತನಾಗಬೇಕೆಂದೂ ಹೇಳಿ ಇದೆ. ಮುಂದೆ (೧೫–೪) ನೆಯ ಶ್ಲೋಕದಲ್ಲಿ ಪರಮಾತ್ಮನನ್ನೇ ಮೊರೆಹೋಗಬೇಕು, ಅನ್ಯರನ್ನಲ್ಲವೆಂದು ನಿಷೇಧಿಸಲ್ಪಟ್ಟಿದೆ. ಅದಕ್ಕೆ "ನಿನಗೆ ಮೊರೆ ಹೋಗಬೇಕಾಯಿತಲ್ಲ; ನನ್ನ ಗತಿ ಏನು ? ನಾನೇನು ಮಾಡಬೇಕು ?" ಎಂದು ಅರ್ಜುನನು ಕೇಳಲಾಗಿ, ಶ್ರೀಕೃಷ್ಣನು "ನಾನು ಉತ್ಪಾದಕ, ರಕ್ಷಕ, ನಿಯಾಮಕ, ಬಂಧಕ, ಶಿಕ್ಷಕ, ಸಂಹಾರಕ, ಮೋಚಕ, ಎಂದು ಮುಂತಾಗಿ ನನಗೆ ಶರಣಾಗತನಾಗಬೇಕು ಹೀಗೇನಲ್ಲ, ಆದರೆ, ಶರೀರಯಾತ್ರಾನಿರ್ವಾಹಕ್ಕಾಗಿ ಅದಕ್ಕೆ ಬೇಕಾದ ಕರ್ಮ ಮಾಡಲು ನೀನು ಸೇವಕನೆಂತಲೂ, ಎಲ್ಲರಿಗಿಂತ ವಿಲಕ್ಷಣಮಹಿಮೆಯುಳ್ಳವನಾದ್ದರಿಂದ ನಾನು ಗುರುವೆಂತಲೂ ಭಾವಿಸಿ ನನ್ನಲ್ಲಿ ಅತಿಪ್ರಿಯವಾದ ವಸ್ತುಗಳಿಗಿಂತ ಹೆಚ್ಚಿನ ಪ್ರೀತಿಮಾಡಬೇಕು." ಈ ವಿಷಯದಲ್ಲಿ (೫–೨೯) ನೆಯ ಶ್ಲೋಕದಲ್ಲಿ ಹೇಳಲಾಗಿದೆ. ಅಂಥ ಪ್ರೀತಿಗಾಗಿಯೂ, ಶರೀರಯಾತ್ರಾನಿರ್ವಾಹಕ್ಕಾಗಿಯೂ, ಮಾಡುವ ಕರ್ಮಯೋಗವನ್ನೂ, ನಿನ್ನಲ್ಲಿರುವ ಅತಿವಿಲಕ್ಷಣ ಮಹಿಮೆಯನ್ನೂ, ವಿಸ್ತರಿಸು, ಎಂದು ಅರ್ಜುನನು ವಿಜ್ಞಾಪನೆ ಮಾಡಿಕೊಂಡಿದ್ದು:—

**यदादित्यगतं तेजो जगद्भासयतेऽखिलम् ।**
**यच्चंद्रमसि यच्चाग्नौ तत्तेजो विद्धि मामकम् ॥ १२ ॥**

ಅಂ—ಅರ್ಜುನಾ, ನಾನು ಆಯಾ ಜೀವಗಳಿಗೆ ನಿಯಾಮಕನು ಅಷ್ಟೇ ಅಲ್ಲ, ಸೂರ್ಯಚಂದ್ರರಿಗೂ, ಉಪಲಕ್ಷಣದಿಂದ ಆಯಾ ಜೀವಗಳಲ್ಲಿದ್ದ ವಿಶೇಷ ಸಾಮರ್ಥ್ಯಕ್ಕೂ ನಿಯಾಮಕನು ಎಲ್ಲ ಜಗತ್ತನ್ನು ಪ್ರಕಾಶಿಸುವ ಸೂರ್ಯ, ಚಂದ್ರ, ಅಗ್ನಿ, ನಕ್ಷತ್ರ, ಮುಂತಾದವುಗಳಲ್ಲಿಯ ಪ್ರಕಾಶ ಸಾಮರ್ಥ್ಯವು ನನಗೇ ಆಧೀನವಾಗಿದೆ. ಸೂರ್ಯಚಂದ್ರಾದಿಗಳು ನನ್ನನ್ನು ಆರಾಧಿಸುವದರಿಂದ ನಾನು ಅವರವರ ಯೋಗ್ಯತೆಗನುಸರಿಸಿ ಪ್ರಕಾಶ ಸಾಮರ್ಥ್ಯವನ್ನು ಕೊಟ್ಟು, ಅವರಿಂದ ಈ ಸರ್ವ ಜಗತ್ತನ್ನು ಪ್ರಕಾಶಪಡಿಸುವೆನು. ಈ ವಿಷಯಕ್ಕೆ ಹಿಂದೆ (೭–೮, ೭–೯, ೯–೧೯) ಶ್ಲೋಕಗಳಲ್ಲಿ ಹೇಳಲ್ಪಟ್ಟಿದ್ದಲ್ಲದೆ, ಕಾರಕ (೫–೧೫) ಸೂತ್ರ (೧–೩–೨೨) ಮಂತ್ರಗಳು ಪ್ರಮಾಣವಾಗಿವೆ. ಚಂದ್ರ, ಸೂರ್ಯಾದಿಗಳಲ್ಲಿರುವ ಪ್ರಕಾಶ–ಸಾಮರ್ಥ್ಯವು ಕೂಡ ನನಗೆ ಆಧೀನವಾಗಿದೆ. ಈ ವಿಷಯವಾಗಿ (ತೈಂ ೩–೯–೭) ಮಂತ್ರವು ಆಧಾರವಾಗಿದೆ "ಅವುಗಳ ಉದಯ, ಸ್ಥಿತಿ, ಅಸ್ತ, ನನಗೆ ಆಧೀನವಾಗಿವೆ." ಈ ವಿಷಯಕ್ಕೆ ತೈಂ (೨–೮), ಬ್ರಂ (೫–೮–೯) ಮಂತ್ರಗಳು ಪ್ರಮಾಣವಾಗಿವೆ. ಕಣ್ಣಿಗೆ ಅಭಿಮಾನಿಯಾದ ಸೂರ್ಯನಲ್ಲಿ ಮತ್ತು ಕಣ್ಣಿನಲ್ಲಿ ಇರುವ ತೇಜಸ್ಸು, ಬಾಹ್ಯ ಪ್ರಪಂಚವನ್ನು ಪ್ರಕಾಶಿಸುವ ಸಾಮರ್ಥ್ಯ, ಮನಸ್ಸಿಗೆ ಅಭಿಮಾನಿಯಾದ ಚಂದ್ರನಲ್ಲಿ ಮತ್ತು ಮನಸ್ಸಿನಲ್ಲಿ ಇರುವ ತೇಜಸ್ಸು, ಒಳಗಿನ ಪ್ರಪಂಚವನ್ನು ಪ್ರಕಾಶಿಸುವ ಸಾಮರ್ಥ್ಯ, ವಾಣಿಗೆ ಅಭಿಮಾನಿಯಾದ ಅಗ್ನಿ ಮತ್ತು ವಾಣಿಯಲ್ಲಿರುವ ತೇಜಸ್ಸು, ವಿಷಯ ಪ್ರಕಾಶನ ಸಾಮರ್ಥ್ಯ, ಇವೆಲ್ಲ ತೇಜಸ್ಸು–ಸಾಮರ್ಥ್ಯಗಳು ನನಗೆ ಆಧೀನವೆಂದು ತಿಳಿ. ಹೀಗೆ ಸೂರ್ಯಾದಿಗಳಿಗೆ ತೇಜಸ್ಸನ್ನು ಕೊಡುವದರಿಂದಲೂ, ಆ ತೇಜಸ್ಸಿಗೆ ನಿಯಾಮಕನಾದುದರಿಂದಲೂ, ನಾನು ಎಲ್ಲಕ್ಕೂ ವಿಲಕ್ಷಣ ಮಹಿಮೆಯುಳ್ಳವನೆಂದು ತಿಳಿ, ಮತ್ತು ರಾತ್ರಿಯುಕ್ತ ಕತ್ತಲೆಯನ್ನು ನಿವಾರಿಸಿ, ಹಗಲು ಮಾಡುವದರಿಂದ ಸಕಲ ಪ್ರಾಣಿಗಳ ಯಾತ್ರಾ ನಿರ್ವಾಹಕ್ಕೆ ಬೇಕಾದ ಪ್ರಕಾಶ ಕೊಡುವವನೇ ನಾನು. ಆದ್ದರಿಂದ ನಾನು ಮಹಾಮಹಿಮೆಯುಳ್ಳವನೆಂತಲೂ, ಪರಮೋಪಕಾರಿಯೆಂತಲೂ, ತಿಳಿದು ಅತಿಪ್ರೀತಿಯಿಂದ ನನ್ನನ್ನು ಆರಾಧಿಸು.

೧೩

गामाविश्य च भूतानि धारयाम्यहमोजसा ।
पुष्णामि चौषधीः सर्वाः सोमो भूत्वा रसात्मकः ॥ १३ ॥

**ಅಂ**—ನಾನು ಭೂಮಿಯಲ್ಲಿ ಅಂತರ್ಗತನಾಗಿ ನನ್ನ ಬಲದಿಂದ ಪ್ರಾಣಿಗಳನ್ನು ಧರಿಸುವೆನು. ಅಮೃತ ರಸಾತ್ಮಕನಾಗಿ ಸೌಮ್ಯನಾದುದರಿಂದ ಸೋಮ (ಚಂದ್ರ) ನೆನಿಸಿ, ಅವನಲ್ಲಿ ಅಂತರ್ಗತನಾಗಿ ಸಸ್ಯಾದಿ ಔಷಧಿಗಳನ್ನೆಲ್ಲ ಬೆಳಸುವೆನು.

**ವಿಂ ಅಂ**—ನಾನು ಭೂಮಿಯನ್ನು ಪ್ರವೇಶಿಸಿ, ಅಲ್ಲಿ ನಿಂತು, ನನ್ನ ದಿವ್ಯ ಶಕ್ತಿಯಿಂದ ಚೇತನಾ ಚೇತನಾತ್ಮಕ ಸಕಲ ಭೂತಗಳನ್ನು ಪೋಷಿಸುವೆ. ಇದಲ್ಲದೆ, ಅವುಗಳನ್ನು ಧರಿಸುವ ಭೂದೇವಿಯಲ್ಲಿ ರುವ ಸಾಮರ್ಥ್ಯವನ್ನು ಕೂಡ ನಾನೇ ಕೊಟ್ಟಿರುವೆ. ಈ ಬಗ್ಗೆ (ತೈಂ ಸಂ ೪–೧–೮, ಬೃಹಂ ೫-೮-೯, ತೈಂ ಆಂ ೧–೮–೨) ಈ ಶ್ರುತಿಗಳು ಪ್ರಮಾಣಗಳಾಗಿವೆ. ನಾನು ಭೂಮಿಯಲ್ಲಿ ಅಂತರ್ಗತನಾಗಿ ಭೂತಗಳನ್ನು ಧರಿಸುವದರಿಂದ, ಅವುಗಳಿಗೆ ಸ್ವರೂಪಸತ್ತಾ, ಪ್ರವೃತ್ತ್ಯಾದಿಗಳು ಪ್ರಾಪ್ತವಾಗುವವು. ನಾನು ಅಮೃತಶರೀರವುಳ್ಳವನಾಗಿ ಚಂದ್ರನಲ್ಲಿ ನಿಂತು, ಅಮೃತರಸ ಸಿಂಚನೆಯಮೂಲಕ ಅವನಿಂದ ಸಕಲ ಔಷಧಿಗಳನ್ನು ಬೆಳಸುವೆನು. ಆದರಿಂದಲೇ ಅನ್ನರಸವನ್ನು ಹುಟ್ಟಿಸುವೆ. ಅದುವೇ ಮುಂದೆ ಪ್ರಾಣಿಗಳ ಹುಟ್ಟು, ಬೆಳವಣಿಗೆಗಳಿಗೆ ಕಾರಣವಾಗುವದು. ಈ ವಿಷಯದಲ್ಲಿ (ತೈಂ ಶ್ರುಂ ೨–೨, ಗೀತಾ ೩–೧೪) ಇವುಗಳು ಪ್ರಮಾಣಗಳಾಗಿವೆ. ಚಂದ್ರನಲ್ಲಿ ಔಷಧಿಗಳಿಗೆ ರಸಕೊಟ್ಟು ಅದರಿಂದ ಅನ್ನಹುಟ್ಟುವ ಸಾಮರ್ಥ್ಯ ನನ್ನಿಂದ ಪ್ರಾಪ್ತವಾಗಿದೆ.

೧೪. ಹಿಂದಿನ ಶ್ಲೋಕದಲ್ಲಿ ಅಮೃತರಸಮಯನಾದ ಚಂದ್ರನಿಂದ ಔಷಧಿಗಳ ಬೆಳವಣಿಗೆಯೂ, ಅನ್ನದ ಉತ್ಪತ್ತಿಯೂ, ಹೇಳಲ್ಪಟ್ಟಿವೆ. ಆದುದರಿಂದ ನಾವೆಲ್ಲರೂ ಬದುಕುವೆವಲ್ಲ! ಅಂದಬಳಿಕ, ನಮ್ಮ ಮೇಲೆ ನಿನ್ನ ಉಪಕಾರವೇನೆಂದು ಅರ್ಜುನನು ಕೇಳಿದ್ದಕ್ಕೆ ಉತ್ತರ:—

अहं वैश्वानरो भूत्वा प्राणिनां देहमाश्रितः ।
प्राणापानसमायुक्तः पचाम्यन्नं चतुर्विधम् ॥ १४ ॥

**ಅಂ**—ವಿಶ್ವನರಸಂಬಂಧದಿಂದ ವೈಶ್ವಾನರನೆನಿಸಿ, ಉದರದಲ್ಲಿರುವ ವೈಶ್ವಾನರನಲ್ಲಿ ಅಂತರ್ಗತ ನಾಗಿ ಮತ್ತು ಪ್ರಾಣಿಗಳ ದೇಹವನ್ನಾಶ್ರಯಿಸಿ, ಮುಖ್ಯಪ್ರಾಣನ ರೂಪಗಳಾದ ಪ್ರಾಣ–ಅಪಾನಗ ಳಿಂದ ಯುಕ್ತನಾಗಿ ಭಕ್ಷಿಸುವ ಭಕ್ಷ್ಯ, ಭೋಜ್ಯ, ಲೇಹ್ಯ, ಪೇಯ ಭೇದಗಳಿಂದ ನಾಲ್ಕು ವಿಧದ ಅನ್ನ ವನ್ನು ಜೀರ್ಣಿಸುವೆನು.

**ವಿಂ ಅಂ**—ಇಲ್ಲಿ ಹೇಳಿದ ಪ್ರಾಣ–ಅಪಾನಗಳ ಕಾರ್ಯವೆಂದರೆ, ಭಕ್ಷಿಸಿದ್ದರ ಸ್ವೀಕಾರ, ಜೀರ್ಣವಾಗಿ ಉಳಿದದ್ದರ ವಿಸರ್ಜನೆ, ಇವುಗಳು. ಇನ್ನು, ಸೂರ್ಯಾದಿಗಳ ಪ್ರಕಾಶದಿಂದ ಪದಾರ್ಥ ಗಳ ಪ್ರಕಾಶವಾಗಲಿ, ಧರಣಿದೇವಿಯಿಂದ ಧರಿಸುವ ಕಾರ್ಯವಾಗಲಿ, ಚಂದ್ರನಿಂದ ಅನ್ನ ದೊರೆಯಲಿ, ಆದಾಗ್ಯೂ ನಾಲಿಗೆ ಮೊದಲ್ಗೊಂಡು ದೇಹವೆಲ್ಲ ಪ್ರವೇಶಿಸುವಂತೆ ಸಕಲ ಪ್ರಾಣಿಗಳು ಭಕ್ಷಿಸಿದ ನಾಲ್ಕು ವಿಧದ ಅನ್ನವನ್ನು ಯಾರು ಅಂತರ್ನಿಯಾಮಕನಾಗಿ ಸ್ವೀಕರಿಸಿ, ಜೀರ್ಣಗೊಳಿಸಿ, ಅದರ ಸಾರ–ಅಸಾರ ಅಂಶಗಳನ್ನು ವಿಭಾಗಮಾಡಿ, ಸಾರ–ಅಂಶವನ್ನು ರಕ್ತಮಾಂಸಗಳಿಗೆ ಸಂಬಂಧಿಸಿ, ಅಸಾರ–ಅಂಶವನ್ನು ಮಲ–ಮೂತ್ರರೂಪದಿಂದ ಹೊರಗೆ ಬಿಸಾಡುವನೆಂಬುದನ್ನು ನೀನು ತಿಳಿಯುವದು ಅವಶ್ಯವು. ಒಳಗಿನ ಪಚನಾದಿ ಕ್ರಿಯೆಯು ಪ್ರಾಣಿಗಳ ಪ್ರಯತ್ನಕ್ಕೆ ಸಾಧ್ಯವಲ್ಲ. ಮೇಲಾಗಿ,

ಒಳಗಿನ ಪಚನಕ್ರಿಯೆಗಳು ಇಲ್ಲವೆಂತೂ ಹೇಳಲು ಶಕ್ಯವಲ್ಲ. ಹಾಗೆಯೇ, ಭಕ್ಷ್ಯ, ಭೋಜ್ಯ, ಮೊದಲಾದವುಗಳು ಯಾವ ರೂಪದಿಂದ ಒಳಸೇರುವವೋ, ಅದೇ ರೂಪದಿಂದ ರಕ್ತಮಾಂಸಾದಿಗಳಿಗೆ ಸಂಬಂಧಿಸುವವೆಂತಲೂ, ಹೊರಗೆಬರುವವೆಂತಲೂ, ಹೇಳಲಾಗದು, ಆದರೆ, ಸಾರ-ಅಂಶವು ರಕ್ತಾದಿಗಳಿಗೆ ಸಂಬಂಧಿಸುವದು; ಅಸಾರ-ಅಂಶವು ಮಲಮೂತ್ರಾದಿಗಳಿಂದ ಹೊರಗೆಬೀಳುವದು. ಈ ಕ್ರಿಯೆಯು ಪಚನವಿಲ್ಲದೆ ಆಗದು. ಆದ್ದರಿಂದ, ಒಳಗೆ ನಿಂತು ಇಂತಹ ಕಾರ್ಯವನ್ನು ಮಾಡುವ ಯಾವನೊಬ್ಬ ಮಹೋಪಕಾರಿಯು ಇರಲೇಬೇಕೆಂದು ಒಪ್ಪಿಕೊಳ್ಳದೆ ಗತ್ಯಂತರವಿಲ್ಲ. ಹಾಗಾದರೆ ಅವನು ಜಠರಾಗ್ನಿ ಎಂದು ಹೇಳಿದರೆ, ಆ ಜಠರಾಗ್ನಿಯೇ ನಾನು. ಈ ಬಗ್ಗೆ ಬೃಂ (೭-೯-೧)ನೆಯ ಮಂತ್ರದಲ್ಲಿ ಹೇಳಿ ಇದೆ. ನಾನು ಈ ಕಾರ್ಯವನ್ನು ಮಾಡದಿದ್ದರೆ, ಪ್ರಾಣಿಯು ತಲೆಕೆಳಗಾಗಿ ಬೀಳುವನು. ಈ ಅನುಸಂಧಾನದಿಂದ ನನ್ನನ್ನು ಆರಾಧಿಸಿದರೆ, ನಿನ್ನನ್ನು ಪ್ರಕೃತಿಬಂಧನದಿಂದ ಮುಕ್ತನನ್ನಾಗಿ ಮಾಡಿ, ನನ್ನ ದಿವ್ಯಸ್ಥಾನದಲ್ಲಿ ಸೇರಿಸುವೆನು. ಈ ವಿಷಯಕ್ಕೆ ಹಿಂದೆ (೧೪-೨೬,೧೫-೪) ಈ ಶ್ಲೋಕಗಳಲ್ಲಿ ಹೇಳಿಯಿದೆ. ಹಲ್ಲಿನಿಂದ ಅಗಿದು ತಿನ್ನುವ ಪದಾರ್ಥಗಳೇ ಭಕ್ಷ್ಯಗಳು (ಅನಾರಸ), ಇದಕ್ಕೆ ಚರ್ವವೆಂತಲೂ ಹೆಸರು ಭೋಜ್ಯವೆಂದರೆ, ನಾಲಿಗೆಯಿಂದ ತಿನ್ನುವಂಥ ಪಾಯಸ, ಮುಂತಾದವು. ಲೇಹ್ಯವೆಂದರೆ, ನಾಲಿಗೆಯ ಮೇಲಿಟ್ಟು ರಸಾಸ್ವಾದನೆಯಿಂದ ನುಂಗುವ ಪ್ರವಾಹೀ ಪದಾರ್ಥ (ಬೆಲ್ಲ, ಸಕ್ಕರೆ), ಚೋಷ್ಯವೆಂದರೆ, ಹಲ್ಲುಗಳಿಂದ ಅಗಿದು ರಸವನ್ನು ನುಂಗಿ ಮಿಕ್ಕದ್ದನ್ನು ಬೀಸಾಡುವಂಥ ಕಬ್ಬು ಮುಂತಾದವು.

೧೫.

सर्वस्य चाहं हृदि सन्निविष्टो
मत्तः स्मृतिर्ज्ञानमपोहनं च ।
वेदैश्च सर्वैरहमेव वेद्यो
वेदान्तकृद्वेदविदेव चाहम् ॥ १५ ॥

ಅಂ—ನಾನು ಎಲ್ಲರ ಹೃತ್ಕಮಲಗಳಲ್ಲಿ ಅಂತರ್ಗತನಾಗಿರುವೆ. ನನ್ನಿಂದಲೇ ಅನುಭವರೂಪ ಜ್ಞಾನ, ವಿಪರೀತಜ್ಞಾನ, ಇವು ಉಂಟಾಗುವವು. ಸಕಲವೇದಗಳಿಂದ ನಾನೇ ಮುಖ್ಯವೃತ್ತಿಯಿಂದ ತಿಳಿಯಲು ಶಕ್ಯನು. ನಾನೇ ವ್ಯಾಸರೂಪದಿಂದ ಬ್ರಹ್ಮಸೂತ್ರವನ್ನು ನಿರ್ಮಿಸಿರುವೆ. ನನಗೆ ವೇದಾರ್ಥದ ಯಥಾರ್ಥಜ್ಞಾನವುಂಟು. ಈ ವಿಷಯವಾಗಿ ಭಾಗವತ (೧೧-೨೧-೪೩) ನೆಯ ಶ್ಲೋಕದಲ್ಲಿ ಹೇಳಿಯಿದೆ.

ವಿಂ ಅಂ—ನನ್ನಿಂದ ಹಿಂದೆ ಇದ್ದ ಪದಾರ್ಥಗಳ ಜ್ಞಾನವೂ, ಅವುಗಳ ಅನುಭವದಿಂದ ಹುಟ್ಟಿದ ಜ್ಞಾನವೂ, ಇವೆರಡರಿಂದ ಭಿನ್ನವಾದ ವಿಪರೀತಜ್ಞಾನವೂ, ನನ್ನಿಂದಲೇ ಆಗುವವು. ನನ್ನನ್ನು ಆರಾಧಿಸುವವರಿಗೆ ಮೇಲೆ ಹೇಳಿದ ಎರಡು ವಿಧದ ಜ್ಞಾನವಾಗುವದು; ಆದರೆ, ನನ್ನನ್ನು ಆರಾಧಿಸದವರಿಗೆ ಅವೆರಡೂ ಆಗುವದಿಲ್ಲ. ಈ ವಿಷಯದಲ್ಲಿ ಹಿಂದೆ (೧೦-೪)ನೇ ಶ್ಲೋಕದಲ್ಲಿ ಹೇಳಿ ಇದೆ. ನಾನು ಅನ್ನವನ್ನಷ್ಟೇ ವಿಭಾಗಿಸುವೆನೆಂತಲ್ಲ, ಆದರೆ ಬುದ್ಧಿಯನ್ನು ಸ್ಮೃತಿಗಳ ಭೇದದಿಂದ ವಿಭಾಗಿಸುವೆನು. ಹಾಗಾದರೆ, " ನೀನು ಎಲ್ಲಿಯಾದರೂ ವಾಸಮಾಡಿ ಎಲ್ಲರಲ್ಲಿ ಸ್ಮೃತಿಯನ್ನು ಹುಟ್ಟಿಸಲು ಹೇಗೆ ಸಮರ್ಥನು " ಎಂದು ಕೇಳಿದರೆ, ಚತುರ್ಮುಖ ಮೊದಲ್ಗೊಂಡು ಸ್ಥಾವರವರೆಗಿದ್ದ ಪ್ರಾಣಿಸಮೂಹದ ಹೃತ್ಕಮಲದಲ್ಲಿ ವಾಸವಾಗಿರುವೆನು. ಮತ್ತು ಬುದ್ಧಿ ಮೊದಲಾದವುಗಳನ್ನು ಹುಟ್ಟಿಸುವೆನು; ಇಂಥ ಮಹಿಮೆಯುಳ್ಳ ನನ್ನ ಜ್ಞಾನವು ಹೇಗಾಗುವದೆಂದು ಕೇಳಿದರೆ, ಸಕಲ

ವೇದಗಳಿಂದಲೂ, ಅವುಗಳಿಗೆ ಅನುಕೂಲವಾದ ಶಾಸ್ತ್ರಗಳಿಂದಲೂ, ನನ್ನ ಜ್ಞಾನವಾಗುವದು. ವೇದಗಳು ತಿಳಿಯಲು ಕಷ್ಟಸಾಧ್ಯವಿರುವ ಮೂಲಕ, ಅವುಗಳಿಂದ ತಿಳಿಯುವ ಬಗೆ ಹೇಗೆಂದು ಕೇಳಿದರೆ, ವೇದಗಳ ಅರ್ಥವನ್ನು ನಿರ್ಣಯಿಸುವ ಬ್ರಹ್ಮಮೀಮಾಂಸಾಶಾಸ್ತ್ರವನ್ನು ನಾನು ವೇದವ್ಯಾಸರೂಪದಿಂದ ರಚಿಸಿರುವೆನು. ಈ ಬಗ್ಗೆ (೧೩–೫)ನೇ ಶ್ಲೋಕದಲ್ಲಿ ಹೇಳಿ ಇದೆ. ಒಳ್ಳೇದು, ನೀನು ಮಾಡಿದ ಬ್ರಹ್ಮಸೂತ್ರಗಳಿಂದ ಅನ್ಯರು ವೇದಾರ್ಥಗಳನ್ನು ನಿರ್ಣಯಿಸಲಿ; ಆದರೆ, ನೀನು ಯಾವುದರಿಂದ ಆ ಅರ್ಥವನ್ನು ನಿರ್ಣಯಿಸಿ ಬ್ರಹ್ಮಮೀಮಾಂಸಾಶಾಸ್ತ್ರವನ್ನು ರಚಿಸಿರುವಿ? ಅರ್ಥದ ಜ್ಞಾನದಿಂದಲೇ ಶಬ್ದರಚನೆಯಾಗುವದು, ಹೀಗೆ ಆಕ್ಷೇಪಿಸಿದರೆ, ನಾನು ನನ್ನ ಸಾಮರ್ಥ್ಯದಿಂದಲೇ ವೇದಾರ್ಥವನ್ನು ತಿಳಿಯುವೆ. ಅದಕ್ಕಾಗಿ ನನಗೆ ಅನ್ಯ ಸಾಧನ ಬೇಕಿಲ್ಲ. ನಾನೇ ವೇದಗಳನ್ನು ಅರಿತಿದ್ದರೂ, ವೇದಗಳು ನನ್ನನ್ನು ಅರಿಯವು. ನಾನು ಸರ್ವಜ್ಞನಾದುದರಿಂದ ಸಕಲ ವೇದಾರ್ಥ ತಿಳಿದರೂ, ಅನ್ಯರಿಗೆ ಅದರ ಜ್ಞಾನವಾಗಬೇಕೆಂದು ಮೀಮಾಂಸಾಶಾಸ್ತ್ರವನ್ನು ರಚಿಸಿರುವೆ. ಅದರಿಂದ ನನ್ನ ಜ್ಞಾನವಾದರೆ, ಸಂಸಾರಬಂಧನದಿಂದ ಮುಕ್ತನನ್ನಾಗಿ ಮಾಡಿ, ನನ್ನ ದಿವ್ಯಸ್ಥಾನವನ್ನು ಕೊಡುವೆನು. ಈ ಬಗ್ಗೆ ಹಿಂದೆ (೧೦–೧೧)ನೇ ಶ್ಲೋಕದಲ್ಲಿ ಹೇಳಿ ಇದೆ.

೧೬, ೧೭, ೧೮. ಈ ಮೇರೆಗೆ, ಸಕಲ ಜೀವರಾಶಿಗಳಲ್ಲಿ ಪರಮಾತ್ಮನ ಅಂತರ್ಗತತ್ವವನ್ನು ವರ್ಣಿಸಿ, ಅವನು ಸರ್ವೋತ್ತಮನೆಂದು ಹೇಳಿದ್ದು, ಅಥವಾ, “ಸಕಲ ವೇದಗಳಿಂದ ನಿನ್ನ ಜ್ಞಾನವಾಗುವದೆಂದು ಉಕ್ತವಾಗಿದೆ; ಆದರೆ, ಅದು ಅಸಂಭವವೇ ಸರಿ. ಏಕೆಂದರೆ ಎಲ್ಲ ವೇದಗಳ ಅಧ್ಯಯನ ಮಾಡಿ, ಅವುಗಳ ಅರ್ಥ ತಿಳಿದುಕೊಳ್ಳಲು ಯಾರೂ ಬಯಸುವದಿಲ್ಲ, ಆದ್ದರಿಂದ ಅವುಗಳಿಂದ ನಿನ್ನ ಜ್ಞಾನವಾಗಿ ನಿನ್ನನ್ನು ಆರಾಧಿಸುವದು ಅಶಕ್ಯವೇ ಸರಿ” ಎಂದು ಅರ್ಜುನನು ನುಡಿದದ್ದಕ್ಕೆ ಉತ್ತರ —

> द्वाविमौ पुरुषौ लोके क्षरश्चाक्षर एव च ।
> क्षरः सर्वाणि भूतानि कूटस्थोऽक्षर उच्यते ॥ १६ ॥
> उत्तमः पुरुषस्त्वन्यः परमात्मेत्युदाहृतः ।
> यो लोकत्रयमाविश्य बिभर्त्यव्यय ईश्वरः ॥ १७ ॥
> यस्मात्क्षरमतीतोऽहमक्षरादपि चोत्तमः ।
> अतोऽस्मि लोके वेदे च प्रथितः पुरुषोत्तमः ॥ १८ ॥

**ಅಂ—** ಅಸ್ವತಂತ್ರವಾದ ಚೇತನವರ್ಗದಲ್ಲಿ ಇಬ್ಬರು ಚೇತನಪುರುಷರಿರುವರು. ಅವರು ಯಾರೆಂದರೆ, ಶರೀರವು ನಾಶವಾಗುವದರಿಂದ ‘ಕ್ಷರ’ ಶಬ್ದವಾಚ್ಯಪುರುಷನೊಬ್ಬನು (ಚತುರ್ಮುಖಾದಿ ಜೀವರಾಶಿಗಳು), ಶರೀರದಿಂದ ಕೂಡ ನಾಶವಿಲ್ಲದ ‘ಅಕ್ಷರ’ ಶಬ್ದವಾಚ್ಯನಾದ ಪುರುಷನು ಎರಡನೇಯವನು; ಹೀಗೆ ಅವರೀರ್ವರು ಇರುವರೆಂದು ಪ್ರಮಾಣಗಳಿಂದ ನಿಶ್ಚಿತವಾಗಿದೆ. ಇಲ್ಲಿ ಏವ ಕಾರದಿಂದ ಮೂರನೇ ವಿಧದ ಭೇದವಿಲ್ಲೆಂದು ಸೂಚಿತವಾಗುವದು. ಅವರಲ್ಲಿ ಎರಡನೇ ಪುರುಷನು ಆಕಾಶದಂತೆ ವಿಕಾರವಿಲ್ಲದವನೂ, ಎಲ್ಲ ಕಡೆಗೆ ವ್ಯಾಪ್ತಿಯುಳ್ಳವನೂ ಇರುವದರಿಂದ ಅಕ್ಷರಪುರುಷನೆನಿಸುವನು; ಆ ಪುರುಷನೇ ಲಕ್ಷ್ಮೀದೇವಿಯು. ಛಾಂದೋಗ್ಯಭಾಷ್ಯದಲ್ಲಿ ಪುರುಷನಂತೆ ಸಾಮರ್ಥ್ಯವುಳ್ಳ ಸ್ತ್ರೀಯಳಲ್ಲಿ ಪುಲ್ಲಿಂಗಪ್ರಯೋಗವುಂಟೆಂದು ಹೇಳಲ್ಪಟ್ಟಿದೆ; ಅದಕ್ಕನುಸರಿಸಿ, ಲಕ್ಷ್ಮೀದೇವಿಯು ಚತುರ್ಮುಖ ಮುಂತಾದ ಎಲ್ಲ ಪುರುಷರಿಗಿಂತ ಉತ್ತಮನಾದ ಮತ್ತು ಅವರಿಗಿಂತ ಭಿನ್ನವಾದ ಅನ್ಯಪುರುಷನಿರುವನು; ಹೊರ್ತು ಅವರೀರ್ವರಲ್ಲಿ ಒಬ್ಬನಲ್ಲ. ಈ ಸಂಬಂಧವಾಗಿ ಕ್ಷರಾಕ್ಷರ ಸಕಲ ಜೀವ

ರಾಶಿಗಳು ಕೇವಲ ಚೇತನರು; ಉತ್ತಮಪುರುಷನಾದವನು ಪರಮಚೇತನನು ಎಂದು ಶ್ವೇತಾಶ್ವತರ ಶ್ರುತಿಯು (೬–೧೩) ಮಂತ್ರದಲ್ಲಿ ಹೇಳಿ ಇದೆ. ಆದ್ದರಿಂದ ಕ್ಷರಾಕ್ಷರರಿಗಿಂತ ಭಿನ್ನನಾದವನು ಪುರುಷೋತ್ತಮನೆಂಬ ಅಭಿಪ್ರಾಯವು. ಈ ಅರ್ಥದಲ್ಲಿ ಯುಕ್ತಿಯನ್ನು ಕೂಡ ಹೇಳಬಹುದು. ಹೇಗಂದರೆ, ಭೂ ಭುವ ಸ್ವ ಭೂಲೋಕ, ಭುವರ್ಲೋಕ, ಸ್ವರ್ಲೋಕ, (ಪಾತಾಳ, ಮೃತ್ಯು, ಸ್ವರ್ಗ) ಹೀಗೆ ಮೂರು ಲೋಕಗಳನ್ನೂ, ಉಪಲಕ್ಷಣದಿಂದ ಹದಿನಾಲ್ಕು ಲೋಕಗಳನ್ನೂ, ಈ ಉತ್ತಮಪುರುಷನು ಪ್ರವೇಶಿಸಿ, ಅವುಗಳನ್ನು ಧರಿಸುವವನು. ಅವುಗಳ ಧಾರಣ ಪೋಷಣಾದಿಗಳನ್ನೂ ಮಾಡುವವನು ; ಅಂತೆಯೇ ಅವನು ಪುರುಷೋತ್ತಮನು; ಅವನೇ ಪರಮಾತ್ಮನು. ಹಾಗಾದರೆ, ಆ ಲೋಕಗಳು ನಾಶಹೊಂದಲು, ಅವುಗಳಲ್ಲಿ ಅಂತರ್ಗತನಾದ ಪರಮಾತ್ಮನಿಗೆ ನಾಶಉಂಟೇ ಹೇಗೆಂದು ಕೇಳಿದರೆ, ಇಲ್ಲ ; ಅವನು ನಾಶರಹಿತನು. ಈ ಬಗ್ಗೆ ಹಿಂದೆ (೨–೨೧)ನೆಯ ಶ್ಲೋಕದಲ್ಲಿ ಹೇಳಿಯಿದೆ. ಇದಕ್ಕೆ ಅದೆಂತೆಂದು ಪ್ರಶ್ನೆಮಾಡಿದರೆ, ಅವನು ಸರ್ವಸ್ವಾಮಿಯಾದ್ದರಿಂದ ಅವನಲ್ಲಿ ಅಂಥ ಅಚಿಂತ್ಯಶಕ್ತಿಯುಂಟು. ಇದರಿಂದ "ಕ್ಷರಾಕ್ಷರರಿಗಿಂತ ಭಿನ್ನನಾದವನ ಹೆಸರೇನು" ಎಂದು ಬರುವ ಸಂದೇಹವು ದೂರಾಯಿತು ಇನ್ನು, ಆ ಪುರುಷೋತ್ತಮನು ನನ್ನಿಂದ ಭಿನ್ನನೋ ಎಂದು ಕೇಳಿದರೆ, ಅವನೇ ನಾನೆಂದು ಉಸುರುವೆನು. ಕ್ಷರರನ್ನು ಮಿಕ್ಕಿದ್ದರಿಂದಲೂ, ಅಕ್ಷರನಿಗಿಂತ ಉತ್ತಮನಾದುದರಿಂದಲೂ, ಪೌರುಷೇಯ ಗ್ರಂಥಗಳಲ್ಲಿಯೂ, ಅಪೌರುಷೇಯ ಗ್ರಂಥಗಳಾದ ವೇದಗಳಲ್ಲಿಯೂ, ಮುಖ್ಯವೃತ್ತಿಯಿಂದ ಪ್ರತಿಪಾದಿತವಾದ ಪುರುಷೋತ್ತಮನೇ ನಾನೆಂದು ತಿಳಿ.

೪೦ ಅಂ—ಕ್ಷರಾಕ್ಷರ ಪುರುಷರೂ, ಪುರುಷೋತ್ತಮನೂ, ಹೀಗೆ ಮೂವರೂ ಶರೀರದಲ್ಲಿ ವಾಸಮಾಡಿದ್ದರಿಂದ, ಪುರುಷರೆನಿಸುವರು. ಬ್ರಹ್ಮಾದಿ ಜೀವರಾಶಿಗಳು ಕ್ಷೇತ್ರಜ್ಞರೆನಿಸಿ, ಆಯಾ ಶರೀರಗಳಲ್ಲಿ ವಾಸಮಾಡಿರುವರು. ಆದರೆ, ಪರಮಾತ್ಮನು ಎಲ್ಲ ದೇಹಗಳಲ್ಲಿ ಮುಖ್ಯಕ್ಷೇತ್ರಜ್ಞನಾಗಿರುವನು. ಲಕ್ಷ್ಮೀದೇವಿಯು ದೇಶಕಾಲಗಳಿಂದ ಪರಮಾತ್ಮನಿಗೆ ಸಮಾನವಾದ ವ್ಯಾಪ್ತಿಯುಳ್ಳವಳು. ಅವಳಿಗೆ ಅವನ ವಿಯೋಗವಿಲ್ಲದ್ದರಿಂದ ಅವಳು ಅವನ ಸಂಗಡಲೇ ಎಲ್ಲ ಕಡೆಯಲ್ಲಿರುವಳು. ಇನ್ನು, ಇದನ್ನೆಲ್ಲ ತಿಳಿಯುವ ಬಗೆ ಹೇಗೆಂದು ಕೇಳಿದರೆ, ವೇದ–ಶಾಸ್ತ್ರ–ಪುರಾಣಾದಿಗಳ ಅರ್ಥವನ್ನಾಲೋಚಿಸಿದರೆ, ಆ ಜ್ಞಾನವು ಆಗುವದು. ಇಲ್ಲಿ ವಿವೇಕವೇನಂದರೆ, "ಪರಮಾತ್ಮನು ಕ್ಷರಾಕ್ಷರರನ್ನು ಮಿಕ್ಕಿದವನೆಂದು ಅಥವಾ ಕ್ಷರಾಕ್ಷರರಿಗಿಂತ ಉತ್ತಮನೆಂದು" ಹೇಳದೆ, "ಕ್ಷರರಿಗೆ ಮಿಗಿಲಾದವನು, ಅಕ್ಷರನಿಗಿಂತ ಉತ್ತಮನೆಂದು" ಪ್ರಕಾರಭೇದದಿಂದ ನಿರ್ದೇಶಿಸಿದ್ದರಿಂದ ತಿಳಿದುಬರುವದೇನಂದರೆ, ಅಸ್ವತಂತ್ರ ಮತ್ತು 'ಕ್ಷರ' ಶಬ್ದವಾಚ್ಯ ಜೀವಕೋಟಿಯಲ್ಲಿ ಲಕ್ಷ್ಮೀದೇವಿಯನ್ನು ಸೇರಿಸಿದಾಗ್ಯೂ, ಅವಳಿಗೆ ಜೀವದ ಧರ್ಮವು ಅಂಟಲರಿಯದು, ಏಕೆಂದರೆ, ಅವಳು ನಿತ್ಯಮುಕ್ತಳಾದ್ದರಿಂದಲೂ, ಆಕೆಯು ದೇಶ–ಕಾಲಗಳಿಂದ ವ್ಯಾಪ್ತಿಯುಳ್ಳವಳಾದ್ದರಿಂದಲೂ, ಜೀವಗಳಿಗಿಂತ ಉತ್ತಮಳು. ಇನ್ನು, ಈಶಕೋಟಿಯಲ್ಲಿ ಅವಳ ಸಮಾವೇಶವಿದ್ದಾಗ್ಯೂ, ಆಕೆ ಪರಮಾತ್ಮನಿಗೆ ಸಮಾನಳಲ್ಲ; ಏಕೆಂದರೆ, ಅವನು ಅವಳಿಗಿಂತ ಗುಣಗಳಿಂದ ಶ್ರೇಷ್ಠನು. ಆದ್ದರಿಂದ ಪರಮಾತ್ಮನು ಪುರುಷೋತ್ತಮನೆನಿಸುವನು.

೧೯. ಹಿಂದಣ ಶ್ಲೋಕದಲ್ಲಿ ನಿರೂಪಿಸಿದ ಅರ್ಥಜ್ಞಾನವುಳ್ಳವರಿಗೆ ಫಲ ಹೇಳಿದ್ದು, ಅಥವಾ, "ಕೃಷ್ಣಾ, ನೀನು ಪುರುಷೋತ್ತಮನೆಂದು ವರ್ಣಿತವಾದ್ದರಿಂದ ನನ್ನ ಪ್ರಶ್ನೆಕ್ಕೆ ಏನು ಸಮಾಧಾನ ಹೇಳಿದ ಹಾಗಾಯಿತೆಂದು" ಅರ್ಜುನನು ಕೇಳಿದ್ದಕ್ಕೆ ಹೇಳಿದ್ದು :—

**यो मामेवमसंमूढो जानाति पुरुषोत्तमम् ।**
**स सर्वविद्भजति मां सर्वभावेन भारत ॥ १९ ॥**

ಅರ್ಥ—ಭರತಕುಲಭೂಷಣನೇ, ವೇದಗಳಲ್ಲಿ ಕ್ಷರಾಕ್ಷರರಿಗಿಂತ ನಾನೇ ಉತ್ತಮನೆಂದು ಪ್ರತಿಪಾದಿಸಿದ್ದು ನಿಜವು, ಹೊರ್ತು ಸುಳ್ಳಲ್ಲೆಂದು ಭ್ರಾಂತಿಯಿಲ್ಲದೆ ವಿವೇಕದಿಂದ ತಿಳಿದ ಅಧಿಕಾರಿಯು ಸರ್ವ ಶಾಸ್ತ್ರಗಳ ಗುಟ್ಟನ್ನರಿತವನೆಂತಲೂ, ನನ್ನನ್ನು ಎಲ್ಲ ವಿಧದಿಂದ ಆರಾಧಿಸುವನೆಂತಲೂ, ತಿಳಿ.

ವಿಂ ಅರ್ಥ—ಅರ್ಜುನಾ, ನೀನು ದೊಡ್ಡ ಕುಲದಲ್ಲಿ ಹುಟ್ಟಿದ್ದರಿಂದಲೂ, ಭಾರತ ಶಬ್ದದಿಂದ ಹೇಳಿದ ಬ್ರಹ್ಮವಿದ್ಯೆಯಲ್ಲಿ ನಿಷ್ಣಾತನಾದ್ದರಿಂದಲೂ, ಪುರುಷೋತ್ತಮತತ್ವ ಜ್ಞಾನವನ್ನೂ, ಅದರ ಫಲವನ್ನೂ ಹೊಂದಲು ಯೋಗ್ಯನು. ಇದರಿಂದ ಸಕಲ ಜ್ಞಾನಗಳ ಮತ್ತು ಆರಾಧನೆಗಳ ಪರ್ಯವಸಾನವು ಪುರುಷೋತ್ತಮತತ್ವ ಜ್ಞಾನದಲ್ಲಿಯೇ ಆಗುವದರಿಂದ, ಅಂಥ ಜ್ಞಾನದಿಂದ ಭಕ್ತಿಯೋಗ, ಅದರಿಂದ ನನ್ನ ಆರಾಧನೆ, ಅದರಿಂದ ಎಲ್ಲ ವಿಷಯಗಳ ಜ್ಞಾನ ಇವೆಲ್ಲ ಆಗುವದೇ ನೀನು ಕೇಳಿದ ಪ್ರಶ್ನೆಕ್ಕೆ ಸಮಾಧಾನವೆಂದು ತಿಳಿ.

೨೦. ಈ ಮೇರೆಗೆ ಶ್ರೀಕೃಷ್ಣನು ಹೇಳತಕ್ಕದ್ದನ್ನೆಲ್ಲ ಹೇಳಿ, ಅದಕ್ಕೆ ಫಲ ಹೇಳುವದರಿಂದ ಉಪಸಂಹರಿಸಿದ್ದು· —

इति गुह्यतमं शास्त्रमिदमुक्तं मयानघ ।
एतद्बुद्ध्वा बुद्धिमान्स्यात्कृतकृत्यश्च भारत ॥ २० ॥

ಅರ್ಥ—ಭರತಕುಲಶ್ರೇಷ್ಠನೇ, ಪಾಪರಹಿತನೇ, ಹಿಂದೆ ೩ನೇ ಶ್ಲೋಕದಿಂದ ನಾನು ಸರ್ವಾಂತರ್ಯಾಮಿ ಎಂದು ಮುಂತಾಗಿ ಹೇಳಿದ ಅಥವಾ ೧ನೇ ಶ್ಲೋಕದಿಂದ ಪ್ರಪಂಚ–ವೃಕ್ಷಕ್ಕೆ ಮೂಲಕಾರಣನು ಎಂದು ಹೇಳಿದ ಶಾಸ್ತ್ರವು ಅತಿಗೂಢವಾದ್ದರಿಂದ ನಾನು ನಿನಗೆ ಹೇಳಿರುವೆನು. ಇದನ್ನೆಲ್ಲ ತಿಳಿದರೆ, ಅಪರೋಕ್ಷಜ್ಞಾನಿಯಾಗಿ ಮುಕ್ತಿಯನ್ನು ಪಡೆಯುವಿ.

ವಿಂ ಅರ್ಥ—ಅತಿಗೌಪ್ಯವಾದ ಈ ಗೀತಾಶಾಸ್ತ್ರವನ್ನು ನಾನು ನಿನಗೆ ಉಪದೇಶ ಮಾಡಿದ್ದಾಯಿತು. ನೀನು ಬ್ರಹ್ಮವಿದ್ಯೆಯಲ್ಲಿ ತತ್ಪರನಾದ್ದರಿಂದಲೂ, ಪ್ರತಿಬಂಧಕವಾದ ಪಾಪರಹಿತನಾದ್ದರಿಂದಲೂ, ಈ ಉಪದೇಶಕ್ಕೆ ಯೋಗ್ಯನು. ನಿನಗೆ ಹಿಂದಿನ ೧೪ ಅಧ್ಯಾಯಗಳಿಂದ ಪರಮಾತ್ಮನ ವಿಷಯಕ್ಕೆ ಹೇಳಿದ ಎಲ್ಲ ಗೀತಾಶಾಸ್ತ್ರಾರ್ಥವು ಸಂಗ್ರಹದಿಂದ ಈ ಅಧ್ಯಾಯದಲ್ಲಿ ಹೇಳಿರುವೆನು. ವೇದಗಳ ಅರ್ಥವೆಲ್ಲ ಇಲ್ಲಿ ಮುಗಿದಿರುವದು. ಈ ಸಂಬಂಧವಾಗಿ (೯–೧೯) ನೆಯ ಶ್ಲೋಕದಲ್ಲಿ ಹೇಳಲಾಗಿದೆ ಮೇಲ್ಕಾಣಿಸಿದ ಪುರುಷೋತ್ತಮತತ್ವಜ್ಞಾನದಿಂದ ನಾನು ಅತಿ ಸಂತುಷ್ಟನಾಗಿ ಪ್ರಾಣಿಯಿಂದ ಕರ್ಮಮಾಡಿಸಿ, ಅದಕ್ಕೆ ಬೇಕಾದ ಬುದ್ಧಿಯನ್ನು ಕೊಟ್ಟು, ಅವನನ್ನು ಸಂಸಾರಬಂಧನದಿಂದ ಬಿಡುಗಡೆ ಮಾಡಿ, ನನ್ನ ಸನ್ನಿಧಿಗೆ ಒಯ್ಯುವೆನು. ಆದ್ದರಿಂದ, ಅರ್ಜುನಾ, ನಾನೇ ಪುರುಷೋತ್ತಮನೆಂದು ತಿಳಿ. "ಪಾರ್ಥ, ಭರತಕುಲಶ್ರೇಷ್ಠನೇ, ಪಾಪರಹಿತನೇ" ಎಂದು ಮುಂತಾಗಿ ಸಂಬೋಧಿಸಿ, "ಅಧಿಕಾರಿಯು ಎಲ್ಲ ಶಾಸ್ತ್ರ ಬಲ್ಲವನು; ನನ್ನನ್ನು ಆರಾಧಿಸು" ಎಂದು ಹೇಳಿದ್ದರಿಂದಲೂ, "ನೀನು ಬುದ್ಧಿವಂತನೂ, ಕೃತಕೃತ್ಯನೂ ಆಗುವಿ" ಎಂದು ಪರೋಕ್ಷವಾಗಿ ಉಪದೇಶಿಸಿದ್ದರಿಂದಲೂ, ಈ ಉಪದೇಶವು ನಿನ್ನ ಸಲುವಾಗಿಯೇ ಅಲ್ಲ; ಆದರೆ, ನಿನ್ನ ನಿಮಿತ್ತ ಮಾಡಿಕೊಂಡು ಸಕಲ ಲೋಕೋದ್ಧಾರಕ್ಕಾಗಿ ಹೇಳಲ್ಪಟ್ಟಿರುವದು. ಅಂಥ ಉಪದೇಶದಿಂದ ನಡೆಯುವವನಿಗೆ ಕೂಡ ಮೇಲೆ ಹೇಳಿದ ಫಲವು ದೊರೆಯುವದು. ಅಂದಬಳಿಕ ಸಾಕ್ಷಾತ್ ಉಪದೇಶಿಸಲ್ಪಟ್ಟ ನಿನಗೆ ಅಂಥ ಫಲವು ದೊರೆಯುವದೆಂದು ಹೇಳಲಿಕ್ಕೆ ಬೇಡ ಎಂಬ ಅರ್ಥವು ಸೂಚಿತವಾಗುವದು. ಅಹಹ! ಇಂತಹ ಶಾಸ್ತ್ರದ ಮಹಿಮೆಯನ್ನು ಎಷ್ಟೆಂತ ವರ್ಣಿಸುವದು!

**ॐतत्सदिति श्रीमद्भगवद्गीतासूपनिषत्सु ब्रह्मविद्यायां योगशास्त्रे श्रीकृष्णा-
र्जुनसंवादे पुराणरुषोत्तमयोगो नाम पंचदशोऽध्यायः ॥ १५ ॥**

ಅಂ—ಈಮೇರೆಗೆ, ಷಡ್ಗುಣೈಶ್ವರ್ಯಸಂಪನ್ನನಾದ ಪರಮಾತ್ಮನಿಂದ ಮನೋಹರ, ಅಲಂಕಾರಿಕ ಮತ್ತು ಇಷ್ಟಶಬ್ದಗಳಿಂದ ಉಪದೇಶಿಸಲ್ಪಟ್ಟದ್ದೂ. ಉಪನಿಷತ್ತಿಗೆ ಸಮಾನವೂ, ಪರಬ್ರಹ್ಮವಿಷಯಕ ವಿದ್ಯೆಯೂ, ಎನಿಸುವ ಮತ್ತು ಕರ್ಮ ಯೋಗಾದಿಗಳನ್ನು ಪ್ರತಿಪಾದಿಸುವ, ಶ್ರೀಕೃಷ್ಣನಿಗೂ, ಅರ್ಜುನನಿಗೂ, ನಡೆದ ಸಂವಾದರೂಪವಾದ **ಗೀತಾಶಾಸ್ತ್ರದಲ್ಲಿಯ ಪುರಾಣಪುರುಷೋತ್ತಮಯೋಗವೆಂಬ,** ಈ **ಹದಿನೈದನೆಯ** ಅಧ್ಯಾಯವು ಮುಗಿಯಿತು.



# ೧೬ನೆಯ ಅಧ್ಯಾಯವು.



೧-೨-೩ ಹಿಂದಣ ಅಧ್ಯಾಯದ ೫ನೆಯ ಶ್ಲೋಕದಲ್ಲಿ ಸಂಕ್ಷೇಪವಾಗಿ ಹೇಳಿದ ಪುರುಷಾರ್ಥಗಗಳಾದ ಜ್ಞಾನ-ಮೋಕ್ಷಗಳ ಸಾಧನವು ಮತ್ತು ಅದೇ ಅಧ್ಯಾಯದ ೧೧ನೆಯ ಶ್ಲೋಕದಿಂದ ಹೇಳಿದ ಪುರುಷಾರ್ಥಕ್ಕೆ ವಿರೋಧಗಳು ಇವು ದೇವಾಸುರ ಲಕ್ಷಣಗಳಾದ್ದರಿಂದ ಅವುಗಳು ಈ ಅಧ್ಯಾಯದಲ್ಲಿ ವಿವರಿಸಲ್ಪಡುವವು. ಇದೇ ಹಿಂದಿನ ಮತ್ತು ನಡೆಯುವ ಅಧ್ಯಾಯಗಳ ಸಂಗತಿ ಮತ್ತು ಅವುಗಳಲ್ಲಿಯ ಭೇದವೆಂದು ತಿಳಿಯತಕ್ಕದ್ದು. ಸಾಧನಾನುಷ್ಠಾನ ಮಾಡುವವನು ವಿರೋಧವನ್ನು ಕೂಡ ಬಿಡುವದೇ ಅವಶ್ಯವೆಂದು ಸೂಚಿಸುವದಕ್ಕಾಗಿ ಹೇಳಿದ್ದು, ಅವುಗಳಲ್ಲಿ ದೇವಲಕ್ಷಣವು ಮುಖ್ಯವಾದುದರಿಂದ ಮೊದಲು ಅದನ್ನೇ ಮುಂದಣ ಮೂರು ಶ್ಲೋಕಗಳಿಂದ ನಿರೂಪಿಸಿದ್ದು, ಪರಮಾತ್ಮನು ಉಪದೇಶಿಸಿದ ಗೀತಾಶಾಸ್ತ್ರವನ್ನು ಅರ್ಜುನನು ಕೇಳಿದನು. ಅದರಲ್ಲಿ ಮಾಡತಕ್ಕದ್ದೆಂದು ಹೇಳಿದ ಕರ್ಮಯೋಗವನ್ನು ಅನುಷ್ಠಾನ ಮಾಡಿ, ಅದರಿಂದ ಅಂತಃಕರಣವು ಶುದ್ಧವಾಗಿ, ಶ್ರವಣಾದಿಗಳ ದ್ವಾರದಿಂದ ಜ್ಞಾನಯೋಗವನ್ನು ಪಡೆದು, ತನ್ಮೂಲಕ ಮೋಕ್ಷವನ್ನು ಹೊಂದಲು ಅಧಿಕಾರಿಗಳು ಅನಧಿಕಾರಿಗಳು ಯಾರೆಂಬುದನ್ನು ತಿಳಿದುಕೊಳ್ಳುವ ಅರ್ಜುನನ ಬಯಕೆಯನ್ನು ಕಂಡು ಅವುಗಳನ್ನೆಲ್ಲ ವಿಸ್ತಾರವಾಗಿ ತಿಳಿಸಿ ಹೇಳುವ ಉದ್ದೇಶದಿಂದ ಸರ್ವಜ್ಞರಿಂದ ವಂದಿತನೂ, ಸರ್ವಜ್ಞನೂ, ಕೃಪಾಸಾಗರನೂ, ಆದ ಶ್ರೀಕೃಷ್ಣನು ಮುಂದೆ ನುಡಿದದ್ದು. ಹಿಂದೆ (೯-೧೨, ೧೩) ಶ್ಲೋಕಗಳಲ್ಲಿ ದೇವ-ಅಸುರ-ರಾಕ್ಷಸ ಪ್ರಕೃತಿಗಳು ಹೇಳಲ್ಪಟ್ಟವು. ಅವರವರ ಭೋಗಾನುಸಾರವಾಗಿ ಹುಟ್ಟಿದ ಆ ವಿವೇಕ-ರಾಗ-ದ್ವೇಷಗಳೆಂಬವು ಸಾತ್ವಿಕ-ರಾಜಸ-ತಾಮಸ ವಾಸನಾರೂಪಗಳಾಗಿವೆ. ಹೀಗೆ (೧೫-೨) ನೆಯ ಶ್ಲೋಕದಲ್ಲಿ ಈ ಮೂರು ಬಗೆಯ ಪ್ರಕೃತಿಗಳು ಅನುವಾದಿಸಲ್ಪಟ್ಟವು. ಅವುಗಳಲ್ಲಿ ವಿಹಿತ ಕರ್ಮಾತ್ಮಕ-ಜ್ಞಾನಾನುಷ್ಠಾನ ಪ್ರವೃತ್ತಿಗೆ ಕಾರಣವಾದ ಸಾತ್ವಿಕ ಮತ್ತು ಶುಭವಾಸನೆಯೇ ದೈವೀಪ್ರಕೃತಿ ಎನಿಸುವದು. ರಾಗ ದ್ವೇಷ ಮೂಲಕ ವಿವಿಧ ಅನರ್ಥಗಳಿಗೆ ಕಾರಣವಾಗಿ ನಿಷಿದ್ಧ ಕರ್ಮಪ್ರವೃತ್ತಿಯನ್ನುಂಟುಮಾಡುವ ಅಶುಭ ವಾಸನೆಯು ರಾಜಸತಾಮಸವಾಗಿದ್ದು, ಅದಕ್ಕೆ ಅಸುರರಾಕ್ಷಸಪ್ರಕೃತಿ ಎನ್ನುವರು. ಇವೆರಡರಲ್ಲಿರುವ ಭೇದವೇನಂದರೆ ಭೋಗವೇ ಮುಖ್ಯವಾದ್ದರಿಂದ ರಾಗವು ಪ್ರಬಲಗೊಂಡು ಅದಕ್ಕೆ ಅಸುರವೆಂಬ ಹೆಸರು ಬಂದಿರುವದು. ಇನ್ನು, ಹಿಂಸೆಯೇ ಪ್ರಧಾನವಾದ್ದರಿಂದ ದ್ವೇಷವು ಪ್ರಬಲವಾಗಿ ರಾಕ್ಷಸಪ್ರಕೃತಿ ಎನಿಸುವದು. ಈ ಅಭಿಪ್ರಾಯದಿಂದ ಮೇಲಿನ ಮೂರು ವಿಧದ ಪ್ರಕೃತಿಗಳಲ್ಲಿ ಅನರ್ಥಪ್ರವೃತ್ತಿಗೆ ಕಾರಣವಾಗಿ ಅಶುಭವಾಸನಾರೂಪ ರಾಕ್ಷಸೀ-ಆಸುರೀ ಹೀಗೆ ಎರಡು ಬಗೆಯ ಪ್ರಕೃತಿಗಳನ್ನು ಒಂದುಗೂಡಿಸಿ, ಹಿತಪ್ರವೃತ್ತಿಗೆ ಕಾರಣವಾಗುವ ಶುಭವಾಸನೆಯು ದೈವೀ ಸಂಪತ್ತು, ಅನರ್ಥಪ್ರವೃತ್ತಿಗೆಳೆಸುವ ಅಶುಭವಾಸನೆಯು ಅಸುರ ಸಂಪತ್ತು, ಎಂದು ಅವುಗಳನ್ನೂ ಎರಡು ಬಗೆಯಾಗಿ ವಿಂಗಡಿಸಿ, ದೈವೀಸಂಪತ್ತುಳ್ಳವರು ಅಧಿಕಾರಿಗಳು, ಅಸುರಸಂಪತ್ತಿಯವರು ಅನಧಿಕಾರಿಗಳು, ಎಂದು ಸ್ಪಷ್ಟೀಕರಿಸಲು ಅಪೇಕ್ಷಿಸಿದನು. ಹಿಂದೆ (೨-೫೪) ನೆಯ ಶ್ಲೋಕದಲ್ಲಿ ಹೇಳಿದ ದೈವೀಸಂಪತ್ತುಳ್ಳವರ ಲಕ್ಷಣಗಳನ್ನೂ, ಅವನ್ನು ಹೊಂದುವ ಸಾಧನಗಳನ್ನೂ ಸಂಪಾದಿಸಿ ಅದಕ್ಕೆ ವಿರುದ್ಧವಾಗಿರುವ ಅಸುರಸಂಪತ್ತಿಯವರ ಲಕ್ಷಣಗಳನ್ನು ತ್ಯಜಿಸಬೇಕೆಂಬ ದೃಷ್ಟಿಯಿಂದ ದೇವ-ಅಸುರಸಂಪತ್ತಿಯವರ ಲಕ್ಷಣಗಳನ್ನು ಕ್ರಮದಿಂದ ಹೇಳಬೇಕೆಂದು ಸೂಚೀಕಟಾಹನ್ಯಾಯಕ್ಕನುಸರಿಸಿ (ಮುಖ್ಯಾಮುಖ್ಯ) ದೈವೀಸಂಪತ್ತಿಯವರ ಲಕ್ಷಣಗಳನ್ನು ಮೊದಲು ನಿರೂಪಿಸಿದ್ದು:—

**श्रीभगवानुवाच ।**

**अभयं सत्त्वसंशुद्धिर्ज्ञानयोगव्यवस्थितिः ।**
**दानं दमश्च यज्ञश्च स्वाध्यायस्तप आर्जवम् ॥ १ ॥**
**अहिंसा सत्यमक्रोधस्त्यागः शांतिरपैशुनम् ।**
**दया भूतेष्वलोलुप्त्वं मार्दवं ह्रीरचापलम् ॥ २ ॥**
**तेजः क्षमा धृतिः शौचमद्रोहो नातिमानिता ।**
**भवंति संपदं दैवीमभिजातस्य भारत ॥ ३ ॥**

**ಅಂ**—**ಅಭಯಮ್**—ಅನ್ಯರಿಗೆ ಅಂಜದಿರುವದು, ಅಂಜಿಸದಿರುವದು, (ಈ ವಿಷಯಕ್ಕೆ ೧೨–೧೫ನೆಯ ಶ್ಲೋಕದಲ್ಲಿ ಹೇಳಿ ಇದೆ) **ಸತ್ತ್ವಸಂಶುದ್ಧಿಃ**—ಚಿತ್ತಪ್ರಸನ್ನವಾಗಿರುವದು; **ಜ್ಞಾನಯೋಗವ್ಯವಸ್ಥಿತಿಃ**—ಜ್ಞಾನೋಪಾಯತತ್ಪರತೆ, **ದಾನಮ್**—ದ್ರವ್ಯತ್ಯಾಗವು; **ಯಜ್ಞಃ**—ಜ್ಯೋತಿಷ್ಟೋಮಾದಿ ಯಜ್ಞಗಳು; ಅಥವಾ ದೇವಯಜ್ಞ; (ಈ ಬಗ್ಗೆ ೩–೧೩ನೆಯ ಶ್ಲೋಕದಲ್ಲಿ ಹೇಳಿದ ಪಿತೃಯಜ್ಞಗಳು) **ಸ್ವಾಧ್ಯಾಯ**—ವೇದಾಧ್ಯಯನವು; **ತಪ**—ಬ್ರಹ್ಮಚರ್ಯವು; **ಆರ್ಜವಮ್**—ಮನೋವಾಕ್ಕರ್ಮಗಳಲ್ಲಿ ಒಂದೇ ವಿಧವಾಗಿರುವದು, **ಅಹಿಂಸಾ**—ಅನ್ಯರ ಪ್ರಾಣ ಹಿಂಸಿಸದಿರೋಣ, **ಸತ್ಯಮ್**—ಇದ್ದಕ್ಕಿದ್ದಂತೆ ಮಾತನಾಡುವದು; **ಅಕ್ರೋಧ**—ಅನ್ಯರಿಗೆ ಪೀಡೆಯಾಗದಂತೆ ತಾನು ವಿಕಾರಗೊಳ್ಳದಿರೋಣ; **ತ್ಯಾಗ**.—ಔದಾರ್ಯ, **ಶಾಂತಿ**—ಪರಮಾತ್ಮನಲ್ಲಿ ಭಕ್ತಿ, **ಅಪೈಶುನಮ್**—ಪರರಿಗೆ ಹಿಂಸೆಮಾಡಿದ ದೋಷಗಳನ್ನು ಸ್ವಾಮಿಗೆ ಹೇಳದಿರೋಣ; **ದಯಾ**—ಪ್ರಾಣಿಗಳಿಗೆ ಹಿತ ಬಯಸುವಂಥ ಅಂತಃಕರಣದ್ದೊಂದು ವಿಶೇಷ ಧರ್ಮ; ಅಥವಾ ಪರದುಃಖವನ್ನು ಸಹಿಸದಿರೋಣ ಮತ್ತು ದುಃಖನಿವಾರಣಕ್ಕಾಗಿ ಯತ್ನಿಸುವದು; **ಅಲೋಲುಪ್ತ್ವಮ್** ವಿಷಯಗಳಲ್ಲಿ ಅನಾಸಕ್ತಿ, (ಈ ಬಗ್ಗೆ ೨–೫೯ನೆಯ ಶ್ಲೋಕದಲ್ಲಿ ಹೇಳಿ ಇದೆ) **ಮಾರ್ದವಮ್**—ತನ್ನನ್ನು ಹಿಂಸಿಸುವವರಿಗೆ ಮಿದುಮಾತುಗಳನ್ನಾಡುವದು ಮತ್ತು ಕ್ರೂರನಾಗದಿರುವದು, **ಹ್ರೀ**—ಕೆಟ್ಟ ಮಾತು-ಕೃತಿಗಳನ್ನು ಮಾಡಲು ನಾಚುವಿಕೆ, **ಅಚಾಪಲಮ್**—ಸ್ಥೈರ್ಯ; **ತೇಜ**—ಅನ್ಯರಿಗೆ ಸೋಲದಿರುವದು; **ಕ್ಷಮಾ**—ಕೋಪವಿಲ್ಲದ್ದರಿಂದ ತನ್ನ ಅಪಕಾರಿಗೆ ಕೆಡಕು ಮಾಡದಿರುವದು, **ಧೃತಿ**—ವಿಘ್ನಗಳಿಂದ ಹಿಮ್ಮೆಟ್ಟದಿರೋಣ, **ಶೌಚಮ್**—ಮೃತ್ತಿಕಾದಿಗಳಿಂದ ಬಾಹ್ಯಶುದ್ಧಿ ಮತ್ತು ಭಗವತ್ ಸ್ಮರಣೆಯಿಂದ ಅಂತಃಶುದ್ಧಿ, **ಅದ್ರೋಹ**—ಅನ್ಯರ ಜೀವನೋಪಾಯನಾಶಕ ಕರ್ಮ ಮಾಡದಿರುವದು; **ನಾತಿಮಾನಿತಾ**—ವಿದ್ಯೆ, ಕುಲ, ಧನ, ಇವುಗಳ ಅಹಂಕಾರವಿಲ್ಲದಿರುವದು. ಈ ೨೬ ಗುಣಗಳು ದೈವೀ ಸಂಪತ್ತಿಯುಳ್ಳವನಿಗೆ ಪ್ರಾಪ್ತವಾಗುವವು. ಆದುದರಿಂದ ಈ ಗುಣಗಳನ್ನು ಮೋಕ್ಷಾಭಿಲಾಷಿಯು ಅವಶ್ಯವಾಗಿ ಸಂಪಾದಿಸತಕ್ಕದ್ದು.

**ವಿಂ ಅಂ**—**ಅಭಯಮ್**—ಪರಿವಾರ ಮತ್ತು ಜನರಿಲ್ಲದ ಸ್ಥಳದಲ್ಲಿ ಒಬ್ಬನೇ ಬದುಕುವದೆಂತೆಂದು ಭೀತಿಯಿಲ್ಲದಿರುವದು; ಸ್ವಂತ ಶಾಸ್ತ್ರವನ್ನೇ ಅವಲಂಬಿಸಿ ಕರ್ಮಮಾಡುತ್ತಿದ್ದು, ತನಗೆ ಮುಂದಾಗುವ ಗತಿಯ ವಿಷಯದಲ್ಲಿ ನಿರ್ಭಯನೂ, ಸಂದೇಹರಹಿತನೂ, ಆಗಿ ಅನುಷ್ಠಾನ ಮಾಡುವದು, ಅಥವಾ ಮುಂದಾಗುವ ದುಃಖಭಯಗಳಿಂದ ಕುಂದದಿರುವದು; **ಜ್ಞಾನಯೋಗವ್ಯವಸ್ಥಿತಿಃ**- ಶಾಸ್ತ್ರ ಮತ್ತು ಗುರೂಪದೇಶದಿಂದ ಹುಟ್ಟಿದ ಜ್ಞಾನ, ಏಕಾಗ್ರಚಿತ್ತದಿಂದ ಮನನ ಧ್ಯಾನಗಳು ಪಕ್ವವಾಗಲು ಅವುಗಳ ಅನುಭವವೇ ಯೋಗ, ಇವೆರಡರಲ್ಲಿ ನಿಷ್ಠೆ; **ದಾನಮ್**—ನ್ಯಾಯದಿಂದ ಗಳಿಸಿದ ಹಣವನ್ನು ಯಥಾಶಕ್ತಿ ಯೋಗ್ಯರಿಗೆ ಕೊಡುವದು; ಇಲ್ಲಿ ದಾನ ಶಬ್ದದಿಂದ ಮುಖ್ಯದಾನವೆಂದು ತಿಳಿಯಬೇಕು. ಈ ಬಗ್ಗೆ ( ೧೭–೨೦ )ನೇ ಶ್ಲೋಕದಲ್ಲಿ ಹೇಳಲಾಗುವದು., **ತಪ**—ಕೃಚ್ಛ್ರಚಾಂದ್ರಾಯಣಾದಿ ವ್ರತಗಳಿಂದ ದೇಹಸವೆಯಿಸುವದು; **ಅಕ್ರೋಧಃ**—ಪರರು ಮಾಡಿದ ನಿಂದೆ, ಹೊಡೆ, ಬಡಿ, ಮುಂತಾದವುಗಳಿಂದ

ಹುಟ್ಟಿದ ಕೋಪವನ್ನು ವಿವೇಕದಿಂದ ಶಾಂತಗೊಳಿಸುವದು; **त्यागः**—ಜೀನತನ ಮಾಡದೆ ಅನ್ಯರಿಗೆ ದ್ರವ್ಯ ಕೊಡುವದು; ಅಥವಾ ಫಲಾಸಕ್ತಿಯನ್ನು ಬಿಡುವದು; ಅಥವಾ ತನಗೆ ವಿರೋಧವಿರುವದನ್ನು ಅನ್ಯರಿಂದ ಸ್ವೀಕರಿಸದಿರುವದು; **शांतिः**—ಮನೋನಿಗ್ರಹ ಮತ್ತು ಅದನ್ನು ಪರಮಾತ್ಮನಲ್ಲಿಡುವದು; **अपैशुनम्**—ಪರರ ದೋಷಗಳನ್ನು ಅನ್ಯರಿಗೆ ಬಿಚ್ಚಿ ಹೇಳದಿರೋಣ; **अचापलम्**—ತನಗೆ ಇಷ್ಟವಾದ ವಿಷಯವು ಸಮೀಪದಲ್ಲಿದ್ದರೂ, ವಿವೇಕದಿಂದ ಮನಸು ಆ ಬಗ್ಗೆ ವಿಕಾರ ಹೊಂದದಿರುವದು; ಅಥವಾ ನಿರರ್ಥಕ ಕೆಲಸ ಮಾಡದಿರೋಣ; **तेजः**—ಹೆಂಡರುಮಕ್ಕಳಿಗೆ ವಶನಾಗದಿರುವದು; ಈ ವಿಷಯಕ್ಕೆ ಭಾಗವತ (೧೦–೫೧,೫೨) ನೇ ಶ್ಲೋಕಗಳನ್ನು ನೋಡಿರಿ. ಅರ್ಜುನಾ, ನೀನು ದೊಡ್ಡ ಕುಲದಲ್ಲಿ ಹುಟ್ಟಿದ್ದರಿಂದ ದೇವಸ್ವಭಾವದವನು ಕಂಡಿಯಾ!

**೪—೫.** ಅಸುರ ಲಕ್ಷಣಗಳ ತ್ಯಾಗವು ಅವಶ್ಯವಾದ್ದರಿಂದ ಅವುಗಳನ್ನು ಹೇಳಿದ್ದು; ಮತ್ತು ದೇವ-ಅಸುರ ಸಂಪತ್ತಿಗಳ ಫಲಹೇಳುತ್ತ, ಅರ್ಜುನನ ಅಸುರಸ್ವಭಾವದ ಬಗ್ಗೆ ಬಂದ ಸಂದೇಹವನ್ನು ನಿವಾರಿಸಿದ್ದು; ಅಥವಾ ದೇವಸ್ವಭಾವದ ಸ್ವೀಕಾರ, ಅಸುರಸ್ವಭಾವದ ತ್ಯಾಗ, ಇವು ಅವಶ್ಯವೆಂದು ತೋರಿಸುತ್ತ ಅವುಗಳಿಗೆ ಶುಭಾಶುಭ ಫಲಗಳನ್ನು ಹೇಳಿದ್ದು. "ದೇವ ಮತ್ತು ಅಸುರಸ್ವಭಾವಗಳಿಂದಾಗುವ ಶುಭಾಶುಭ ಫಲಗಳನ್ನು ಕೇಳಿ, ನಾನು ಅಸುರ ಸ್ವಭಾವದವನಾದರೆ, ನನಗೆ ವಿಪತ್ತು ಪ್ರಾಪ್ತವಾಗುವದಲ್ಲ! ಹಾಗಾದರೆ ಮುಂದೇನು ಗತಿ" ಎಂದು ಬಹು ಚಿಂತೆಯಲ್ಲಿ ಮುಳುಗಿದ ಅರ್ಜುನನನ್ನು ಕಂಡು ಶ್ರೀಕೃಷ್ಣನು ಅದನ್ನು ನಿವಾರಿಸಿದ್ದು —

**दंभो दर्पोऽभिमानश्च क्रोधः पारुष्यमेव च ।**
**अज्ञानं चाभिजातस्य पार्थ संपदमासुरीम् ॥ ४ ॥**
**दैवी संपद्विमोक्षाय निबंधायासुरी मता ।**
**मा शुचः संपदं दैवीमभिजातोऽसि पांडव ॥ ५ ॥**

**ಅರ್ಥ**—**दंभः**—ತಾನು ಅಲ್ಪನೆಂದು ತಿಳಿದಾಗ್ಯೂ ದೊಡ್ಡಸ್ತಿಕೆಯನ್ನು ಹೇಳಿಕೊಳ್ಳುವದೇ ದಂಭ, **दर्पः**—ಹೆದರಿದ್ದರೂ, ಹೆದರದಂತೆ ತೋರಿಸುವದು; **अभिमानः**—ಪ್ರಮಾಣವಾದದ್ದನ್ನು ಮೀರುವದು; ಅಥವಾ ವಿದ್ಯೆ, ಧನ, ಜನ್ಮ ಇವುಗಳ ಹೆಗ್ಗಳಿಕೆ, **क्रोध**—ಪರಪೀಡೆಯಾಗುವಂಥ ಚಿತ್ತವಿಕಾರವು, **पारुष्यम्**—ನಿಷ್ಠುರಸ್ವಭಾವ; **च** ಶಬ್ದದಿಂದ ಕ್ಷಮೆ ಹಾಗೂ ಧೈರ್ಯದ ಅಭಾವವೆಂದು ಗ್ರಾಹ್ಯವು. ಹೀಗೆ ಆರು ದೋಷಗಳು ಅಸುರಸ್ವಭಾವದವರಿಗೆ ಉಂಟಾಗುವವು. "ಅರ್ಜುನಾ, ದೈವೀ ಸಂಪತ್ತು ಮೋಕ್ಷಕ್ಕೂ, ಅಸುರ ಸಂಪತ್ತು ಬಂಧನಕ್ಕೂ, ಕಾರಣಗಳೆಂದು ಹೇಳುವರು. ನೀನು ದೈವೀ ಸಂಪತ್ತುಳ್ಳ ಕುಲದಲ್ಲಿ ಹುಟ್ಟಿದ್ದರಿಂದ ಈ ವಿಷಯಕ್ಕೆ ನೀನು ಶೋಕಿಸಬೇಡ." ಇಲ್ಲಿ **विमोक्षाय** ಎಂದರೆ ವಿವಿಧ ಮೋಕ್ಷಗಳೆಂದು ಹೇಳಿದ್ದರಿಂದ ಮೋಕ್ಷದಲ್ಲಿ ಹಲವು ಬಗೆಗಳುಂಟೆಂದು ಸೂಚಿತವಾಗುವದು.

**ವಿಂ ಅಂ**—ಪ್ರಾಣಗಳನ್ನು ಹರಣಮಾಡುವದರಿಂದ ಅಸುರಸ್ವಭಾವವು ಬಹು ಬಾಧಕವು. ರಜ-ತಮಗುಣಗಳೂ, ಅವುಗಳ ವೃದ್ಧಿಯೂ, ಅಸುರಸ್ವಭಾವದವರಲ್ಲಿ ಆಗುವದು. ಅಸುರಸಂಪತ್ತು ಪರಮಾತ್ಮನ ಆಜ್ಞೆಮೀರುವಂಥದಾಗಿದೆ; ಆದುದರಿಂದ ದೇವಸ್ವಭಾವವನ್ನು ಬಯಸುವವನು ಅಸುರ ಸ್ವಭಾವದ **ಲಕ್ಷಣ**ಗಳನ್ನು ತ್ಯಜಿಸಬೇಕು. ಅರ್ಜುನಾ, ಈ **ಅಸುರಸ್ವಭಾವವು** ಎಲ್ಲ ಅನರ್ಥಗಳಿಗೆ ಕಾರಣ; ನೀನು ನಿನ್ನ ತಾಯಿಯ ಸಂಪತ್ತಿಯವನಾದ್ದರಿಂದ ಅದು ನಿನ್ನನ್ನು ಪೀಡಿಸುವದಿಲ್ಲ. ಮೇಲೆ ಹೇಳಿದ ದೇವಸ್ವಭಾವವು ಪ್ರಕೃತಿಬಂಧನವನ್ನು ಪೂರ್ಣವಾಗಿ ನಾಶಗೊಳಿಸಿ ಮೋಕ್ಷವನ್ನು ಕೈಗೆ ತಂದು ಕೊಡುವದು; ಅಂದರೆ, ದೇವಸ್ವಭಾವದವರು ಜ್ಞಾನ, ಭಕ್ತಿ, ವೈರಾಗ್ಯ, ಇವುಗಳದ್ವಾರಾ

ಪ್ರಕೃತಿಬಂಧನದಿಂದ ಬಿಡುಗಡೆ ಹೊಂದುವರು. ಅಸುರಸಂಪತ್ತು ಬಂಧನವನ್ನು ದೃಢಗೊಳಿಸುವದು; ಅಂದರೆ ಅಸುರಸ್ವಭಾವದವರು ರಾಗದ್ವೇಷಾದಿಗಳ ಮುಖಾಂತರವಾಗಿ ( ೨–೪೩ ) ನೆಯ ಶ್ಲೋಕದಲ್ಲಿ ಹೇಳಿದಂತೆ ವಿವಿಧ ಕರ್ಮಗಳನ್ನು ಮಾಡಿ ವಿವಿಧ ಜನ್ಮಗಳನ್ನು ಹೊಂದುತ್ತ ಸಂಸಾರಿಗಳಾಗುವರು; ಮತ್ತು ನಿಷಿದ್ಧ ಕರ್ಮಗಳನ್ನಾಚರಿಸಿ ನರಕವನ್ನೈದುವರು. ಇದನ್ನೇ ಹಿಂದೆ ( ೧೫–೧೬ ) ನೇ ಶ್ಲೋಕದಲ್ಲಿ ಹೇಳಿ ಇದೆ, ಅಥವಾ, ಈ ಸಂಪತ್ತಿಯುವರು ನಾಯಿ, ನರಿ, ಹಂದಿ, ಮುಂತಾದ ಹೀನ ಯೋನಿಗಳಲ್ಲಿ ಹುಟ್ಟಿ ಮುಂದೆ ಅಂಧಂತಮಸ್ಸಿಗೆ ಹೋಗುವರು. ಈ ಬಗ್ಗೆ ಹಿಂದೆ ( ೧೬–೨೦ ) ನೆಯ ಶ್ಲೋಕದಲ್ಲಿ ಹೇಳಿ ಇದೆ. ವೇದ ಶಾಸ್ತ್ರ ಪುರಾಣಗಳ ಮರ್ಮಬಲ್ಲ ಜ್ಞಾನಿಗಳ ಹಾಗೂ ನನ್ನ ಮತವು ಹೀಗೇ ಇರುವದು. ಅರ್ಜುನಾ, ಇದಕ್ಕಾಗಿಯೇ ಖೇದಪಡಲಾಗದು. ಏಕೆಂದರೆ, ದೈವೀ ಸಂಪತ್ತಿಯುಳ್ಳ ಕುಲದಲ್ಲಿ ನೀನು ಹುಟ್ಟಿರುವಿ. ಈ ಅರ್ಥವು **ಭಾರತ, ಪಾರ್ಥ** ಎಂಬ ಸಂಬೋಧನೆಗಳಿಂದ ಸೂಚಿತವಾಗಿದೆ. ನೀನು ವಂಶ, ಮಾತೃಪಿತೃಗುಣ, ಸಂಪತ್ತಿಗಳಿಂದ ಕೂಡಿದವನಾದ್ದರಿಂದ ದೇವಸ್ವಭಾವದವನೆಂಬುವದಕ್ಕೆ ಸಂದೇಹವಿಲ್ಲ. ಪ್ರಾಣಿಯು ವಾಡಿಕೆಯಾಗಿ, ಗುಣಹೀನನಾದಾಗ್ಯೂ ತನ್ನ ಕುಲ, ತಾಯಿ, ತಂದೆಗಳಂತಾಗುವದು ಕಂಡದ್ದೇ ಅದೆ.

೬. ಭೂತಸೃಷ್ಟಿಯು ಅನೇಕ ವಿಧವಾಗಿದ್ದರೂ, ದೇವ ಮತ್ತು ಅಸುರ ಇವೆರಡನ್ನೇ ಹೇಳಿದ ಕಾರಣವೇನೆಂದು ಕೇಳಿದರೆ, ಪ್ರಾಣಿಗಳ ಭೋಗಕ್ಕೆ ಮುಖ್ಯ ಕಾರಣಗಳಾದ ಸುಖದುಃಖಗಳನ್ನು ಇವು ಹೆಚ್ಚಿಗೆ ಕೊಡುವದರಿಂದ, ಇವೆರಡನ್ನೇ ಮುಖ್ಯವೆಂದಿಟ್ಟುಕೊಂಡು ಹೇಳಿದ್ದು. ದೈವ ಮತ್ತು ಅಸುರಗಳೆಂಬೆರಡೇ ಪ್ರಾಣಿಸೃಷ್ಟಿಗಳು ಅಥವಾ ಸ್ವಭಾವಗಳು. ಅವು ಎಂಥವೆಂದು ನೀನು ಕೇಳಬಹುದು; ಆದರೆ, ಅರ್ಜುನಾ ನಾನು ಈ ಮೊದಲೇ ದೈವಸ್ವಭಾವವನ್ನು ನಿನಗೆ ಸಾಕಲ್ಯವಾಗಿ ಹೇಳಿರುವೆನು, ಇನ್ನು, ಅಸುರಸ್ವಭಾವವನ್ನು ಕೇಳು.

**द्वौ भूतसर्गौ लोकेऽस्मिन्दैव आसुर एव च ।**
**दैवो विस्तरशः प्रोक्त आसुरं पार्थ मे शृणु ॥ ६ ॥**

**ಅಂ.** ಈ ಸಂಸಾರಮಂಡಲದಲ್ಲಿ ಪ್ರಾಣಿಗಳ ಸ್ವಭಾವ ಅಥವಾ ಸೃಷ್ಟಿಯು ದೈವ–ಆಸುರವೆಂದು ಎರಡು ಬಗೆಯಾಗಿದೆ. ಸೃಷ್ಟಿಸಲ್ಪಡುವದರಿಂದ ಇದಕ್ಕೆ ' ಸರ್ಗ ' ವೆಂಬ ಹೆಸರು. ಗಂಧರ್ವಯಕ್ಷಾದಿಸ್ವಭಾವಗಳೂ, ಮನುಷ್ಯಸ್ವಭಾವವೂ, ಅನ್ಯವರ್ಗದಲ್ಲಿ ಸೇರುವ ಅಭಿಪ್ರಾಯದಿಂದ ಇಲ್ಲಿ ಎರಡು ವಿಧಗಳನ್ನೇ ಮಾತ್ರ ಹೇಳಿ ಇದೆ. ಧರ್ಮಪ್ರಧಾನವಾದುದೇ ದೈವ, ಅಧರ್ಮಪ್ರಧಾನವಾದುದೇ ಅಸುರ, ಇನ್ನು, ದೇವ, ಅಸುರ, ಮನುಷ್ಯ, ಯಕ್ಷ, ರಾಕ್ಷಸ, ಗಂಧರ್ವ, ಈ ಮೊದಲಾದ ಜಾತಿಗಳಿಂದ ಅನೇಕ ವಿಧಗಳು ಆಗಬಹುದು; ಆದರೆ, ಇಲ್ಲಿ ಆ ಅಭಿಪ್ರಾಯವಿರದೆ. ಶಾಸ್ತ್ರಕ್ಕೆ ಮನುಷ್ಯನು ಅಧಿಕಾರಿಯಾದುದರಿಂದ, ಅದಕ್ಕೆ ಅಧಿಕಾರಿ ಅನಧಿಕಾರಿಗಳು ಯಾರೆಂಬುದೇ ಮುಖ್ಯ ಹೇತುವಾಗಿದೆ, ಆದ್ದರಿಂದ ಧರ್ಮಪ್ರಧಾನ ಸ್ವಭಾವದವರೇ ಅಧಿಕಾರಿಗಳು; ಅಧರ್ಮಸ್ವಭಾವದವರೇ ಅನಧಿಕಾರಿಗಳು ಎಂದು ಎರಡು ಬಗೆಯಾಗಿ ಹೇಳಿದ್ದು ಯೋಗ್ಯವೇ ಸರಿ. ಪಾರ್ಥಾ, ದೇವಸರ್ಗವು ವಿಸ್ತಾರವಾಗಿಯೂ ಅಸುರಸರ್ಗವು ಸಂಕ್ಷೇಪವಾಗಿಯೂ, ಹೇಳಲ್ಪಟ್ಟಿತು; ಅದು ಹೇಗೆ? ಸ್ವೀಕಾರ್ಯ ಉಪಾಯಗಳಲ್ಲಿ ಒಂದನ್ನು ಹೇಳದಿದ್ದರೆ, ಕಾರ್ಯವಿಲಂಬವಾಗುವದು; ತ್ಯಾಗಮಾಡತಕ್ಕವುಗಳಲ್ಲಿ ಒಂದನ್ನು ಬಿಟ್ಟರೆ, ಅನರ್ಥವಾಗುವದು. ಹೇಗಂದರೆ, ರೋಗಿಗೆ ಪಥ್ಯ ಹೇಳುವ ವಸ್ತುಗಳಲ್ಲಿ ಯಾವುದೊಂದನ್ನು ಬಿಟ್ಟರೆ ರೋಗ ಬೆಳೆಯುವದು; ಆದರೆ, ಬಿಡತಕ್ಕ ವಸ್ತುಗಳಲ್ಲಿ ಯಾವುದೊಂದನ್ನು ಹೇಳದಿದ್ದರೆ, ರೋಗವು ಬೆಳೆಯುವದೇ ನಿಶ್ಚಿತ, ಎಂಬುದು ಎಲ್ಲರಿಗೆ ಗೊತ್ತಿದ್ದ ಮಾತು. ಆದುದರಿಂದ ತ್ಯಾಗ ಮಾಡತಕ್ಕ ಅಸುರಸ್ವಭಾವದ ಲಕ್ಷಣಗಳನ್ನು ವಿಸ್ತಾರವಾಗಿ ಹೇಳಬೇಕಲ್ಲವೇ? ಎಂದು ಅರ್ಜುನನು ಪ್ರಶ್ನಮಾಡಲು

ಅಸುರಸ್ವಭಾವವನ್ನು ಹೇಳುವೆನೆಂದು ಶ್ರೀಕೃಷ್ಣನು ನುಡಿದದ್ದು. ನೀನು ಸೋದರತ್ತೆಯ ಮಗನಾದುದರಿಂದ ಮಗನಂತೆ ನನಗೆ ಪ್ರಿಯನೇ ಸರಿ. ಆದುದರಿಂದ ನೀನು ಅಸುರಸ್ವಭಾವದ ಲಕ್ಷಣಗಳನ್ನು ತ್ಯಜಿಸುವದೇ ವಿಹಿತವು.

೭. ಅಸುರಸ್ವಭಾವದ ಲಕ್ಷಣಗಳನ್ನು ಮುಂದಿನ ೧೩ ಶ್ಲೋಕಗಳಿಂದ ಹೇಳಿದ್ದು —

**प्रवृत्तिं च निवृत्तिं च जना न विदुरासुराः ।**
**न शौचं नापि चाचारो न सत्यं तेषु विद्यते ॥ ७ ॥**

**ಅಂ**—ಅಸುರಸ್ವಭಾವದವರು ವಿಹಿತವಾದುದರಲ್ಲಿ ಪ್ರವೃತ್ತಿಯನ್ನೂ, ನಿಷಿದ್ಧವಾದುದರಲ್ಲಿ ನಿವೃತ್ತಿಯನ್ನೂ, ಅರಿಯರು. ಅವರಲ್ಲಿ ಬಾಹ್ಯಾಂತರ ಶುದ್ಧಿಗಳಿರುವದಿಲ್ಲ. ಮನು–ಯಾಜ್ಞವಲ್ಕ್ಯ ಮೊದಲಾದವರು ವಿಧಿಸಿದ ನೈಮಿತ್ತಿಕ ಕರ್ಮಾನುಷ್ಠಾನವೆಂಬ ಆಚಾರವಿರುವದಿಲ್ಲ. ಅವರು ಪ್ರಿಯವೂ, ಹಿತವೂ, ಆದ ಸತ್ಯವನ್ನರಿಯರು. ಅಸುರಸ್ವಭಾವದವರು ಪ್ರವೃತ್ತಿಮಾರ್ಗವು ಸ್ವರ್ಗಾದಿಫಲಗಳಿಗೆ ಸಾಧನವೆಂತಲೂ, ನಿವೃತ್ತಿಯು ಮೋಕ್ಷಕ್ಕೆ ಸಾಧನವೆಂತಲೂ, ಅಥವಾ ಪ್ರವೃತ್ತಿಗೆ ವಿಧಿವಾಕ್ಯ ಕಾರಣವೆಂತಲೂ, ನಿವೃತ್ತಿಗೆ ನಿಷೇಧಕಾವಾಕ್ಯ ಕಾರಣವೆಂತಲೂ, ತಿಳಿಯುವದಿಲ್ಲ. ಹೀಗೆ शौच, आचार, सत्य, ಈ ಮೊದಲಾದ ಗುಣಗಳಿಂದ ರಹಿತವಾಗಿರುವದೇ ಅಸುರ–ಸ್ವಭಾವ ಲಕ್ಷಣವೆಂದು ತಿಳಿಯಬೇಕು. ಅಸುರರೂ, ರಾಕ್ಷಸರೂ, ಇಂಥ ಸ್ವಭಾವದವರೆ ಬುದು ಖ್ಯಾತವಿದೆ. ಈ ವಿಷಯಕ್ಕೆ 'ರಾಕ್ಷಸರ ಮನೆಗಳಲ್ಲಿ ಅಗ್ನಿಹೋತ್ರಾದಿಕಾರ್ಯಗಳಿಗೂ, ವೇದಗಳಿಗೂ, ಪ್ರವೇಶವಿಲ್ಲ. ದಯಾ, ಸತ್ಯ, ಶೌಚಗಳಿಗಂತೂ ಅಲ್ಲಿ ಆಸ್ಪದವೇ ಇಲ್ಲ" ಎಂಬೀ ಶಾಸ್ತ್ರವಚನವು ಪ್ರಮಾಣವಾಗಿದೆ.

೮.

**असत्यमप्रतिष्ठं ते जगदाहुरनीश्वरम् ।**
**अपरस्परसंभूतं किमन्यत्कामहैतुकम् ॥ ८ ॥**

**ಅಂ**—ಇಲ್ಲಿ **सत्य, प्रतिष्ठा** ಮತ್ತು **ईश्वर** ಶಬ್ದಗಳು ವಿಷ್ಣುಪರವಾಗಿವೆ. ಶ್ರೀವಿಷ್ಣುವು ಪ್ರತ್ಯಕ್ಷವಾಗಿ ತೋರುವ ಈ ಜಗದ ಹುಟ್ಟು ಕೇಡುಗಳಿಗೆ ಕಾರಣನು. ಹೀಗಿದ್ದರೂ, ಅಸುರಸ್ವಭಾವದವರು ವಿಷ್ಣುವು ಜಗಕ್ಕೆ ಕಾರಣನಲ್ಲವೆಂದು ಹೇಳುವರು. ಅದರಂತೆಯೇ, ಶ್ರೀವಿಷ್ಣುವು ಜಗತ್ತಿನ ಸ್ಥಿತಿಗೆ ಕಾರಣನಾದುದರಿಂದ 'ಪ್ರತಿಷ್ಠಾ' ಶಬ್ದವಾಚ್ಯನು; ಮತ್ತು ಅದಕ್ಕೆ ಸ್ವಾಮಿಯಾದುದರಿಂದ 'ಈಶ್ವರ' ಶಬ್ದವಾಚ್ಯನು. ಹೀಗೆ ವಸ್ತುಸ್ಥಿತಿಯಿದ್ದರೂ, ಅಸುರಸ್ವಭಾವದವರು ಶ್ರೀವಿಷ್ಣುವು ಈ ಜಗಕ್ಕೆ ಕಾರಣನಲ್ಲೆಂದೂ, ಸ್ವಾಮಿಯಲ್ಲವೆಂದೂ, ಹೇಳುವರು; ಅಂದರೆ, ಈ ಜಗಕ್ಕೆ ಸೃಷ್ಟ್ಯಾದಿ ೮ ವಿಧದ ಕಾರ್ಯಗಳನ್ನು ಮಾಡುವ ಕರ್ತನೇ ಇಲ್ಲೆಂದು ಅವರ ಮತ; ಅಥವಾ, ಜಗತ್ತು ಸತ್ಯವಲ್ಲ, ಮಿಥ್ಯೆ; ಆದುದರಿಂದಲೇ ಸಿಂಪೆಯು ಬೆಳ್ಳಿ ಎಂದೆನ್ನುವ ಭ್ರಾಂತಿ ಮೂಲಕ ಜ್ಞಾನವು ಯಥಾರ್ಥಜ್ಞಾನದಿಂದ ಬಾಧ್ಯವಾದಂತೆ, ಜಗತ್ತು ಸತ್ಯವೆಂಬ ಭ್ರಮಮೂಲಕ ಜ್ಞಾನವು ಮಿಥ್ಯೆ ಎಂಬ ಯಥಾರ್ಥಜ್ಞಾನದಿಂದ ಬಾಧ್ಯವಾದುದೆಂದು ಅಷ್ಟೇ ಅಲ್ಲದೆ, ಪ್ರೇರಕರಹಿತವಾದುದೆಂದೂ ಹೇಳುವರು. ಹಿಂದೆ (೩–೧೪) ನೆಯ ಶ್ಲೋಕದಲ್ಲಿ ಹೇಳಿದಂತೆ ಅಂದರೆ ಪರಮಾತ್ಮನಿಂದ ಪ್ರಕಟವಾದ ವೇದಗಳು ಬೋಧಿಸುವ ಆಯಾ ವರ್ಣಾಶ್ರಮಗಳಿಗೆ ಉಚಿತವಾದ ಕರ್ಮಗಳೇ ಜಗತ್ತಿನ ಪ್ರವೃತ್ತಿಗೆ ಕಾರಣವೆಂದು ಜಗತ್ತಿಗೆ ಪರಸ್ಪರ ಉತ್ಪತ್ತಿ ಇರದ್ದರಿಂದ ಅದು ಸದಸದ್ವಿಲಕ್ಷಣವಾಗಿದೆ. ಹಾಗಾದರೆ, ಅದು ಹೇಗೆ ಉಂಟಾಗುವದೆಂದು ಕೇಳಿದರೆ, ಕಾಮಮೂಲಕ ಸ್ತ್ರೀಪುರುಷರ ಸಹವಾಸವೇ ಜಗತ್ತಿನ ಹುಟ್ಟಿಗೆ ಕಾರಣ

ವೆನ್ನುವರು. ಅಸುರಸ್ವಭಾವದವರು ಹೇಳುವದೇನೆಂದರೆ, ಈ ಜಗತ್ತು ಶುಕ್ತಿ-ರಜತದಂತೆ ಮಿಥ್ಯೆ ಆಗಿದೆ. ಶುಕ್ತಿ-ರಜತದಂತೆ ಅದಕ್ಕೆ ಸ್ಥಿತಿಯಿಲ್ಲ. ಶುಕ್ತಿ-ರಜತ ಜ್ಞಾನವು ರಜತಜ್ಞಾನದಿಂದ ಬಾಧ್ಯ ವಾದಂತೆ, ಬ್ರಹ್ಮಜ್ಞಾನದಿಂದ ಬಾಧ್ಯವು. ಹೀಗೆ ಜಗತ್ತು ಜ್ಞಾನಬಾಧ್ಯವೆಂದರೆ ಮಿಥ್ಯೆಯಾದುದರಿಂದ, ಅದಕ್ಕೆ ಪ್ರೇರಕನಾದ ಈಶ್ವರನಿಲ್ಲ. ಜಗತ್ತು ಸತ್ಯವಾದರೆ, ಅದಕ್ಕೆ ನಿಯಾಮಕನಿರಬಹುದು; ಅಸತ್ಯ ವಾದುದರಿಂದ ಈಶ್ವರನಿಲ್ಲ. ಹಾಗಾದರೆ, ಯಾವನಿಂದ ಅದರ ಉತ್ಪತ್ತಿಯೋ, ಅವನೇ ಈಶ್ವರನೆಂದು ಹೇಳಿದರೆ, ಒಬ್ಬನಿಂದ ಒಬ್ಬನು ಹುಟ್ಟುವಂತೆ ಜಗತ್ತಿಗೆ ಪರಸ್ಪರ ಉತ್ಪತ್ತಿ ಇಲ್ಲ. ಅದು ಸತ್ಯವಾಗಿ ದ್ದರೆ ಒಬ್ಬನಿಂದ ಹುಟ್ಟಬಹುದು, ಅಸತ್ಯವಾದ ಶುಕ್ತಿ-ರಜತಕ್ಕೆ ಒಂದರಿಂದಲೇ ಉತ್ಪತ್ತಿ ಇಲ್ಲ; ಅಂದ ಮೇಲೆ ಜಗತ್ತು ಕಣ್ಣಿಗೆ ಕಾಣಿಸುವ ಕಾರಣವೇನೆಂದು ಕೇಳಿದರೆ, ಕಾಮ ಮೂಲಕ ಅವಿದ್ಯೆ ಅಥವಾ ಅವಿದ್ಯೆಯೆಂದರೆ ಮಾಯಾಕಾರಣವಾದ ಜಗತ್ತು ಮಾಯೆಯಿಂದಲೇ ತೋರುವದು. ಹಾಗಾದರೆ, ಸತ್ ಅಲ್ಲೆಂದರೆ ಜಗತ್ತು ಅಸತ್ತಾಗಬಹುದು, ಅಸತ್ತೆಂದರೆ, ಕಣ್ಣಿಗೆ ತೋರಲಾರದು; ಅಸತ್ತಲ್ಲೆಂದರೆ, ಸತ್ ಆಗಬಹುದು, ಸತ್ ಎಂದು ಹೇಳಿದರೆ, ಅದು ಬಾಧ್ಯವಾಗದು; ಆದರೆ, ಈ ಜಗತ್ತು ಕಣ್ಣಿಗೆ ತೋರುವದಲ್ಲದೆ, ಜ್ಞಾನಬಾಧ್ಯವೂ ಆಗಿದೆ. ಇದರಿಂದ ಅದು ಸತ್ತೂ ಅಲ್ಲ, ಅಸತ್ತೂ ಅಲ್ಲೆಂದು ಹೇಳಿದಂತಾಯಿತು; ಅಂದಬಳಿಕ ಅದು ಹೇಗಿರುವದೆಂದು ಕೇಳಿದರೆ, ಅನಿರ್ವಚನೀಯವೆಂದು ಹೇಳು ವರು. ಆದುದರಿಂದಲೇ ಅದಕ್ಕೆ ಪ್ರತೀತಿಯೂ, ಜ್ಞಾನಬಾಧ್ಯತ್ವವೂ, ಸಲ್ಲುವವೆಂದು ಹೇಳುವರು.

**एतां दृष्टिमवष्टभ्य नष्टात्मानोऽल्पबुद्धयः ।**
**प्रभवंत्युग्रकर्माणः क्षयाय जगतोऽहिताः ॥ ९ ॥**

**ಅಂ**—ಇಂಥ ಮಿಥ್ಯಾಜ್ಞಾನವನ್ನಾಶ್ರಯಿಸಿ, ದುಷ್ಟಾತ್ಮರೂ, ಅಲ್ಪಜ್ಞಾನಿಗಳೂ, ಘೋರ ಕರ್ಮಿಗಳೂ, ಜಗದ ಹಗೆಗಳೂ, ಆದ ಅಸುರಸ್ವಭಾವದವರು ಕಲಿಯುಗದಲ್ಲಿ ನಾಶಕ್ಕಾಗಿ ಹುಟ್ಟುವರು

**ವಿಂ ಅಂ**—ಅಸುರಸ್ವಭಾವದವರು ಚಾರ್ವಾಕಾದಿಮತಗಳಿಗೆ ಮನಸೋತು ಆತ್ಮಘಾತುಕ ರಾಗಿರುವರು. ಇಂಥ ವಿಪರೀತಜ್ಞಾನದಿಂದಲೇ ಬುದ್ಧಿಗೆಟ್ಟು ಅವರು ನರಕಾದಿಗಳನ್ನು ಹೊಂದು ವರು. ಏಕೆಂದರೆ, ಆತ್ಮವು ದೇಹದಿಂದ ಭಿನ್ನವೆಂದವರು ತಿಳಿಯುವದಿಲ್ಲ. ರಾಗದ್ವೇಷಾದಿ ದೋಷ ಗಳಿಂದ ಅವರ ಮನಸ್ಸು ಕೆಟ್ಟಿರುವದೇ ಇಂತಹ ವಿಪರೀತ ಜ್ಞಾನಕ್ಕೆ ಕಾರಣವು. ಗಂಧ, ಮಾಲ್ಯ, ಸ್ತ್ರೀ, ಮುಂತಾದ ಭೋಗಗಳಲ್ಲಿಯೇ ಇಂಥವರ ಮನಸ್ಸು ಯಾವಾಗಲೂ ಮುಳುಮುಳುಗೇಳುತ್ತಿರುವದ ರಿಂದ, ಮಲಮೂತ್ರ, ರಕ್ತ, ಮಾಂಸ, ಎಲುಬುಗಳಿಂದಾದ 'ಈ ದೇಹವೇ ನಾನು, ಮತ್ತು ಅದೇ ನನ್ನ ಭೋಗ್ಯವಸ್ತು' ಎಂದು ಭಾವಿಸುವರು. ಧರ್ಮಶಾಸ್ತ್ರವಿರುದ್ಧವಾದ ಕೇವಲ ದೇಹಪೋಷಣೆ ಯನ್ನೇ ಗುರಿಯಾಗಿಟ್ಟುಕೊಂಡವರಾಗಿ ಅವರು ಪರಹಿಂಸೆಯ ಕಾರ್ಯಕ್ಕೆ ಮನಸ್ಸು ಮಾರಿಕೊಂಡಿರು ವರು ರುದ್ರನಂತೆ ಉಗ್ರರಾಗಿ ಪ್ರಾಣಿಸಂಹಾರಕ ಕರ್ಮಗಳನ್ನು ಎಗ್ಗಿಲ್ಲದೆ ನಡಿಸುವರು. ಜಗದ ಹಗೆ ಗಳಾಗಿ (೩-೧೪)ನೆಯ ಶ್ಲೋಕದಲ್ಲಿ ಉಕ್ತವಾದಂತೆ, ಪ್ರಪಂಚಸ್ಥಿತಿಗೆ ಕಾರಣವಾದ ವೇದ, ಮತ್ತು ಅದರಲ್ಲಿ ಹೇಳಿದ ಧರ್ಮಗಳನ್ನು ಸದೆಬಡಿದು ಜಗದ ನಾಶಕ್ಕೆ ಉದ್ಯುಕ್ತರಾಗಿರುವರು. ಇಂಥವರು ಹಿಂಸ್ರಪ್ರಾಣಿಗಳಂತೆ ಕಲಿಯುಗದಲ್ಲಿ ಹುಟ್ಟಿ, ಮಿಥ್ಯಾ-ಅರ್ಥಗಳನ್ನು ಪ್ರತಿಪಾದಿಸುವ ಕುಶಾಸ್ತ್ರ ಗಳನ್ನು ರಚಿಸಿ, ಸಜ್ಜನರ ಬುದ್ಧಿಗೆಡಿಸಿ, ಜಗವನ್ನು ಹಾಳುಗೊಳಿಸುವರು. ಆದುದರಿಂದ ಆಸುರ ಸಂಪತ್ತಿಯನ್ನು ಅವಶ್ಯವಾಗಿ ತ್ಯಜಿಸತಕ್ಕದ್ದು.

೧೦.

**कामामाश्रित्य दुष्पूरं दम्भमानमदान्विताः ।**
**मोहाद्गृहीत्वासद्ग्राहान्प्रवर्तन्तेऽशुचिव्रताः ॥ १० ॥**

**ಅಂ**—ತಣಿಸಲಶಕ್ಯವಾದ ಕಾಮವನ್ನಾಶ್ರಯಿಸಿ, ದಂಭ, ಮಾನ, ಮದಗಳಿಂದ ತುಂಬಿದವರಾಗಿ, ಮಿಥ್ಯಾಜ್ಞಾನಸ್ವರೂಪಿಗಳಾದ್ದರಿಂದ ಕುಶಾಸ್ತ್ರಾಭ್ಯಾಸದಿಂದ ಉತ್ಪನ್ನವಾದ ವಿಪರೀತನಿಶ್ಚಯದಿಂದ ಅವರು ಕ್ಷುದ್ರಭೋಗಗಳಲ್ಲಿ ಮೈಮರೆಯುವರು.

**ವಿಂ ಅಂ**—ದಂಭ, ಮಾನ, ಮದಗಳಿಂದ ಉಬ್ಬಿದವರಾದ ಅಸುರರು ಶಾಂತಪಡಿಸಲಸಾಧ್ಯವಾದ ಕಾಮವನ್ನಾಶ್ರಯಿಸಿ, ನೀಚಕರ್ಮ ಮತ್ತು ಫಲಗಳನ್ನು ಹೇಳುವ ಶಾಸ್ತ್ರಾಭ್ಯಾಸಗಳಿಂದ ವಿಪರೀತನಿಶ್ಚಯವುಳ್ಳವರಾಗಿ ಅಂಥ ಮೋಹದಿಂದ ಪರಬ್ರಹ್ಮವಸ್ತುವೇ ಸತ್ಯವು, ಮಿಕ್ಕದ್ದೆಲ್ಲ ಅಸತ್ಯವೆಂದು ತಾವಷ್ಟೇ ತಿಳಿಯುವದಲ್ಲದೆ, ಪರರಿಗೂ ಹಾಗೆ ಬೋಧಿಸುವರು. ಕಾಮ್ಯಕರ್ಮ ಪ್ರತಿಪಾದಿಸುವ ಮಂತ್ರಗಳನ್ನೇ ಮಾತ್ರ ತಿಳಿದುಕೊಂಡು, ಅನ್ಯಾಯದಿಂದ ಕಾಮ್ಯಸಾಧನಗಳನ್ನು ಸಂಪಾದಿಸಿ, ಮದ್ಯಮಾಂಸಸೇವನ, ಸ್ಮಶಾನವಾಸ, ಇವೇ ಮೊದಲಾದ ಅಶುಭಾಚಾರಗಳನ್ನು ನಡಿಸುವರು. ಈ ಸಾಧನಗಳಿಂದ ದ್ರವ್ಯಸಂಪಾದಿಸಿ, ಸ್ತ್ರೀವಶೀಕರಣ ಮುಂತಾದ ಹಾರೈಕೆಗಳಿಗೆ ಒಳಪಟ್ಟು ಕ್ಷುದ್ರದೇವತೆಗಳ ಆರಾಧನೆಗೆ ಈಡಾಗುವರು.

೧೧

**चिन्तामपरिमेयां च प्रलयान्तामुपाश्रिताः ।**
**कामोपभोगपरमा एतावदिति निश्चिताः ॥ ११ ॥**

**ಅಂ**—ಅಸುರರು ಮರಣಾಂತ್ಯದ ವರೆಗೆ ಎಣಿಸಲಿಕ್ಕೆ ಬಾರದ ಅಸಂಖ್ಯ ಚಿಂತೆಗಳಲ್ಲಿ ತೊಳಲುತ್ತಿರುವರು. ವಿಷಯಾಸಕ್ತಿಯೇ ಅವರ ಹೆಚ್ಚಿನ ಸುಖವೇ ಹೊರ್ತು ಪರಲೋಕಫಲವೇ ಇಲ್ಲೆಂದು ಅವರು ನಿಶ್ಚಯವುಳ್ಳವರು.

**ವಿಂ ಅಂ**— ಅಸುರರು ಯಾವಾಗಲೂ ಚಿಂತಾಮಗ್ನರು. ಅವರ ಚಿಂತೆಯು ನಿರರ್ಥಕವು. ' ಅವನು ಹಾಗಿರುವನು, ಅವಳು ಹೀಗಿರುವಳು ' ಎಂದು ದೋಷಗಳನ್ನೆಣಿಸುವದೇ ಅವರ ಚಿಂತೆಯು. ಅವರ ಈ ಚಿಂತೆಯಳಿಯುವದು ಅಸಾಧ್ಯ. ಮರಣಾಂತ್ಯದವರೆಗೂ ಇವರ ಚಿಂತೆ ಮುಗಿಯುವದಿಲ್ಲ. ವಿಷಯಭೋಗವೇ ಹುಟ್ಟಿದ್ದಕ್ಕೆ ಸಾರ್ಥಕವೆಂದು ತಿಳಿದು ಅದರಲ್ಲಿಯೇ ಮಗ್ನರಾಗಿರುವರು. ವಿಷಯಭೋಗವೇ ಪರಮಪುರುಷಾರ್ಥವು. ಅದನ್ನುಳಿದು ಬೇರೆ ಫಲವೇ ಇಲ್ಲವೆಂದು ನಿಶ್ಚಯವುಳ್ಳವರು. ಈ ಬಗ್ಗೆ ಹಿಂದೆ ( ೨—೪೨,೪೩ ) ಶ್ಲೋಕಗಳಲ್ಲಿ ಹೇಳಿ ಇದೆ.

೧೨.

**आशापाशशतैर्बद्धाः कामक्रोधपरायणाः ।**
**ईहन्ते कामभोगार्थमन्यायेनार्थसंचयान् ॥ १२ ॥**

**ಅಂ**—ದುರಾಸೆಗಳೆಂಬ ನೂರಾರು ಹಗ್ಗಗಳಿಂದ ಕಟ್ಟಲ್ಪಟ್ಟವರಾಗಿ, ಕಾಮಕ್ರೋಧಗಳನ್ನೇ ಆಶ್ರಯಿಸಿ, ಕಾಮ್ಯವಿಷಯಗಳ ಅನುಭವಕ್ಕಾಗಿ ಅನ್ಯಾಯ, ಕಳವು ಮುಂತಾದವುಗಳಿಂದ ವಿಪುಲ ದ್ರವ್ಯವು ತಮಗೆ ದೊರೆಯಬೇಕೆಂದು ಇಚ್ಛಿಸುವರು.

ವಿಂ ಅಂ— ಆಸೆಯೆಂಬುದು ಬಂಧನ ಆಕರ್ಷಣಗಳಿಗೆ ಕಾರಣವಾಗುವ ಹಗ್ಗದಂತಿದೆ. ಅಸುರರು ಇಂತಹ ದುರಾಸೆಗಳಿಂದ ಬದ್ಧರಾಗಿ ಅವುಗಳಿಂದ ಎಳೆಯಲ್ಪಟ್ಟು, ಹಿಂದೆ ( ೨–೧೨ ) ನೆಯ ಶ್ಲೋಕದಲ್ಲಿ ಹೇಳಿದಂತೆ, ವಿಷಯುಗಳ ಧ್ಯಾನದಿಂದ ಅವರ ಕಾಮವು ಬೆಳೆದು ಅದರಿಂದ ಕೋಪವು ಹುಟ್ಟುವದು; ಹೀಗೆ ಕಾಮಕ್ರೋಧಗಳಿಂದ ಯುಕ್ತರಾಗಿ, ವಿಷಯಾನುಭವಕ್ಕಾಗಿ ದುರ್ಮಾರ್ಗಗಳಿಂದ ಸಂಪತ್ತನ್ನು ದೊರಕಿಸಲು ಯತ್ನಿಸುವರು.

೧೩. ಅಸುರರು ಮಾಡುವ ಚಿಂತೆಯ ವಿಧವನ್ನು ಮುಂದಿನ ಮೂರು ಶ್ಲೋಕಗಳಿಂದ ವರ್ಣಿಸಿದ್ದು:—

इदमद्य मया लब्धमिमं प्राप्स्ये मनोरथम् ।
इदमस्तीदमपि मे भविष्यति पुनर्धनम् ॥ १३ ॥

ಅಂ—ಈ ಮನೆಮಾರು, ಭೂಮಿ, ಆಸ್ತಿ, ದನಕರ, ಇವೆಲ್ಲ ಅನ್ಯರ ನೆರವಿಲ್ಲದೆ ಈ ಹೊತ್ತು ದೊರೆತಿರುವವು; ನಾನು ಇಂತಿಂಥ ಮನೋರಥಗಳನ್ನು ಸಾಧಿಸಿರುವೆ; ಈ ಸಂಪತ್ತೆಲ್ಲವು ನನ್ನದು; ನಾಳೆ ಬೇರೊಂದು ಆಸ್ತಿಯು ನನ್ನ ಕೈಗೆ ಬರುವದು. ಇಲ್ಲಿ प्राप्स्ये ಎಂಬ ಆತ್ಮನೇಪದ ಪ್ರಯೋಗವಿರುವದರಿಂದ ಎಲ್ಲ ಭೋಗಗಳು ತನಗಾಗಿಯೇ ಹೊರ್ತು ಅನ್ಯರಿಗಲ್ಲವೆಂದು ಸೂಚಿತವಾಗುವದು.

೧೪.

असौ मया हतः शत्रुर्हनिष्ये चापरानपि ।
ईश्वरोऽहमहं भोगी सिद्धोऽहं बलवान्सुखी ॥ १४ ॥

ಅಂ—ಈ ಶತ್ರುನನ್ನು ನಾನು ಕೊಂದೆ; ಅನ್ಯರನ್ನು ಒಕ್ಕಲಿಕ್ಕುವೆ, ನಾನೇ ಪರಮೇಶ್ವರನು; ಐಹಿಕಪಾರತ್ರಿಕ ಭೋಗಸಂಪನ್ನನು, ಕೃತಕೃತ್ಯನು; ಅಥವಾ ಮನೆಮಾರು, ಮಕ್ಕಳು, ಧನಧಾನ್ಯ ಸಂಪನ್ನನು, ಆದುದರಿಂದ ನಾನು ಸುಖಿಯು.

೧೫.

आढ्योऽभिजनवानस्मि
कोन्योऽस्ति सदृशो मया ।
यक्ष्ये दास्यामि मोदिष्य
इत्यज्ञानविमोहिताः ॥ १५ ॥

ಅಂ— ಸಿರಿವಂತನು ನಾನು, ಉತ್ತಮ ಕುಲದಲ್ಲಿ ಹುಟ್ಟಿದವನು; ನನ್ನ ಸರಿಗಟ್ಟುವರು ಯಾರು? ಪ್ರತಿಷ್ಠೆ, ಧನಲಾಭ, ಉಪಜೀವನಕ್ಕಾಗಿ ಯಾಗಾದಿಗಳನ್ನು ಮಾಡುವೆ. ಸ್ತುತಿಪಾಠಕ, ನಟ—ವಿಟ ಗಾಯಕರಿಗೆ ದ್ರವ್ಯ, ಅನ್ನದಾನಾದಿಗಳನ್ನು ಕೊಟ್ಟು ಕೊಡಗೈ ಧೊರೆ ಎನಿಸುವೆ. ನಿತ್ಯದಲ್ಲಿ ನೃತ್ಯ ಗಾಯನಾದಿಗಳಲ್ಲಿ ಓಲಾಡುವೆ. "ಪರಮಾತ್ಮನೇ ಎಲ್ಲಕ್ಕೂ ಕರ್ತನು, ಪ್ರೇರಕನು, ಅಲ್ಲದೆ ನಾನು ಸ್ವತಂತ್ರನಲ್ಲ" ಎಂಬ ವಿವೇಕವಿಲ್ಲದ ಮೂಲಕ ಆತನ ಅನುಗ್ರಹ ಬಯಸದೆ, ಎಲ್ಲವೂ ತಮ್ಮಿಂದಲೇ ಶಕ್ಯವು, ತಾವೇ ಎಲ್ಲವನ್ನು ಮಾಡುವರು; ಅಂದಮೇಲೆ ಪರಮಾತ್ಮನ ಕಾರಣವೇನೆಂಬ ಮಿಥ್ಯಾಜ್ಞಾನದಲ್ಲಿ ಸಿಲುಕಿರುವರು.

೧೬. ಈ ಬಗೆಯಾಗಿ ಅಸುರರು ಮಾಡುವ ಚಿಂತೆಯ ವಿಧವನ್ನು ಬಣ್ಣಿಸಿ, ಅವರಿಗೆ ದೊರೆಯುವ ಫಲವನ್ನು ಕುರಿತು ವಿಸ್ತರಿಸಿದ್ದು —

अनेकचित्तविभ्रान्ता मोहजालसमावृताः ।
प्रसक्ताः कामभोगेषु पतन्ति नरकेऽशुचौ ॥ १६ ॥

ಅಂ—ಹಲವು ಬಗೆಯ ಚಿಂತೆಗಳಲ್ಲಿ ಮುಳುಗಿ ಹೊಯ್ದಾಡುವವರೂ, ವಿಶೇಷ ಭ್ರಾಂತಿಯುಳ್ಳವರೂ, ಪುತ್ರ–ಮಿತ್ರ, ಕಲತ್ರ ಮೊದಲಾದ ವಿಷಯಗಳ ಮೋಹವೆಂಬ ಜಾಲಕ್ಕೆ ಸಿಲುಕಿ, ಭೋಗಗಳಲ್ಲಿ ಅತ್ಯಾಸಕ್ತರಾಗಿ, ಕೊನೆಗೆ ಅಪವಿತ್ರವಾದ ನರಕದಲ್ಲಿ ಬೀಳುವರು

ವಿಂ ಅಂ— ಚಿಂತೆಗಳು ಅನೇಕ ವಿಧವಾದುದರಿಂದ ಇಲ್ಲಿ ಅಂತಃಕರಣದ ಅನೇಕ ವೃತ್ತಿಗಳೆಂದು ಹೇಳಿ ಇದೆ. ಹೀಗೆ ಅಸುರರ ಅಂತಃಕರಣವು ಅನೇಕ ವಿಷಯಗಳ ಚಿಂತೆಯಲ್ಲಿ ಮಗ್ನವಾದುದರಿಂದ, ಮಿಥ್ಯಾಜ್ಞಾನವುಳ್ಳವರಾಗುವರು; ಏಕೆಂದರೆ, ಮೋಹವೇ ಅಜ್ಞಾನವು. ಅದರ ಜಾಲದಿಂದ ಆವರಿಸಲ್ಪಟ್ಟದ್ದರಿಂದ ಸದಸದ್ವಿವೇಕಜ್ಞಾನಹೀನರು. ವಿಶೇಷಾಕಾರದ ಭ್ರಾಂತಿಯೇ ವಿಪರೀತಜ್ಞಾನವು ಅದರಿಂದ ಮುಸುಕಲ್ಪಟ್ಟು ವಿಷಯಗಳಲ್ಲಿ ಅತ್ಯಾಸಕ್ತಿಗೊಳ್ಳುವರು. ಹಿಂದೆ (೧೬–೭) ನೇ ಶ್ಲೋಕದಲ್ಲಿ ಹೇಳಿದ ಲಕ್ಷಣವುಳ್ಳ ವಿಣ್ಮೂತ್ರ, ರಕ್ತ, ಮಾಂಸ, ಕೀವು ಶ್ಲೇಷ್ಮಾದಿ ಪರಮ ಅಪವಿತ್ರ ವಸ್ತುಗಳಿಂದ ಪೂರ್ಣವಾದ ವೈತರಣ್ಯಾದಿ ನರಕಗಳಲ್ಲಿ ಬೀಳುವರು. ಈ ಬಗ್ಗೆ (೨–೬೩) ನೇ ಶ್ಲೋಕದಲ್ಲಿ ಹೇಳಲಾಗಿದೆ.

೧೭. ಇನ್ನು, ಯಾಗಾದಿ ಕರ್ಮಗಳನ್ನಾಚರಿಸುವ ಅಸುರರಿಗೆ ನರಕಫಲಪ್ರಾಪ್ತಿ ಹೇಳಿದ್ದು ಯೋಗ್ಯವೇ ಎಂದು ಕೇಳಿದ್ದಕ್ಕೆ ಸಮಾಧಾನ ಹೇಳಿದ್ದು :—

आत्मसंभाविताः स्तब्धा धनमानमदान्विताः ।
यजन्ते नाम यज्ञैस्ते दम्भेनाविधिपूर्वकम् ॥ १७ ॥

ಅಂ—ತಮ್ಮಷ್ಟಕ್ಕೆ ತಾವೇ ಪೂಜ್ಯರೆಂದು ತಿಳಿಯುವವರು, ಆದುದರಿಂದಲೇ ದ್ರವ್ಯನಿಮಿತ್ತ ಸೊಕ್ಕು–ಸೆಡವುಗಳಿಂದ ಉಬ್ಬಿದವರಾಗಿ, ಅವರು ವಿಧಿಪೂರ್ವಕವಲ್ಲದ ಕೇವಲ ಆತ್ಮಪ್ರತಿಷ್ಠೆಯ ತೋರಿಕೆಗಾಗಿ ಜ್ಯೋತಿಷ್ಟೋಮಾದಿ ಯಜ್ಞಗಳನ್ನಾಚರಿಸುವರೇ ಹೊರ್ತು ಕೃತಾರ್ಥರಾಗುವ ಬುದ್ಧಿಯಿಂದಲ್ಲ. ಅಂತೆಯೇ ಅವರಿಗೆ ನರಕಫಲದ ಪ್ರಾಪ್ತಿಯೆಂದು ಹೇಳಿದ್ದು ಯೋಗ್ಯವೇ.

ವಿಂ ಅಂ—ಅಸುರರು ತಮ್ಮನ್ನು ತಾವೇ ಹೊಗಳಿಕೊಳ್ಳುವರಲ್ಲದೆ ಅನ್ಯರಿಂದ ಪೂಜ್ಯರಲ್ಲ. ಆದುದರಿಂದಲೇ ವಿನಯಗಂಧರಹಿತರು. ಏಕೆಂದರೆ, ಅವರು ಸೊಕ್ಕುಸೆಡವಿನವರು; ಇಂಥವರು ಮಾಡಿದ ಯಜ್ಞಗಳು 'ಅಸುರ' ಎಂದೆನಿಸುವವು. ಈ ಯಜ್ಞಗಳನ್ನು ಅವರು ತಮ್ಮ ದೊಡ್ಡಸ್ತಿಕೆಗಾಗಿ ಮಾಡುವರು. ಭಕ್ತಿಯಿಂದ ಅಂತಃಕರಣ ಶುದ್ಧಿಯಾಗಿ ಅದರಿಂದಾಗುವ ಜ್ಞಾನದಿಂದ ಮೋಕ್ಷ ಲಾಭವಾಗಬೇಕೆಂದಲ್ಲ. ಇಂಥವರ ಯಜ್ಞಗಳಲ್ಲಿ ಮಂತ್ರ–ತಂತ್ರವಿಧಿಗಳಿಲ್ಲದ್ದರಿಂದ ಚಿಕ್ಕಮಕ್ಕಳಾಡುವ ಗೊಂಬೆಯ ಆಟಗಳೇ ಸೈ. ಹೆಸರಿಗೆ ಮಾತ್ರ ಅವು ಯಜ್ಞಗಳು, ನಿಜವಾದ ಯಜ್ಞಗಳಲ್ಲ. ನಿಜವಾದ ಯಜ್ಞಗಳಲ್ಲಿಯ ದೀಕ್ಷಿತ, ಸೋಮಯಾಜಿ, ಮುಂತಾದ ಅಧಿಕಾರಗಳ ಹೆಸರಿನ ಪ್ರಾಪ್ತಿಗಾಗಿಯೇ ಆ ಯಜ್ಞಗಳು; ಅಂತಃಕರಣ ಶುದ್ಧಿಯಿಂದ ಮೋಕ್ಷಪ್ರಾಪ್ತಿಗಾಗಿ ಅಲ್ಲ. ಆದ್ದರಿಂದ ಅವರು ಯಜ್ಞಾದಿಗಳನ್ನು ಮಾಡಿದರೂ, ಅವರಿಗೆ ಸದ್ಗತಿಯಾಗದೆ ನರಕವೇ ಪ್ರಾಪ್ತವಾಗುವದು.

೧೮. ಸಕಲ ಕರ್ಮಗಳನ್ನು ಮಾಡಿಸುವವನೂ, ಸರ್ವರಿಗೂ ಅಂತರ್ನಿಯಾಮಕನೂ. ಆದ ನಿನ್ನನ್ನು ಅಸುರರು ಏಕೆ ಆರಾಧಿಸುವದಿಲ್ಲೆಂಬುದಕ್ಕೆ ಹೇಳಿದ್ದು :—

अहंकारं बलं दर्पं कामं क्रोधं च संश्रिताः ।
मामात्मपरदेहेषु प्रद्विषन्तोऽभ्यसूयकाः ॥ १८ ॥

ಅಂ—ಅಹಂಕಾರ, ಬಲ, ದರ್ಪ, ಕಾಮ, ಕ್ರೋಧಗಳಿಂದ ಯುಕ್ತರಾದ ಅಸುರರು ತಮ್ಮ ದೇಹದಲ್ಲಿಯೂ, ಪರದೇಹದಲ್ಲಿಯೂ, ವಾಸವಾಗಿರುವ ನನ್ನನ್ನು ದ್ವೇಷಿಸುವರು; ಅಂದರೆ, "ಪರಮಾತ್ಮನು ಕರ್ತನಾದರೆ, ನಾನು ಈಗ ಮಾಡದ ಈ ಕಾರ್ಯಗಳನ್ನು ನನ್ನಿಂದ ಮಾಡಿಸಲಿ. ಅಥವಾ ಮಾಡುವ ಕಾರ್ಯಕ್ಕೆ ವಿಘ್ನವನ್ನುಂಟುಮಾಡಲಿ" ಎಂದು ಬೊಗಳುತ್ತ ಪರಮಾತ್ಮನ ಅಸ್ತಿತ್ವವನ್ನೇ ಅಲ್ಲಗಳೆಯುವರು; ಮತ್ತು 'ನಾನು ನಿರ್ದೋಷಿಯಾದರೂ, ನಾನು ದೋಷಿ ಎಂದೂ, ಗುಣಪೂರ್ಣನಾದರೂ, ಗುಣಹೀನನು ಎಂದೂ' ಬಾಯಿಗೆ ಬಂದಂತೆ ನಾಲಿಗೆಯನ್ನು ಹರಿಬಿಡುವರು.

ವಿಂ ಅಂ—ಅಹಂಕಾರವೆಂದರೆ, ನಾನೇ ಎಲ್ಲವನ್ನು ಸಾಧಿಸುವೆನೆಂಬುದು; ಬಲವೆಂದರೆ, ನನ್ನ ಬಲದಿಂದಲೇ ಎಲ್ಲವೂ ನಡೆಯುವದೆಂಬ ಅಭಿಮಾನವು, ದರ್ಪವೆಂದರೆ, ನನ್ನ ಇಚ್ಛಾಮಾತ್ರದಿಂದಲೇ ಎಲ್ಲವೂ ದೊರೆಯುವದು, ನನ್ನ ಇಚ್ಛೆಗೆ ಯಾರೂ ಅಡ್ಡಗಟ್ಟರು, ಎಂಬ ಕಾಮಮೂಲಕ ಅಭಿಮಾನ. ಹಿಂದೆ (೭—೧೧)ನೆಯ ಶ್ಲೋಕದಲ್ಲಿ ಉಕ್ತವಾಗಿರುವಂತೆ, ನಿಷಿದ್ಧಕರ್ಮಮೂಲಕ ಅಥವಾ ಕ್ರೋಧವನ್ನಾಶ್ರಯಿಸಿ ತಮ್ಮ ದೇಹದಲ್ಲಿಯೂ, ಅನ್ಯರೆಂದರೆ, ಪರಮಪ್ರೀತಿಗೆ ಪಾತ್ರರಾದ ಹೆಂಡರು-ಮಕ್ಕಳು ಮೊದಲಾದವರ ದೇಹಗಳಲ್ಲಿಯೂ, ಅಂತರ್ಗತನೂ, ಅತಿಪ್ರಿಯನೂ, ಆದ ನನ್ನನ್ನು ದ್ವೇಷಿಸುವರು; ಅಂದರೆ, ಶ್ರುತಿಸ್ಮೃತ್ಯಾದಿಗಳೆಂಬ ನನ್ನ ಆಜ್ಞೆಗಳನ್ನು ಮೀರಿ ನನ್ನೊಡನೆ ಹಗೆತನ ಹೂಡುವರು. ರಾಜಾಜ್ಞೆಯನ್ನು ಮೀರಿ ನಡೆಯುವದೆಂದರೆ, ಅವನನ್ನು ದ್ವೇಷಿಸಿದಂತೆ ಎಂದು ಲೋಕದಲ್ಲಿಯ ಸಾಮಾನ್ಯವಾಡಿಕೆಯಷ್ಟೆ? ಪರಮಾತ್ಮನು ಇದ್ದರೆ, 'ಕಾರ್ಯಮಾಡಬಾರದೆಂಬುವ ನನ್ನಿಂದ ಬಲಾತ್ಕಾರದಿಂದ ಕೆಲಸಮಾಡಿಸಲಿ. ಅಥವಾ, ಕಾರ್ಯಾಪೇಕ್ಷಿಯಾದ ನನ್ನನ್ನು ಅದರಿಂದ ನಿವೃತ್ತನನ್ನಾಗಿ ಮಾಡಲಿ' ಈ ಮೊದಲಾದ ಕುಯುಕ್ತಿಗಳಿಂದ ನನ್ನ ಇರುವಿಕೆಯನ್ನೇ ನಿರಾಕರಿಸುವರು. ತಮ್ಮ ಹಾಗೂ ಅನ್ಯರಾದ ಋತ್ವಿಜ, ಪಶು, ಮೊದಲಾದ ದೇಹಗಳಲ್ಲಿ ಅಂತರ್ಗತನಾದ ನನ್ನೊಡನೆ ದ್ವೇಷ ಬೆಳೆಸುತ್ತ, ನನ್ನಲ್ಲಿ ಭಕ್ತಿಯಿಲ್ಲದ ಮೂಲಕ ವಿಧಿಯಿಂದ ನಿಷೇಧಿಸಲ್ಪಟ್ಟ ಹಿಂಸೆಯನ್ನು ಆಚರಿಸುತ್ತ, ಸ್ವಪರ ದ್ರೋಹವನ್ನು ತಮ್ಮ ಉಡಿಯಲ್ಲಿ ಕಟ್ಟಿಕೊಳ್ಳುವರು. ಇದಲ್ಲದೆ, ಲೀಲೆಯಿಂದ ನಾನು ಧರಿಸಿರುವ ದೇಹಗಳಲ್ಲಿ ಮನುಷ್ಯನೆಂಬ ಬುದ್ಧಿಯನ್ನೂ, ಉತ್ತಮರೂ, ಪರಮ ಭಗವದ್ಭಕ್ತರೂ, ಆದ ಪ್ರಲ್ಹಾದಾದಿ ದೇಹಗಳಲ್ಲಿ ಅಂತರ್ಗತನಾದ ನನ್ನನ್ನು ಕೀಳನೆಂದು ಎಣಿಸುವರು. ಈ ವಿಷಯಕ್ಕೆ ಹಿಂದೆ (೯—೧೧,೭—೨೪) ನೇ ಶ್ಲೋಕಗಳಲ್ಲಿ ಹೇಳಲಾಗಿದೆ. ನನ್ನಲ್ಲಿಯೂ, ನನ್ನ ಸ್ವರೂಪ, ಅಸ್ತಿತ್ವ, ಪ್ರವೃತ್ತಿ, ಗುಣ, ಮೊದಲಾದವುಗಳನ್ನು ಉಪದೇಶಿಸುವ ಗುರುಗಳಲ್ಲಿಯೂ, ಅವುಗಳನ್ನು ಪ್ರತಿಪಾದಿಸುವ ಶಾಸ್ತ್ರಗಳಲ್ಲಿಯೂ, ದೋಷಾರೋಪಣೆಮಾಡಿ ಅಸೂಯೆ ಪಡುವರು. ಆದುದರಿಂದ ಅವರು ಮಾಡುವ ಯಜ್ಞವು ಅಸುರಯಜ್ಞವೆನಿಸುವದು. ಅಂತಹ ಯಜ್ಞಮಾಡಿದರೂ, ಅವರಿಗೆ ಶುಭಫಲವಾಗದೆ, ನರಕವಾಸವೇ ದೊರೆಯುವದು.

೧೯—೨೦— ಅಸುರರಿಗೆ ನರಕಪ್ರಾಪ್ತಿಯಷ್ಟೇ ಫಲವಲ್ಲ; ಆದರೆ, ಅವರು ಕೆಲವು ಕಾಲದವರೆಗೆ ಸಂಸಾರವನ್ನು ಅನುಭವಿಸಿ, ಬಳಿಕ ನಿತ್ಯ ನರಕವನ್ನು ಕೂಡ ನನ್ನಿಂದಲೇ ಹೊಂದುವರೆಂದು ಎರಡು ಶ್ಲೋಕಗಳಿಂದ ಹೇಳಿದ್ದು; ಅಥವಾ ಯಜ್ಞ—ದಾನಾದಿ ಕರ್ಮಗಳನ್ನು ಮಾಡುವ ಅಸುರರ ಮೇಲೆ

ಯಾವುದೊಂದು ಬಗೆಯಿಂದ ನಿನ್ನ ಕೃಪಾಕಟಾಕ್ಷವು ಬಿದ್ದರೆ, ಅಂಥವರಿಗೆ ಅದೇಕೆ ನರಕ ಫಲಪ್ರಾಪ್ತಿ ? ಎಂದು ಸಂದೇಹಗೊಂಡದ್ದಕ್ಕೆ ಪರಿಹಾರ ಹೇಳುವದು.

**तानहं द्विषतः क्रूरान्संसारेषु नराधमान् ।**
**क्षिपाम्यजस्रमशुभानासुरीष्वेव योनिषु ॥ १९ ॥**

**आसुरीं योनिमापन्ना मूढा जन्मनि जन्मनि ।**
**मामप्राप्यैव कौन्तेय ततो यान्त्यधमां गतिम् ॥ २० ॥**

**ಅಂ**—ಮೊದಲು ಹೇಳಿದಂತೆ ನನ್ನನ್ನು ದ್ವೇಷಿಸುವದರಿಂದಲೇ ಕ್ರೂರರೂ, ಅಶುಭರೂ, ಕೀಳ ಪ್ರಾಣಿಗಳೂ, ಆದ ಆ ಅಸುರರನ್ನು ಅಸುರಯೋನಿಗಳಲ್ಲಿ ತಿರುತಿರುಗಿ ಬೀಸಾಡುವೆನು. ಈ ಮೇರೆಗೆ, ತಾಮಸಿಗಳಾದ ಆ ಅಸುರರು ಹಲವು ಜನ್ಮಗಳಲ್ಲಿ ಅಸುರಯೋನಿಯನ್ನೇ ಪಡೆಯುತ್ತ, ನನ್ನನ್ನು ಹೊಂದದೆ, ಮೀರಿದ ಕೀಳ್ತರವಾದ ನರಕ ಗತಿಯನ್ನು ಹೊಂದುವರು.

**ವಿಂ ಅಂ**—ಅಸುರರು ನನ್ನನ್ನೂ, ನನ್ನ ಭಕ್ತರನ್ನೂ ದ್ವೇಷಿಸುತ್ತಲೂ, ಹಿಂಸಾದಿ ಕರ್ಮಗಳನ್ನಾಚರಿಸುತ್ತಲೂ, ಸ್ಮಶಾನದಲ್ಲಿ ವಾಸ ಮುಂತಾದ ಅಶುಭಾಚಾರವುಳ್ಳವರು. ಆದುದರಿಂದಲೇ ನರಾಧಮರು. ಅಂಥವರನ್ನು ಪುನಃ ಪುನಃ ಬರುವ ಹುಟ್ಟು–ಸಾವುಗಳೆಂಬ ಸಂಸಾರದಲ್ಲಿ ಅಸುರ ಸ್ವಭಾವದವರ ಕುಲದಲ್ಲಿಯೇ ಹುಟ್ಟಿಸುವೆನು; ಅಂದರೆ ನರಕಕ್ಕೆ ಸಾಧನವಾದ ಸಂಸಾರದಲ್ಲಿಯೇ ಬೀಸಾಡುವೆನು. ಬಳಿಕ ಸಿಂಹ, ವ್ಯಾಘ್ರಾದಿ ಹಿಂಸ್ರಯೋನಿಗಳಿಗೀಡು ಮಾಡುವೆನು ಹೀಗೆ ಅಸುರಯೋನಿಗಳನ್ನು ಹೊಂದುತ್ತ ಅವಿವೇಕಿಗಳಾಗಿ ನನ್ನ ಪ್ರಾಪ್ತಿಗೆ ಸಾಧನವಾದ ಜ್ಞಾನವನ್ನು ಲಭಿಸದೆ, ಹಂದಿ, ನಾಯಿ, ನರಿ ಅಥವಾ ಹುಳಹುಪ್ಪಡಿಗಳ ಯೋನಿಗಳನ್ನು ತಳೆದು ನಂತರ ಗಿಡ, ಮರ, ಕಲ್ಲು, ದೇಹಗಳನ್ನೋ ಪಿಶಾಚಯೋನಿಯನ್ನೋ ಸೇರಿ, ತಾಮಿಸ್ರ, ಅಂಧಂತಾಮಿಸ್ರವೆಂಬ ನಿತ್ಯ ನರಕಗಳನ್ನು ಹೊಂದುವರು. ಅವರ ಬಗ್ಗೆ ನನಗೆ ಎಳ್ಳಷ್ಟಾದರೂ ದಯೆಹುಟ್ಟದ್ದರಿಂದ, ನರಕಾದಿ ಅನರ್ಥ ಪರಂಪರೆಯಲ್ಲಿ ಅವರನ್ನು ಬೀಳಿಸುವೆನು. ಈ ರೀತಿಯಾಗಿ, ಅಸುರ ಸಂಪತ್ತು ಮಹಾ ಅನರ್ಥಗಳಿಗೆ ಕಾರಣವಾದ್ದರಿಂದ, ಅದನ್ನು ಪ್ರಯತ್ನ ಪೂರ್ವಕವಾಗಿ ತ್ಯಜಿಸಲೇ ಬೇಕು.

೨೧. ಮಹಾ ಪುರುಷಾರ್ಥಕ್ಕೆ ವಿರೋಧಿಗಳಾದ ಮುಖ್ಯ ಮೂರು ದೋಷಗಳನ್ನು ಅವಶ್ಯವಾಗಿ ಬಿಡಬೇಕೆಂಬುದನ್ನು ಕುರಿತು ಹೇಳಿದ್ದು; ಅಥವಾ "ಕೃಷ್ಣಾ, ನೀನು ಇಷ್ಟು ವಿಸ್ತಾರ ಪೂರ್ವಕವಾಗಿ ವರ್ಣಿಸಿದ ಅಸುರ ಸಂಪತ್ತು ವಿಚಿತ್ರವಾದ ಅನೇಕ ಭೇದಗಳುಳ್ಳದ್ದು. ಅದನ್ನು ಕೋಟಿ ಜನ್ಮಗಳಿಂದಲೂ ಪರಿಹರಿಸುವದು ಅಶಕ್ಯವೇ ! ಅಂದಬಳಿಕ ನನ್ನ ಗತಿ ಏನು ?" ಎಂದು ಅರ್ಜುನನು ಆಕ್ಷೇಪಿಸಿದ್ದಕ್ಕೆ ಸಮಾಧಾನ ಹೇಳಿದ್ದು:—

**त्रिविधं नरकस्येदं द्वारं नाशनमात्मनः ।**
**कामः क्रोधस्तथा लोभस्तस्मादेतत्त्रयं त्यजेत् ॥ २१ ॥**

**ಅಂ**—ಕಾಮ, ಕ್ರೋಧ, ಲೋಭಗಳೆಂಬೀ ಮೂರು ನರಕದ್ವಾರಗಳು; ಅಂದರೆ ನರಕಕ್ಕೆ ಸಾಧನಗಳು; ಅವು ಆತ್ಮನಾಶಕ್ಕೂ, ಅನರ್ಥ ಪ್ರಾಪ್ತಿಗೂ, ಕಾರಣಗಳಾದ್ದರಿಂದ, ಅವುಗಳನ್ನು ಅವಶ್ಯವಾಗಿ ಬಿಡತಕ್ಕದ್ದು. ಅದರಿಂದ, ಕಾರಣವೇ ಇಲ್ಲದಂತಾಗಿ ಕಾರ್ಯವಾದ ನರಕ ಪ್ರಾಪ್ತಿಯಾಗುವದು.

**ವಿಂ ಅಂ—**ಅರ್ಜುನಾ, ಕಾಮ, ಕ್ರೋಧ, ಹಾಗೇಯೇ ಲೋಭ, ಇವು ಮೂರು ಪ್ರಾಣಿಗೆ ರೌರವಾದಿ ನರಕಗಳ ಹೆಬ್ಬಾಗಿಲಗಳು; ಪ್ರವೇಶ ಮಾರ್ಗವೇ ಹೆಬ್ಬಾಗಿಲು. ಅದರಿಂದಲೇ ಆತ್ಮಕ್ಕೆ ಅತಿ ನೀಚವಾದ ತಿರ್ಯಗ್ಯೋನಿಗಳ ಪ್ರಾಪ್ತಿ; ಅಂತಹ ಪ್ರಾಪ್ತಿಯೇ ಆತ್ಮನಾಶವೆನಿಸುವದು. ಧರ್ಮ, ಅಧರ್ಮ, ಕರ್ತವ್ಯ, ಅಕರ್ತವ್ಯ, ಅರ್ಥ ಅನರ್ಥ, ಬಂಧ, ಮೋಕ್ಷ, ವಿವೇಕ, ವಿಜ್ಞಾನ, ಇವುಗಳನ್ನೆಲ್ಲ ಅವು ಮುಸಣಿಸುವವು. ಇಂಥ ನಾಶವೇ ಆತ್ಮನಾಶವು. ಇದು ಸ್ವರೂಪದ ಯಥಾರ್ಥ ಜ್ಞಾನವಾಗಲು ಪ್ರತಿಬಂಧಕವು; ಆದುದರಿಂದ ಕಾಮವನ್ನು ಚಂಡಾಲನಂತೆಯೂ, ಕ್ರೋಧವನ್ನು ಕೃಷ್ಣಸರ್ಪದಂತೆಯೂ, ಲೋಭವನ್ನು ಮಲದಂತೆಯೂ, ದೂರದಲ್ಲಿಯೇ ತ್ಯಜಿಸಬೇಕು. ಇವು ಮೂರೇ ಅಸುರ ಸಂಪತ್ತಿಗೆ ಕಾರಣಗಳಾದ್ದರಿಂದ, ಅವುಗಳಿಂದ ದೂರನಾದರೆ, ಸಕಲ ಅಸುರ ಸಂಪತ್ತಿಯನ್ನೇ ಗಡಿಪಾರು ಮಾಡಿದಂತಾಗುವದು.

೨೨. ಕಾಮಾದಿಗಳ ತ್ಯಾಗದಿಂದ ನರಕ ಪ್ರಾಪ್ತಿಯಾಗದು ಇಷ್ಟೇ ಅಲ್ಲ ಮಹಾಪುರುಷಾರ್ಥವು ಸಹ ಕೈಸೇರುವದೆಂಬುವ ಉದ್ದೇಶದಿಂದ ಹೇಳಿದ್ದು:—

**एतैर्विमुक्तः कौन्तेय तमोद्वारैस्त्रिभिर्नरः ।**
**आचरत्यात्मनः श्रेयस्ततो याति परां गतिम् ॥ २२ ॥**

**ಅಂ—**ನರಕಕ್ಕೆ ಕಾರಣಗಳಾದ ಕಾಮ, ಕ್ರೋಧ, ಲೋಭಗಳಿಂದ ಮುಕ್ತನಾದವನು ಪುರುಷಾರ್ಥಕ್ಕೆ ಬೇಕಾದ ಸಾಧನಗಳನ್ನೂ, ಬಳಿಕ ಮೋಕ್ಷವನ್ನೂ ಹೊಂದುವನು.

ವಿಂ **ಅಂ—**ಎಲ್ಲ ಅನರ್ಥಕ್ಕೂ ಕಾರಣಗಳಾದ ಈ ಮೂರರ ತ್ಯಾಗದಿಂದ ಅಸುರಸ್ವಭಾವವನ್ನೇ ಬೇರು ಸಹಿತವಾಗಿ ಕಿತ್ತೊಗೆದಂತಾಗುವದಷ್ಟೇ ಅಲ್ಲದೆ, ಕಾಮತ್ಯಾಗದಿಂದ ಫಲಾಸಕ್ತಿಯು ಅಡಗುವದು; ಕ್ರೋಧತ್ಯಾಗದಿಂದ ರಾಗ—ದ್ವೇಷಗಳು ಕಣ್ಮರೆಯಾಗುವವು, ಲೋಭತ್ಯಾಗದಿಂದ ಅವಶ್ಯ ಮಾಡತಕ್ಕ ವಿಹಿತ ಕರ್ಮಗಳಲ್ಲಿ ಮನಸ್ಸು ಹರಿಯುವದು. ಅದರಿಂದ ಜ್ಞಾನವಾಗಿ ಮೋಕ್ಷ ಲಭಿಸುವದು. ಆದರೆ ಕಾಮಿಯು ಫಲಾಪೇಕ್ಷೆಯಿಲ್ಲದೆ, ಕೋಪಿಯು ರಾಗದ್ವೇಷಗಳಿಲ್ಲದೆ, ಲೋಭಿಯು ಕೂಡಿಟ್ಟ ಹಣವನ್ನು ಸತ್ಪಾತ್ರದಲ್ಲಿ ವೆಚ್ಚಮಾಡದೆ, ಕರ್ಮಮಾಡಲರಿಯರು. ಆದುದರಿಂದ ಅವರು ಮೋಕ್ಷಕ್ಕೆ ಯೋಗ್ಯರಲ್ಲ.

೨೩. ಶ್ರೇಯಸ್ಸಾಧನದ ಅನುಷ್ಠಾನವನ್ನು ಮಾಡಲಿಕ್ಕೆ ಬೇಕಾದ ಅನ್ಯ ಸಾಧನವನ್ನೂ, ಅದನ್ನು ಮಾಡದಿದ್ದರೆ ಬಾಧಕವನ್ನೂ, ಹೇಳಿದ್ದು; ಅಥವಾ ಅಸುರಸಂಪತ್ತನ್ನೂ, ಕಾಮಾದಿ ಮೂರನ್ನೂ ಬಿಟ್ಟು, ವಿಹಿತಕರ್ಮಾನುಷ್ಠಾನವನ್ನೇಕೆ ಆಚರಿಸಬೇಕು? ಶಾಸ್ತ್ರವಿಧಿಗಾಗಿ ಎಂದು ಹೇಳಿದರೆ, ಕೆಲವರು ತಮ್ಮ ಮನಬಂದಂತೆ ಆಚರಿಸುವರು; ಅದರಿಂದ ಅವರು ಶಾಸ್ತ್ರವಿಧಿಯನ್ನು ಉಲ್ಲಂಘಿಸುವರು. ಆದುದರಿಂದ ಅಂಥವರ ಗತಿ ಏನೆಂದು ಕೇಳಿದ್ದಕ್ಕೆ ಹೇಳಿದ್ದು:—

**यः शास्त्रविधिमुत्सृज्य वर्तते कामकारतः ।**
**न स सिद्धिमवाप्नोति न सुखं न परां गतिम् ॥ २३ ॥**

**ಅಂ—**ಶಾಸ್ತ್ರದಲ್ಲಿ ಹೇಳಿದ ವಿಧಿಯನ್ನು ಮೀರಿ, ಸ್ವೇಚ್ಛೆಯಿಂದ ಯಾವುದೇ ಕಾರ್ಯದಲ್ಲಿ ಪ್ರವರ್ತಿಸುವ ಅಧಿಕಾರಿಯು ಪುರುಷಾರ್ಥದ ಉಪಾಯವನ್ನು ಸಂಪಾದಿಸುವದಿಲ್ಲ. ಇದಲ್ಲದೆ ಐಹಿಕ ಸುಖವನ್ನೂ, ಪಾರಲೌಕಿಕ ಮೋಕ್ಷವನ್ನೂ, ಹೊಂದುವದಿಲ್ಲ.

ವಿ೦ ಅ೦—ಪರಮಾತ್ಮನ ಆಜ್ಞೆ ಎಂಬುದು ವೇದಶಾಸ್ತ್ರ-ಪುರಾಣಗಳ ರೂಪವಾಗಿದೆ. ಅದು "ಮಾಡ ಬಹುದು, ಮಾಡಕೂಡದು, ಮಾಡತಕ್ಕದ್ದು, ಮಾಡತಕ್ಕದ್ದಲ್ಲ" ಎಂದು ಹೇಳುವ ತೆರದಿಂದ ವಿಧಿನಿಷೇಧಾತ್ಮಕವಾಗಿದೆ. ಅದು ಕರ್ತವ್ಯಾಕರ್ತವ್ಯಜ್ಞಾನಕ್ಕೆ ಮೂಲ ಬೊಡ್ಡಿ. ಇಂತಹ ಶಾಸ್ತ್ರ ವಿಧಾನವನ್ನು ಅಥವಾ ಪರಮಾತ್ಮನ ಆಜ್ಞೆಯನ್ನು ಉಲ್ಲಂಘಿಸಿ ಸ್ವಚ್ಛಂದವಾಗಿ ಶಾಸ್ತ್ರನಿಷಿದ್ಧ ಕರ್ಮ ವನ್ನಾಚರಿಸುವವನು ಜ್ಞಾನವನ್ನೂ, ಅದಕ್ಕೆ ಕಾರಣವಾದ ಅಂತಃಕರಣಶುದ್ಧಿಯನ್ನೂ, ಐಹಿಕಸುಖ ವನ್ನೂ, ಸ್ವರ್ಗವನ್ನೂ, ಮೋಕ್ಷವನ್ನೂ, ಹೊಂದುವದಿಲ್ಲ. ಹೀಗೆ ಶಾಸ್ತ್ರವಿರುದ್ಧವಾದ ಕರ್ಮಾಚರ ಣೆಯು ನಿವೃತ್ತಿಕರ್ಮವೆನಿಸದ್ದರಿಂದ ಅದರಿಂದ ಜ್ಞಾನ, ಮೋಕ್ಷಾದಿಗಳು ದೊರೆಯಲಾರವು. ಪರ ಮಾತ್ಮನ ಪ್ರೀತಿಗೆ ಅದು ಕಾರಣವಾಗದ್ದರಿಂದ ಐಹಿಕ ಸುಖವು ಸಿಗದು! ಐಹಿಕಸುಖವಾದರೂ ಅಲ್ಪವೂ, ನಶ್ವರವೂ, ಆದ್ದರಿಂದ ಅದು ಸುಖವಲ್ಲದೆ ದುಃಖವೆನಿಸುವದು. ಹೀಗಿರುವದರಿಂದ ಅವನ ಕರ್ಮವು ನಿಷ್ಫಲವಾಗುವದು. ಈ ಶ್ಲೋಕದಲ್ಲಿ ಶಾಸ್ತ್ರವಿಧಿಯನ್ನುಲ್ಲಂಘಿಸಿ ಸ್ವೇಚ್ಛೆಯಂತೆ ಕರ್ಮಮಾ ಡಿದರೆ, ಇಷ್ಟ ಐಹಿಕ-ಆಮುಷ್ಮಿಕ ಫಲವಿಲ್ಲೆಂದು ಹೇಳಿ ಇದೆ. ಅವನಿಗೆ ನರಕ ಮತ್ತು ತಿರ್ಯಗ್ಯೋನಿ ಗಳಲ್ಲಿ ಜನ್ಮ ಮೊದಲಾದ ಅನಿಷ್ಟಪ್ರಾಪ್ತಿಗಳುಂಟೆಂದು ಹಿಂದೆ (೧೬-೧೬,೧೮-೨೦) ಈ ಶ್ಲೋಕಗಳಲ್ಲಿ ಉಕ್ತವಾಗಿದೆ. ಆದ್ದರಿಂದ ಎಲ್ಲರೂ ಶಾಸ್ತ್ರದಲ್ಲಿ ಹೇಳಿದ ವಿಧಿನಿಷೇಧಗಳನ್ನನುಸರಿಸಿ ನಡೆಯತಕ್ಕದ್ದು. ಅದರಿಂದ ಅಸುರ ಸಂಪತ್ತು ಅಳಿದು ವಿಧಿವಿಹಿತಕರ್ಮಾಚರಣೆಯಲ್ಲಿ ಆಸೆಯುಂಟಾಗುವದು.

೨೪. ಶಾಸ್ತ್ರವಿಧಿಯಂತೆ ನಡೆಯದಿದ್ದರೆ, ಐಹಿಕ-ಪಾರತ್ರಿಕ ಸುಖಗಳೇಕೆ ಇಲ್ಲವೆಂಬ ಸಂದೇಹ ವನ್ನು ನಿರಾಕರಿಸಿ, ಅನ್ಯ ಸಾಧನಗಳನ್ನು ನಿರೂಪಿಸಿದ್ದು:—

**तस्माच्छास्त्रं प्रमाणं ते कार्याकार्यव्यवस्थितौ ।**
**ज्ञात्वा शास्त्रविधानोक्तं कर्म कर्तुमिहार्हसि ॥ २४ ॥**

ಅ೦—ಅರ್ಜುನಾ, ಇದನ್ನು ಮಾಡತಕ್ಕದ್ದು, ಇದನ್ನು ಬಿಡತಕ್ಕದ್ದು, ಎಂಬ ಕಾರ್ಯಾ ಕಾರ್ಯ ವ್ಯವಸ್ಥೆಯಲ್ಲಿ ವಿವೇಕಿಯಾದ ನಿನಗೆ ಶಾಸ್ತ್ರವೇ ಪ್ರಮಾಣವು. ಅದನ್ನು ಮೀರಿದರೆ ದೋಷವು. ಆದುದರಿಂದ ನೀನು ಈ ಲೋಕದಲ್ಲಿ ಶಾಸ್ತ್ರದಿಂದ ವಿಧಿಸಿದ ಕರ್ಮವನ್ನೇ ಮಾಡುವದು ಯೋಗ್ಯವು.

ವಿ೦ ಅ೦—ಅರ್ಜುನಾ, ನೀನು ಪರಮ ಆಸ್ತಿಕನು. ನಿನಗೆ ವೇದಾದಿಶಾಸ್ತ್ರವೇ ಪ್ರಮಾಣ, ಅದು ತತ್ವಾರ್ಥ-ಜ್ಞಾನವನ್ನು ಹುಟ್ಟಿಸುವದು. ಶಾಸ್ತ್ರದಿಂದ ವಿಧಿಸಲ್ಪಟ್ಟಿರುವದೇ ವಿಧಿಯು. ಅದರಲ್ಲಿ ಹೇಳಲ್ಪಟ್ಟ ಕರ್ಮ, ಅದರ ಫಲ, ಅದನ್ನು ಕೊಡುವ ಪರಮಾತ್ಮನ ತತ್ವ, ಅದರ ಮಹಿಮೆ, ಇವುಗಳನ್ನೆಲ್ಲ ಚನ್ನಾಗಿ ತಿಳಿದು, ಈ ಲೋಕದಲ್ಲಿ ನೀನು ಜ್ಞಾನಪೂರ್ವಕವಾಗಿ ನಿನಗೆ ವಿಹಿತವಾದ ಯುದ್ಧವೆಂಬ ಕರ್ಮಮಾಡುವದೇ ಯೋಗ್ಯವು. ಈ ಕರ್ಮಭೂಮಿಯಲ್ಲಿ ಹುಟ್ಟಿದ ಮೇಲೆ ಕರ್ಮ ದಲ್ಲಿಯೇ ನಿನಗೆ ಅಧಿಕಾರ; ಅದು ಕೂಡ ವಿಹಿತವಾಗಿಯೇ ಇರತಕ್ಕದ್ದು. ಇಲ್ಲಿ "ನೀನು ಯೋಗ್ಯನು" ಎಂದು ಹೇಳಿದ್ದರಿಂದ ಅಂಥ ಕರ್ಮಕ್ಕೆ ಅರ್ಜುನನು ಅಧಿಕಾರಿ ಎಂದು ಸೂಚಿತವಾಗು ವದು. ಅದರಂತೆಯೇ ಸಕಲ ಪ್ರಾಣಿಗಳು ತಮ್ಮ ತಮ್ಮ ವರ್ಣಾಶ್ರಮಗಳಿಗೆ ವಿಹಿತವಾದ ಕರ್ಮ ವನ್ನೇ ನಡಿಸತಕ್ಕದ್ದು.

इति श्रीमद्भगवद्गीतासूपनिषत्सु ब्रह्मविद्यायां योगशास्त्रे श्रीकृष्णार्जुनसंवादे देवासुरसम्पद्विभागो नाम षोडशोऽध्यायः ॥ १६ ॥

**ಅಂ**— ಈ ಮೇರಿಗೆ, ಷಡ್ಗುಣೈಶ್ವರ್ಯಸಂಪನ್ನನಾದ ಪರಮಾತ್ಮನಿಂದ ಮನೋಹರ. ಅಲಂಕಾರಿಕ ಮತ್ತು ಇಷ್ಟ ಶಬ್ದಗಳಿಂದ ಉಪದೇಶಿಸಲ್ಪಟ್ಟದ್ದೂ, ಉಪನಿಷತ್ತಿಗೆ ಸಮಾನವೂ ಪರಬ್ರಹ್ಮವಿಷಯಕ ವಿದ್ಯೆಯೂ ಎನಿಸುವ ಮತ್ತು ಕರ್ಮ ಯೋಗಾದಿಗಳನ್ನು ಪ್ರತಿಪಾದಿಸುವ, ಶ್ರೀಕೃಷ್ಣನಿಗೂ ಅರ್ಜುನನಿಗೂ ನಡೆದ ಸಂವಾದರೂಪ **ಗೀತಾಶಾಸ್ತ್ರದಲ್ಲಿಯ ದೇವಾಸುರಸಂಪತ್ತುಗಳ ವಿಭಾಗವೆಂಬೀ ಹದಿನಾರನೆಯ** ಅಧ್ಯಾಯವು ಮುಗಿಯಿತು.



# ೧೭ನೆಯ ಅಧ್ಯಾಯವು.

೧. ೧೪ನೆಯ ಅಧ್ಯಾಯದ ೧೯ನೆಯ ಶ್ಲೋಕದಲ್ಲಿ ಎಲ್ಲ ಪರಿಣಾಮವು ಗುಣಗಳಿಂದಾಗುವದೆಂದು ಸಾಮಾನ್ಯವಾಗಿ ಹೇಳಲ್ಪಟ್ಟಿತು. ಪ್ರಕೃತ ಅಧ್ಯಾಯದಲ್ಲಿ ಆ ಗುಣಗಳಿಂದಾಗುವ ಶ್ರದ್ಧೆ, ಆಹಾರ, ತಪಸ್ಸು, ಮೊದಲಾದ ಕರ್ಮಗಳ ವಿಸ್ತಾರವು ಸದಸದ್ರೂಪಗಳ ಭೇದದಿಂದ ಮಾಡಲಾಗುವದು. ಹಿಂದೆ, ಶಾಸ್ತ್ರವಿಧಾನವನ್ನು ತಿಳಿದು, ಕಾರ್ಯಮಾಡಬೇಕೆಂದು ಹೇಳಿದ್ದಕ್ಕೆ ಅವಕಾಶ ದೊರಿಯಲು ಅರ್ಜುನನು ಶಾಸ್ತ್ರವಿಧಿಯನ್ನರಿಯದೆ ಕರ್ಮಮಾಡುವವರ ಸ್ಥಿತಿ ಏನೆಂದು ಕೇಳಿದ್ದು, ಅಥವಾ ಶಾಸ್ತ್ರದಿಂದ ವಿಧಿಸಲ್ಪಟ್ಟ ಕರ್ಮವನ್ನು ಮಾಡತಕ್ಕದ್ದು; ಮತ್ತು ಅದರಿಂದಲೇ ಆ ಕರ್ಮವು ಸಫಲವಾಗುವದೆಂದು ಶ್ರೀಕೃಷ್ಣನು ಹೇಳಿದ್ದನ್ನು ಕೇಳಿಕೊಂಡು ಅರ್ಜುನನು ಅಂದದ್ದು:—ಕೃಷ್ಣಾ, ನೀನು ಇಲ್ಲಿಯವರೆಗೆ ತಿಳಿಯುವಂತೆ ಹೇಳಿದ ಕರ್ಮಯೋಗಕ್ಕೆ ಈಗ ಮಹಾವಿಪತ್ತು ಒದಗಿತಲ್ಲ! ಏಕೆಂದರೆ, ಹೇಗಾದರೂ ಕರ್ಮಮಾಡಬೇಕೆಂದು ಅಂದರೆ ಪ್ರಾಣಿಗಳು ವಿಹಿತಕರ್ಮ ಮಾಡುವರು, ಆದರೆ, ಜ್ಞಾನಪೂರ್ವಕವಾಗಿಯೇ ಕರ್ಮಮಾಡಬೇಕೆಂದೂ, ಹಾಗೆ ಮಾಡಿದ್ದೇ ಫಲವಾಗುವದೆಂದೂ, ಹೇಳಿದರೆ, ಜ್ಞಾನಸಂಪಾದನವೇ ಅವಶ್ಯವೆಂದು ಕರ್ಮವನ್ನೇ ಬಿಡಲು ಸಿದ್ಧರಾಗುವರು; ಅಲ್ಲದೆ, ಕರ್ಮಮಾಡುವವರು ಕೂಡ ಅದನ್ನು ಬಿಡುವರು. ಇನ್ನು, ಜ್ಞಾನವಿಲ್ಲದವರ ಪ್ರವೃತ್ತಿಯು ಕರ್ಮದಲ್ಲಿ ಹೇಗಾಗುವದೆಂದು ಕೇಳಿದರೆ, ಅದಕ್ಕೆ ಶಿಷ್ಟಾಚಾರದರ್ಶನದಿಂದಲೂ, ಪೂರ್ವಸಂಸ್ಕಾರದಿಂದಲೂ 'ನನ್ನ ತಂದೆಯು ಹೀಗೆ ಆಚರಿಸುವನು, ನನ್ನ ಅಜ್ಜ—ಮುತ್ತಂದಿರೂ ಹೀಗೆ ಆಚರಿಸಿದರು; ಆದ್ದರಿಂದ ನಾನೂ ಹಾಗೇ ಆಚರಿಸಬೇಕೆಂಬ' ಶ್ರದ್ಧಾಪೂರ್ವಕ ಪ್ರವೃತ್ತಿಯುಂಟಾಗುವದು. ಆದಕಾರಣ, ವಿಧಿಯ ಜ್ಞಾನವಿಲ್ಲದೆ ಕೂಡ ಶ್ರದ್ಧೆಯಿಂದ ವಿಹಿತಕರ್ಮ ಮಾಡುವವರಿಗೆ ಏನಾದರೂ ಫಲವಾಗಬೇಕೆಂತಲೇ ಹೇಳತಕ್ಕದ್ದು. ಹಾಗೆ ಹೇಳದಿದ್ದರೆ, "ನೀನು ಮಹಾಪ್ರಯಾಸದಿಂದ ಕರ್ಮವಿಧಾನವನ್ನು ವಿಸ್ತರಿಸಲ್ಪಟ್ಟ ಶ್ರಮವು ವ್ಯರ್ಥವಾಗುವದು. ಇನ್ನು, ನೀನು ಕೇಳುವದೇನಂದರೆ, ಜ್ಞಾನವಿಲ್ಲದೆ ಶ್ರದ್ಧೆಯಿಂದ ಕರ್ಮಮಾಡುವವರಿಗೆ ಫಲವು ಉಂಟೋ ಇಲ್ಲವೋ ಎಂಬುದು. ಅದಕ್ಕೆ ಫಲವಿಲ್ಲವೆಂದು ಹೇಳುವದು ಯೋಗ್ಯವಲ್ಲ; ಶ್ರದ್ಧೆಯಿಂದ ಕರ್ಮಮಾಡುವವರಿಗೆ ಕೇವಲ ವಿಧಿಜ್ಞಾನವಿಲ್ಲವೆಂಬುವ ದೋಷದಿಂದ ಫಲವುಂಟಾಗದೆಂದು ಹೇಳುವದು ಯೋಗ್ಯವಲ್ಲ. ಏಕೆಂದರೆ, ಜ್ಞಾನವಿಲ್ಲದೆ ಶ್ರದ್ಧೆಯಿಂದ ಸೇವೆಮಾಡುವವರಿಗೆ ಅದಕ್ಕನುಸರಿಸಿ ಗುರುಗಳೂ, ದೇವತೆಗಳೂ, ಫಲಕೊಡುವರೆಂಬುದು ಪ್ರಸಿದ್ಧವು. ಆದ್ದರಿಂದ, ವಿಧಿಜ್ಞಾನವಿಲ್ಲದೆ ಶ್ರದ್ಧೆಯಿಂದ ವಿಹಿತಕರ್ಮಮಾಡುವವರಿಗೆ ಫಲವಾಗುವದೆಂದೇ ಹೇಳಬೇಕಾದೀತು. ಅಂದಬಳಿಕ ಜ್ಞಾನವಿಲ್ಲದೆ ಶ್ರದ್ಧೆಯಿಂದ ಆಚರಿಸತಕ್ಕ ಕರ್ಮ ಎಂತಹದು? ಅದು ಸಾತ್ವಿಕವೋ, ರಾಜಸವೋ, ತಾಮಸವೋ" ಎಂಬುವನ್ನು ಅರಿಯಲೋಸುಗ ಶ್ರೀಕೃಷ್ಣನಿಗೆ ಪ್ರಶ್ನ ಮಾಡಿದ್ದು —

**अर्जुन उवाच ।**

**ये शास्त्रविधिमुत्सृज्य यजन्ते श्रद्धयान्विताः ।**
**तेषां निष्ठा तु का कृष्ण सत्त्वमाहो रजस्तमः ॥ १ ॥**

ಅ೦—ಕೃಷ್ಣಾ ಶಾಸ್ತ್ರವಿಧಿಯನ್ನರಿಯದೆ, ಬರಿಯ ಶ್ರದ್ಧೆಯಿಂದಲೇ ನಿನ್ನನ್ನು ಆರಾಧಿಸುವವರ ಸ್ಥಿತಿಯು ಎಂಥದು? ಅಂದರೆ, ಸಾತ್ವಿಕವೋ, ರಾಜಸವೋ, ತಾಮಸವೋ, ಎಂಬುದನ್ನು ಸ್ಪಷ್ಟವಾಗಿ ಹೇಳು.

ವಿಂ ಅಂ—'ಶ್ರದ್ಧೆಯಿಂದ' ಎಂದು ಇಲ್ಲಿ ಹೇಳಿದ್ದರಿಂದ, ಶ್ರದ್ಧೆಯಿಲ್ಲದೆ ಕರ್ಮಮಾಡುವವರನ್ನು ಕುರಿತು ನನ್ನ ಪ್ರಶ್ನೆಯಿಲ್ಲ; ಅದಕ್ಕೆ ನಿನ್ನ ಉತ್ತರವೂ ಬೇಡ ಎಂದು ಸೂಚಿಸುವದು. ನೀನು ಭಕ್ತರ ದುರಿತಗಳನ್ನು ದೂರಗೊಳಿಸುವದರಿಂದ, ಭಕ್ತಿಯಿಂದ ನಿನ್ನನ್ನು ಆರಾಧಿಸುವವರಿಗೆ ಫಲ ಉಂಟೆಂದು ತಿಳಿದು, ನಾನು ನಿನ್ನನ್ನು ಕೇಳುವೆ.

೨-೩. ಆರಾಧಿಸುವವರಲ್ಲಿ ಮೂರು ವರ್ಗಗಳುಂಟು. ಯಜ್ಞಾಂಗವಾಗಿ ಯಜ್ಞ ಮಾಡುವವನಿಗೆ ವಿಶೇಷವಾಗಿ ಹೇಳಿದ ಶ್ರದ್ಧೆಯನ್ನು ಸಾತ್ವಿಕಾದಿಗಳಿಂದ ವಿಂಗಡಿಸಿ, ಅವರ ಸಾತ್ವಿಕಾದಿ ಸ್ವರೂಪವನ್ನು ಮುಂದಿನ ಎರಡು ಶ್ಲೋಕಗಳಿಂದ ಹೇಳಿದ್ದು. ಶ್ರೀಕೃಷ್ಣನು ಅಂದದ್ದು:—ಶ್ರದ್ಧೆಯೆಂದರೆ, ಎಲ್ಲರಲ್ಲಿ ಸ್ವಾಭಾವಿಕವಾಗಿ ಇರುವ ಆಸ್ತಿಕ್ಯನಿಷ್ಠೆ, ಹೊರತು ಅಂತಃಕರಣದಲ್ಲಿರುವ ಶ್ರದ್ಧೆಯಲ್ಲ. ಆಸ್ತಿಕ್ಯನಿಷ್ಠೆಯು ಮೂರು ವಿಧವು. ಅದನ್ನು ಕೇಳಿ ಅದರಲ್ಲಿ ನಂಬಿಗೆಯನ್ನಿಡು; ಶ್ರದ್ಧೆಯಿಂದ ಮಾಡುವ ಆರಾಧನೆಯ ಪ್ರಕಾರವನ್ನು ಕೇಳು. ಇನ್ನು, ಶ್ರದ್ಧೆಯು ಮೂರು ವಿಧವಾಗಬಹುದು, ಆದರೆ, ಅದರ ಸ್ಥಿತಿ ಎಂಥದೆಂದು ಕೇಳಿದ ಪ್ರಶ್ನಕ್ಕೆ ಯಾವ ಉತ್ತರವನ್ನು ಹೇಳಿದಂತಾಯಿತೆಂದರೆ ಅದನ್ನು ಹೇಳುವನು:—

श्रीभगवानुवाच ।
त्रिविधा भवति श्रद्धा देहिनां सा स्वभावजा ।
सात्त्विकी राजसी चैव तामसी चेति तां शृणु ॥ २ ॥

सत्त्वानुरूपा सर्वस्य श्रद्धा भवति भारत ।
श्रद्धामयोऽयं पुरुषो यो यच्छ्रद्धः स एव सः ॥ ३ ॥

ಅಂ—ಆರಾಧಿಸುವ ಅಧಿಕಾರಿಯು ಸಾತ್ವಿಕಶ್ರದ್ಧೆಯವನಾದರೆ, ಸಾತ್ವಿಕನೆಂತಲೂ, ರಾಜಸ ಶ್ರದ್ಧೆಯವನಾದರೆ, ರಾಜಸನೆಂತಲೂ, ತಾಮಸ ಶ್ರದ್ಧೆಯವನಾದರೆ, ತಾಮಸನೆಂತಲೂ ಹೇಳಬೇಕು. ಏಕೆಂದರೆ ಸರ್ವಪ್ರಾಣಿಗಳ ಶ್ರದ್ಧೆಯು ಆಯಾ ಜೀವಸ್ವರೂಪಕ್ಕನುಸರಿಸಿರುವದು. ಈ ಬಗ್ಗೆ ಸತ್ವವು ಜೀವವೆಂದು ವಚನ ಉಂಟು. ಹೀಗೆ ಶ್ರದ್ಧೆಯು ಜೀವಸ್ವರೂಪವಾದುವರಿಂದ, ಅದಕ್ಕನು ಗುಣವಾಗಿ ಜೀವದ ಸ್ವರೂಪವನ್ನು ತಿಳಿಯತಕ್ಕದ್ದು. ಇನ್ನು, ಶ್ರದ್ಧೆಯು ಏಕೆ ಜೀವಸ್ವರೂಪಕ್ಕನುಗುಣವಾಗಿ ಇರುವದೆಂದರೆ, ಈ ಜೀವವು ಶ್ರದ್ಧಾಮಯವೆಂದರೆ, ಶ್ರದ್ಧಾಸ್ವರೂಪವೆಂದು ಹೇಳುವರು. ಇಲ್ಲಿ मयट् ಪ್ರತ್ಯಯವು ಸ್ವರೂಪ ಎಂಬರ್ಥದಲ್ಲಿ ಉಂಟು.

ವಿಂ ಅಂ—ಶ್ರದ್ಧೆಯು ಸ್ವರೂಪಭೂತವೆಂತಲೂ, ಮನೋವೃತ್ತಿರೂಪವೆಂತಲೂ, ಎರಡು ವಿಧವಾಗಿದೆ. ಅವುಗಳಲ್ಲಿ ಮೊದಲನೆಯ ವಿಧದಲ್ಲಿ ಸಾತ್ವಿಕ, ರಾಜಸ, ತಾಮಸಗಳೆಂದು ಭೇದಗಳಿಂದ ಉತ್ತಮಾಧಿಕಾರಗಳ ಶ್ರದ್ಧೆಯು ಸಾತ್ವಿಕವೂ, ಮಧ್ಯಮಾಧಿಕಾರಗಳದು ರಾಜಸವೂ, ಅಧಮಾಧಿಕಾರಗಳದು ತಾಮಸವೂ, ಎಂದು ತಿಳಿಯತಕ್ಕದ್ದು; ಆದರೆ, ಮನೋವೃತ್ತಿರೂಪ ಶ್ರದ್ಧೆಯು ಹಾಗಲ್ಲ. ಉತ್ತಮನ ಶ್ರದ್ಧೆಯು ಕೆಲವು ಕಾಲಕ್ಕೆ ರಾಜಸ—ತಾಮಸವಾಗಬಹುದು. ಮಧ್ಯಮರದು ಕೆಲವು ಕಾಲಕ್ಕೆ ಸಾತ್ವಿಕ—ತಾಮಸವಾಗಬಹುದು; ಅದರಂತೆ ಅಧಮರದು ಕೆಲವು ಕಾಲಕ್ಕೆ ಸಾತ್ವಿಕ—ರಾಜಸವಾಗಬಹುದು. ಆದ್ದರಿಂದ ಇಲ್ಲಿ ಸ್ವರೂಪಭೂತ ಶ್ರದ್ಧೆಯಲ್ಲಿಯೇ ಸಾತ್ವಿಕಾದಿ ಭೇದಗಳು ಹೇಳಲ್ಪಟ್ಟಿರುವವೆಂದು ತಿಳಿಯಬೇಕು. ಹೀಗೆ, ವಿಧಿಜ್ಞಾನವಿಲ್ಲದೆ ಶ್ರದ್ಧೆಯಿಂದ ಕರ್ಮಮಾಡುವ ಅಧಿಕಾರಿಗಳು ಶ್ರದ್ಧೆಯು ಭೇದದಿಂದ ಸಾತ್ವಿಕರೂ, ರಾಜಸರೂ, ತಾಮಸರೂ, ಆಗುವರು. ಇದಕ್ಕನುಸರಿ

ಸಿಯೇ ಅವರು ಮಾಡುವ ಕರ್ಮ, ಅದಕ್ಕೆ ದೊರೆಯುವ ಫಲಗಳಲ್ಲಿಯೂ ಸಾತ್ವಿಕಾದಿ ಭೇದಗಳುಂಟು. ಆದ್ದರಿಂದ ಶ್ರದ್ಧೆಯಿಂದ ಕರ್ಮಮಾಡುವವರಿಗೆ ಶ್ರದ್ಧೆಗನುಸರಿಸಿ ಫಲವುಂಟು; ಹೊರತು ಅವರಿಗೆ ವಿಧಿಯ ಜ್ಞಾನವಿಲ್ಲೆಂದು ಆ ಕರ್ಮವು ನಿಷ್ಫಲವಾಗದು. ಇನ್ನು, ಹಿಂದಿನ ( ೨-೪೪ ) ನೆಯ ಶ್ಲೋಕದಲ್ಲಿ ಜ್ಞಾನಪೂರ್ವಕ ಕರ್ಮಮಾಡಬೇಕೆಂದು ಹೇಳಿದ್ದು, ವಿಧಿಯನ್ನರಿತು ಶ್ರದ್ಧೆಯಿಂದ ಕರ್ಮಮಾಡಿದರೆ, ಮಹಾಫಲವುಂಟಾಗುವದೆಂಬ ಅಭಿಪ್ರಾಯದಿಂದ ಎಂದು ತಿಳಿಯಬೇಕು.

೪. ಹಿಂದಿನ ಶ್ಲೋಕದಲ್ಲಿ ಸಾತ್ವಿಕಾದಿ ಶ್ರದ್ಧೆಯುಳ್ಳವನು ಸಾತ್ವಿಕಾದಿಸ್ವರೂಪದವನೆಂದು ಹೇಳಿ ಇದೆ. ಆದರೆ ಅವನು ಮಾಡುವ ಕರ್ಮವು ಎಂಥದೆಂದು ಕೇಳಿದ್ದಕ್ಕೆ ಉತ್ತರ ಹೇಳಿದ್ದು :—

**यजन्ते सात्त्विका देवान्यक्षरक्षांसि राजसाः ।**
**भूतान्प्रेतगणांश्चान्ये यजन्ते तामसा जनाः ॥ ४ ॥**

ಅಂ—ಶಾಸ್ತ್ರವಿಧಾನವನ್ನರಿಯದ ಸಾತ್ವಿಕ-ರಾಜಸ-ತಾಮಸ ಶ್ರದ್ಧೆಯುಳ್ಳ ಸಾತ್ವಿಕ-ರಾಜಸ-ತಾಮಸ ಅಧಿಕಾರಿಗಳು ಕ್ರಮದಿಂದ ದೇವತೆಗಳನ್ನೂ, ಯಕ್ಷ-ರಾಕ್ಷಸರನ್ನೂ, ಭೂತ-ಪ್ರೇತಗಣ ಗಳನ್ನೂ, ಆರಾಧಿಸುವರು. ಇನ್ನು, ಯಾಗವಿಧಿಯಲ್ಲಿ ऐन्द्रं दधि ಎಂಬಲ್ಲಿ ಆ ಯಾಗವು ದೇವತೋ ದ್ದೇಶಕವಾಗಿ ಇದ್ದರೂ, ಅದನ್ನು ರಾಜಸಾದಿ ಅಧಿಕಾರಿಗಳು ಆಚರಿಸಿದರೂ, ಅಲ್ಲಿ ಅವರಿಗೆ ಉದ್ದಿಷ್ಟ ದೇವತೆಗಳು ಯಕ್ಷ-ರಾಕ್ಷಸರೆಂದು ತಿಳಿಯಬೇಕು. ಈ ವಿಷಯಕ್ಕೆ ಮಹಾವಿಷ್ಣು ಪುರಾಣದ “ ದೀನ ರಾದುದರಿಂದ ಯಕ್ಷ-ರಾಕ್ಷಸರಿಗೆ ಬ್ರಹ್ಮ-ಇಂದ್ರಾದಿ ದೇವತೆಗಳ ನಾಮಗಳು ಉಂಟು ” ಎಂಬ ವಚ ನವು ಪ್ರಸಿದ್ಧವಿದೆ. ದೇವತೆಗಳನ್ನಾರಾಧಿಸುವ ಅಧಿಕಾರಿಗಳು ಶ್ರೀವಿಷ್ಣುವಿನ ಭಕ್ತರಾದುದರಿಂದ ಅವ ರಿಗೆ ಮೋಕ್ಷಫಲವೇ ದೊರೆಯುವದು; ರಾಜಸರಿಗೆ ಸಾಂಕಲ್ಪಿಕ ಫಲವು ದೊರೆಯುವದು; ಮತ್ತು ತಾಮಸರಿಗೆ ರುದ್ರನ ಪರಿವಾರಗಳಾದ ಭೂತಪ್ರೇತಗಳ ಗಣಪ್ರಾಪ್ತಿಯಾಗುವದು. ಈ ಬಗ್ಗೆ ಕೂಡ ಮಹಾವಿಷ್ಣುಪುರಾಣದ ವಚನವೇ ಪ್ರಮಾಣವಾಗಿದೆ.

ವಿಂ ಅಂ—ಸಾತ್ವಿಕ ಶ್ರದ್ಧೆಯುಳ್ಳವರು ಶ್ರೀವಿಷ್ಣು, ಚತುರ್ಮುಖ, ರುದ್ರ, ಇಂದ್ರ, ವಸು, ಸೂರ್ಯ, ಮೊದಲಾದ ದೇವತಗಳನ್ನೂ, ರಾಜಸ ಶ್ರದ್ಧೆಯುಳ್ಳವರು ಕುಬೇರ, ನಿರ್ಋತಿ, ಮೊದಲಾ ದವರನ್ನೂ ತಾಮಸಶ್ರದ್ಧಯುಳ್ಳವರು ಪಿಶಾಚಾದಿಗಳನ್ನೂ, ರುದ್ರನ ಸೇವಕರಾದ ಭೂತಾದಿಗಳನ್ನೂ ಅನುಕ್ರಮವಾಗಿ ಆರಾಧಿಸುವರು. ಈ ವಿಷಯವಾಗಿ “ ಬ್ರಾಹ್ಮಣರು ಸ್ವಧರ್ಮದಿಂದ ಭ್ರಷ್ಟರಾಗಿ ಮರಣಹೊಂದಿದಬಳಿಕ ವಾಯುಸಂಬಂಧವಾದ ದೇಹವನ್ನು ಹೊಂದಿ, ಉಲ್ಕಾಮುಖ, ಕಟ, ಪೂತ ನಾದಿ ಸಂಜ್ಞೆಯುಳ್ಳ ಪ್ರೇತಗಳಾಗುವರೆಂದು ” ಮನುವಚನವುಂಟು. ತಾಮಸ ಶ್ರದ್ಧೆಯುಳ್ಳವರು ಸಾತ್ವಿಕರಾಜಸಶ್ರದ್ಧಯುಳ್ಳವರಿಗಿಂತ ಅತಿವಿಲಕ್ಷಣರೆಂದು ಸೂಚಿಸುವದಕ್ಕಾಗಿ अन्ये ಎಂದೂ, ಅವರು ಮಾಡುವ ಕರ್ಮಗಳು ಅತಿವಿಲಕ್ಷಣವೆಂದು ಸೂಚಿಸುವದಕ್ಕಾಗಿ पुनर्यजन्ते ಎಂದೂ ಹೇಳಿ ಇದೆ. ಸಾತ್ವಿಕಶ್ರದ್ಧೆಯಿಂದ ದೇವತೆಗಳನ್ನಾರಾಧಿಸುವವರಿಗೆ ದುಃಖದ ಲೇಪವಿಲ್ಲದ ಉತ್ತಮ ಫಲವಾದ ಮೋಕ್ಷ ಅಥವಾ ಸ್ವರ್ಗವು ಸಿಗುವದು, ರಾಜಸಶ್ರದ್ಧೆಯಿಂದ ಯಕ್ಷರಾಕ್ಷಸರನ್ನು ಆರಾಧಿ ಸುವವರು ದುಃಖಮಿಶ್ರಿತವಾದ ಮತ್ತು ಸ್ವರ್ಗಸುಖಕ್ಕಿಂತ ಕೀಳವಾದ ಸುಖವನ್ನು ಪಡೆಯುವರು; ತಾಮಸ ಶ್ರದ್ಧೆಯಿಂದ ಪಿಶಾಚಭೂತಗಳನ್ನಾಚರಿಸುವವರು ದುಃಖವು ಹೆಚ್ಚಾದ ಮತ್ತು ರಾಜನನ್ನು ವಶಮಾಡಿಕೊಂಡು ಅಲ್ಪಸುಖವನ್ನು ಹೊಂದುವರು. ಹೀಗೆ ಆಯಾ ಅಧಿಕಾರಿಗಳಿಗೆ ಹೇಳಿದ ಲಕ್ಷಣ ಗಳಿಂದ ಅವರವರ ಶ್ರದ್ಧೆಯನ್ನು ತಿಳಿದು, ರಾಜಸ-ತಾಮಸರ ಶ್ರದ್ಧೆಯನ್ನು ಬಿಟ್ಟು, ರಾಜಸ-ತಾಮಸರ ಶ್ರದ್ಧೆಗಳನ್ನು ದೂರಿರಿಸಿ, ಮಹಾ ಫಲಕೊಡುವ ಸಾತ್ವಿಕ ಶ್ರದ್ಧೆಯನ್ನೇ ಹೊಂದಲು ಎತ್ನ

ಗಡೆ ನಡಿಸತಕ್ಕದ್ದು. ಇನ್ನು, ಸಾತ್ವಿಕರೂ, ರಾಜಸರೂ, ತಾಮಸರೂ, ಸಾಮಾನ್ಯವಾಗಿ 'इन्द्राय स्वाहा, वरुणाय स्वाहा ' ಈ ಮೊದಲಾದ ಮಂತ್ರಗಳಿಂದಲೇ ಆರಾಧಿಸುವರು; ಅಲ್ಲದೆ ರಾಜಸರು ' यक्षाय स्वाहा, रक्षसे स्वाहा ' ಎಂದೂ, ತಾಮಸರು ' प्रेताय स्वाहा, भूताय स्वाहा ' ಎಂದೂ ಆರಾಧಿಸುವದಿಲ್ಲ. ಆದಾಗ್ಯೂ, ಇವೆರಡು ವಿಧದ ಅಧಿಕಾರಿಗಳು ಬ್ರಹ್ಮರುದ್ರಾದಿ ದೇವತೆಗಳನ್ನು ಆರಾಧಿಸುವರೆಂದು ತಿಳಿಯಕೂಡದು; ಏಕೆಂದರೆ, ಯಕ್ಷ–ರಾಕ್ಷಸರೂ, ಭೂತ–ಪ್ರೇತಗಣಗಳೂ ಬ್ರಹ್ಮ–ರುದ್ರಾದಿ ನಾಮಗಳುಳ್ಳವರು. ಸಾತ್ವಿಕಶ್ರದ್ಧೆಯಿಂದ ಮಾಡಿದ ಕರ್ಮದಲ್ಲಿ ಶ್ರೀವಿಷ್ಣುವು ಯಜ್ಞಭೋಕ್ತೃವಾಗಿದ್ದು, ದೇವತೆಗಳಿಗೆ ಭೋಜನಮಾಡಿಸಿ, ತಾನೂ ಮಾಡಿ, ಆ ಕರ್ಮವು ಕಾಮ್ಯವಾದರೆ ಸ್ವರ್ಗಾದಿ ಫಲವನ್ನೂ, ನಿಷ್ಕಾಮವಾದರೆ, ಜ್ಞಾನದ್ವಾರದಿಂದ ಮೋಕ್ಷವನ್ನೂ ಕೊಡುವನು. ಈ ವಿಷಯವಾಗಿ ಹಿಂದೆ (೭–೨೨,೨೩,೯–೨೦,೨೧,೨೨) ಶ್ಲೋಕಗಳಲ್ಲಿ ಉಕ್ತವಾಗಿದೆ ರಾಜಸ, ತಾಮಸ ಶ್ರದ್ಧೆಯಿಂದ ಮಾಡಿದ ಕರ್ಮಗಳಲ್ಲಿ ಕ್ರಮವಾಗಿ ಶ್ರೀವಿಷ್ಣುವು ದೇವತೆಗಳಿಗೆ ಭೋಜನಮಾಡಿಸದೆ, ತಾನೂ ಉಣ್ಣದೆ, ಆಯಾ ಹೆಸರಿನ ಯಕ್ಷರಾಕ್ಷಸರಿಗೂ, ಭೂತಪ್ರೇತಾದಿಗಳಿಗೂ, ಭೋಜನಮಾಡಿಸಿ, ಸ್ವರ್ಗಕ್ಕಿಂತ ಕೀಳವಾದ ಸಾಂಕಲ್ಪಿಕ ಸ್ವರ್ಗವನ್ನೂ, ಭೂತಪ್ರೇತಾದಿ ಫಲಗಳನ್ನೂ, ಕೊಡುವನು. (೯–೨೫) ನೆಯ ಶ್ಲೋಕದಲ್ಲಿ ಇದನ್ನು ಕುರಿತು ಹೇಳಿದೆ. ಆದ್ದರಿಂದ ಸಾತ್ವಿಕಶ್ರದ್ಧೆಯಿಂದಲೇ ಭಕ್ತಿಪೂರ್ವಕವಾಗಿಯೂ, ಫಲಾಸಕ್ತಿರಹಿತವಾಗಿಯೂ, ವಿಹಿತಕರ್ಮವನ್ನೇ ಆಚರಿಸತಕ್ಕದ್ದು.

೫–೬. ತಾಮಸಶ್ರದ್ಧೆಯುಳ್ಳವರಿಗೆ ಪಿಶಾಚಭೂತಗಣಗಳ ಪ್ರಾಪ್ತಿಯಷ್ಟೇ ಅಲ್ಲದೆ ನರಕದ ಪ್ರಾಪ್ತಿಯೂ ಉಂಟೆಂಬುದನ್ನು ಮುಂದಿನ ಎರಡು ಶ್ಲೋಕಗಳಿಂದ ಹೇಳುವದು —

अशास्त्रविहितं घोरं तप्यन्ते ये तपो जनाः ।
दम्भाहंकारसंयुक्ताः कामरागबलान्विताः ॥ ५ ॥
कर्षयन्तः शरीरस्थं भूतग्राममचेतसः ।
मां चैवान्तःशरीरस्थं तान्विद्ध्यासुरनिश्चयान् ॥ ६ ॥

**ಅಂ—**ಸಚ್ಛಾಸ್ತ್ರವನ್ನು ಬಿಟ್ಟು, ಕುಶಾಸ್ತ್ರಗಳನ್ನಾಶ್ರಯಿಸಿ, ದಂಭ, ಅಹಂಕಾರದಿಂದಲೂ, ಕಾಮ, ರಾಗ, ಬಲಗಳಿಂದಲೂ, ಫಲಾಸಕ್ತಿಯ ಆಗ್ರಹದಿಂದಲೂ, ಯುಕ್ತರಾದ ಪ್ರಾಣಿಗಳು ಕಷ್ಟಸಾಧ್ಯವೂ, ಅವಿಹಿತವೂ ಆದ ತಪಸ್ಸನ್ನಾಚರಿಸುವರು, ಮತ್ತು ಶರೀರದಲ್ಲಿ ಅಂತರ್ಗತನಾಗಿರುವ ಲಕ್ಷ್ಮೀ ಮೊದಲಾದ ದೇವತಾಸಮೂಹವನ್ನೂ, ನನ್ನನ್ನೂ, ಅವಿವೇಕಿಗಳು ಕೀಳಾಗೆಣಿಸುವರು. ಇವರೇ ಅಸುರರೆಂದು ನಿಶ್ಚಯವಾಗಿ ತಿಳಿ, ಅಂದರೆ, ಅವರು ದೈತ್ಯರು, ರಾಕ್ಷಸರು, ಪಿಶಾಚರು ಎಂಬ ಅರ್ಥ. ಆದುದರಿಂದಲೇ ಅವರು ತಮೋಯೋಗ್ಯರು ಎಂಬ ಬಗ್ಗೆ ಸಂದೇಹವಿಲ್ಲ.

**ವಿಂ ಅಂ—**ಶರೀರದಲ್ಲಿ ಲಕ್ಷ್ಮೀ ಮೊದಲಾದ ದೇವತೆಗಳ ಇರುವಿಕೆಗಿಂತ ಪರಮಾತ್ಮನ ಇರುವಿಕೆಯು ವಿಲಕ್ಷಣವೆಂದು ಸೂಚಿಸುವದಕ್ಕಾಗಿ शरीरस्थ ಎಂಬ ಪದವನ್ನು ಮತ್ತೆ ಹಾಕಿದೆ. ಅಲ್ಪಗುಣಿಗಳು ಹೆಚ್ಚಿನ ಗುಣಿಗಳೆಂತಲೂ, ಹೆಚ್ಚಿನವರು ಅಲ್ಪಗುಣಿಗಳೆಂತಲೂ, ತಿಳಿಯುವ ಈ ಅವಿವೇಕಿಗಳು ಅಸುರರೆಂದು ತಿಳಿಯುವದಕ್ಕಾಗಿ 'ಅವಿವೇಕಿಗಳಾದ ತಾಮಸ ಜನರು' ಎಂದು ಸಾಮಾನ್ಯ ಶಬ್ದಪ್ರಯೋಗದಿಂದ ಅವರು ಅತಿನೀಚರೆಂದು ಸೂಚಿತವಾಗುವದು. ಹೀಗೆ ವಿಪರೀತ ಜ್ಞಾನವುಳ್ಳವರಾದುದರಿಂದ ಅವರಿಗೆ ನರಕಫಲವೇ ಯೋಗ್ಯವು. ದೇವತೆಗಳ ಆರಾಧನೆಯು ಶಾಸ್ತ್ರಕ್ಕನುಸರಿಸದೆ ಇದ್ದರೆ, ಅದು ಅಸುರವೇ ಹೊರ್ತು ಸಾತ್ವಿಕವಲ್ಲ. ಅವರು ಮಾಡುವ ತಪಶ್ಚರಣೆಯು ಅವರಿಗೂ,

ಅನ್ಯರಿಗೂ, ಪೀಡಕರವಿದ್ದರೆ, ಶಾಸ್ತ್ರಕ್ಕನುಸರಿಸಿದ್ದರೂ, ಅಸುರವೇ ಸೈ; ಅದನ್ನು ದಂಭಾಹಂಕಾರಗಳಿಂದ ಮಾಡಿದ್ದರೆ, ಶಾಸ್ತ್ರಾನುಸಾರವಿದ್ದರೂ, ಘೋರವಿರದಿದ್ದರೂ, ಅಸುರವೇ. ಇನ್ನು, ಪರಮಾತ್ಮನ ಹಾಗೂ ಅವನ ಪರಿವಾರದ ವಿಷಯವಾಗಿ ವಿಪರೀತ ಜ್ಞಾನದಿಂದ ಆಚರಿಸಲ್ಪಟ್ಟು ಶಾಸ್ತ್ರವಿಹಿತವಾಗಿದ್ದರೂ ಅದು ಅಸುರವೇ. ಆದರೆ, ಶಾಸ್ತ್ರಕ್ಕನುಗುಣವಾಗಿ ದೇವತಾರಾಧನೆ ನಡಿಸುವವರು ಸಾತ್ವಿಕರೆನಿಸುವರು; ಮೇಲೆ ತಾಮಸರನ್ನು ಕುರಿತು ಹೇಳಿದ ಭೂತಾದಿಗಣಗಳ ಪ್ರಾಪ್ತಿಯು ಅವಾಂತರ ಫಲವು, ಅವರಿಗೆ ನರಕವೇ ಮುಖ್ಯಫಲವು. ಆದುಕಾರಣ, ತಾಮಸಶ್ರದ್ಧೆಯನ್ನೆಂದೂ ಆಶ್ರಯಿಸಕೂಡದು.

೭. ಹಿಂದೆ ಶ್ರದ್ಧೆಯಲ್ಲಿರುವ ಸಾತ್ವಿಕಾದಿ ಪ್ರಭೇದಗಳೂ, ಅವುಗಳಿಗನುಸರಿಸಿದ ಸದಸತ್ಕರ್ಮಭೇದದಿಂದ ಸಾತ್ವಿಕಾದಿ ಸ್ವರೂಪವೂ, ಹೇಳಲ್ಪಟ್ಟವು. ಈಗ ಆಹಾರಾದಿ ಭೇದದಂತೆ ಅವುಗಳ ಲಕ್ಷಣವನ್ನು ಮುಂದಿನ ಏಳು ಶ್ಲೋಕಗಳಿಂದ ಹೇಳಿದ್ದು :—

**आहारस्त्वपि सर्वस्य त्रिविधो भवति प्रियः ।**
**यज्ञस्तपस्तथा दानं तेषां भेदमिमं शृणु ॥ ७ ॥**

**ಅಂ**—ಆಹಾರಗಳು ಕೂಡ ಸತ್ವಾದಿಗುಣಗಳಿಗನುಸರಿಸಿ ಆಯಾ ಸ್ವರೂಪದವರಿಗೆ ಪ್ರಿಯವಾಗಿವೆ. ಅದೇಮೇರೆಗೆ, ಅವರು ಮಾಡುವ ಯಜ್ಞ, ತಪ, ದಾನಗಳಲ್ಲಿಯೂ ಭೇದಗಳುಂಟು. ಅವನ್ನೀಗ ವಿಸ್ತರಿಸುವೆನು, ಕೇಳು,

**ವಿಂ ಅಂ**—ಸತ್ವಾದಿ ಮೂರು ಬಗೆಯ ಪ್ರಾಣಿಗಳ ಆಹಾರವೆಂದರೆ, ಭೋಜನಮಾಡುವ ಅನ್ನಾದಿಗಳು, ಅವರು ಮಾಡುವ ಯಜ್ಞ, ತಪಸ್ಸು, ದಾನ ಇವೆಲ್ಲವೂ ಆಯಾ ಗುಣಗಳಂತೆ ಮೂರು ವಿಧಕ್ಕೊಳಪಟ್ಟಿವೆ. ಈ ಲಕ್ಷಣಗಳಿಂದಲೇ ಸಾತ್ವಿಕಾದಿಗಳನ್ನು ತಿಳಿಯತಕ್ಕದ್ದು; ಅರ್ಜುನಾ, ನೀನು ರಾಜಸ–ತಾಮಸ ಶ್ರದ್ಧೆಗಳನ್ನಳಿದು, ಸಾತ್ವಿಕಶ್ರದ್ಧೆಯನ್ನೇ ಸಂಪಾದಿಸಲು ಯತ್ನಿಸಬೇಕು. ಇಲ್ಲಿ ತು ಶಬ್ದದಿಂದ ಆಹಾರವು ಅಂತಃಕರಣದ ಶುದ್ಧಿ–ಅಶುದ್ಧಿಗಳಿಗೆ ಮೂಲಕಾರಣವಾದುದರಿಂದ ಯಜ್ಞ, ದಾನ, ತಪಸ್ಸುಗಳಲ್ಲಿಯೂ ಸಾತ್ವಿಕಾದಿ ಭೇದಗಳಾಗಿಯೇ ತೀರುವವು ಎಂಬ ವಿಶೇಷ ಅರ್ಥವು ಸೂಚಿಸಲ್ಪಡುವದು. ಅಂತೆಯೇ, ಆಹಾರದಿಂದಾಗುವ ಭೇದಗಳು ಮೊದಲು ಹೇಳಲ್ಪಟ್ಟಿವೆ.

೮. ಇನ್ನು, ಆಹಾರಗಳ ಮೂಲಕ ಸಾತ್ವಿಕಾದಿ ಭೇದಗಳನ್ನು ಮೂರು ಶ್ಲೋಕಗಳಿಂದ ನಿರೂಪಿಸಿದ್ದು :—

**आयुःसत्त्वबलारोग्यसुखप्रीतिविवर्धनाः ।**
**रस्याः स्निग्धाः स्थिरा हृद्या आहाराः सात्त्विकप्रियाः ॥ ८ ॥**

**ಅಂ**—ಜೀವನ, ಸಾಧುತ್ವ (ಸಾತ್ವಿಕ ವಸ್ತುಗಳ ಸೇವನೆಯಿಂದ ಅಂತಃಕರಣವು ಶುದ್ಧವಾಗುವದು ) ಶಕ್ತಿ, ಆರೋಗ್ಯ, ಒಮ್ಮೆ ಅನುಭವಿಸಿದರೂ ಬಹುಕಾಲ ಬಾಳುವ ಸುಖ, ಭೋಗಕಾಲದ ಸುಖ, ಇವುಗಳನ್ನೆಲ್ಲ ಹೆಚ್ಚಿಸುವದರಲ್ಲಿ ಮುಖ್ಯವಾಗಿರುವ ಪದಾರ್ಥಗಳು ಯಾವುವೆಂದರೆ, ರಸಯುಕ್ತ ಸ್ನಿಗ್ಧ, ಬಹುಕಾಲದವರೆಗೆ ಗುಣಕೊಡುವ ತುಪ್ಪ ಮುಂತಾದವುಗಳು, ಒಮ್ಮೆ ಅನುಭವಿಸಿದರೂ ತಿರುತಿರುಗಿ ಬೇಕೆನಿಸುವ ಮಧುರವಾದ ಆಹಾರಗಳು, ಇವು ಸಾತ್ವಿಕರಿಗೆ ಪ್ರಿಯವಾದವುಗಳು. 'ಆಯುಷ್ಯವನ್ನು ಬೆಳೆಸುವವೆಂದು' ಹೇಳಿದ್ದರಿಂದ ಅವು ವಿಪರೀತವಾಗಿದ್ದರೆ, ರಸ್ಯಾದಿ ಪದಾರ್ಥಗಳು ಕೂಡ ರಾಜಸವಾಗುವವೆಂದು ತಿಳಿಯತಕ್ಕದ್ದು.

೯.

कट्वम्ललवणात्युष्णतीक्ष्णरूक्षविदाहिनः ।
आहारा राजसस्येष्टा दुःखशोकामयप्रदाः ॥ ९ ॥

**ಅಂ**—ರಾಜಸರಿಗೆ ಖಾರ, ( ಮೆಣಸಿನಕಾಯಿ ಇಂ ), ಆಮ್ಲ ( ಹುಣಸಿ, ನೀಲರಲ ರಸ ), ಉಪ್ಪು, ಅತಿ ಉಷ್ಣ, ಅತಿ ತೀಕ್ಷ್ಣ (ಸಾಸಿವೆ ಮುಂ), ರಸವಿಲ್ಲದ, ಕರಿದ ( ಎದೆ ಸುಡುವ ) ಆಹಾರಗಳು ಪ್ರಿಯವಾದವುಗಳು. ಇವು ದುಃಖ, ಮನೋದೌರ್ಬಲ್ಯ, ರೋಗ, ಇವುಗಳನ್ನು ಹುಟ್ಟಿಸುವವು. ಇಲ್ಲಿ 'ದುಃಖಾದಿಗಳನ್ನು ಕೊಡುವವು' ಎಂದು ಹೇಳಿದ್ದರಿಂದ, ಅವುಗಳಲ್ಲಿ ಆ ಗುಣವಿರದಿದ್ದರೆ, ಅವೇ ಆಹಾರಗಳು ಸಾತ್ವಿಕವೆಂದು ತಿಳಿಯಬೇಕು. ಇಂಥ ಆಹಾರಸೇವನೆಯೇ ರಾಜಸರ ಲಕ್ಷಣವೆಂದು ತಿಳಿಯಬೇಕು.

೧೦.

यातयामं गतरसं पूति पर्युषितं च यत् ।
उच्छिष्टमपि चामेध्यं भोजनं तामसप्रियम् ॥ १० ॥

**ಅಂ**— ಮೂರು ತಾಸುಗಳೆದ, ಮೊದಲು ರಸವುಳ್ಳದ್ದಿದ್ದು ಬಳಿಕ ನೀರಸವಾದ, ಹೊಲಸು ನಾರುವ, ಹಳಸಿದ, ಎಂಜಲದ, ಅಪವಿತ್ರವಿರುವ, ಆಹಾರವು ತಾಮಸರಿಗೆ ಪ್ರಿಯವು. ಪದಾರ್ಥಗಳ ಸ್ವಾದುತ್ವವು ಪ್ರಾಣಿಗಳ ರುಚಿಭೇದದಿಂದ ಭಿನ್ನವಾಗಿದ್ದರೂ, ಇಲ್ಲಿ ಶುದ್ಧಭಾಗವತ ಸ್ವಭಾವಕ್ಕನುಸರಿಸಿ, ಸಾತ್ವಿಕಾದಿ ಎಂದು ತಿಳಿಯತಕ್ಕದ್ದು.

**ವಿಂ ಅಂ**—ದೇಶಭೇದದಿಂದ ಮಧುರ, ಕಟು, ರಸಗಳು ಹೆಚ್ಚಾಗಿಯುಳ್ಳ ಆಹಾರವು ಎಲ್ಲರಿಗೂ ಪ್ರಿಯವಾದರೂ, ಆಯಾ ದೇಶಗಳನ್ನು ಬಿಟ್ಟು, ಅನ್ಯದೇಶಗಳಲ್ಲಿಯ ಜನರು ಭಕ್ಷಿಸುವ ಆಹಾರಕ್ಕನುಸರಿಸಿ, ರಸ್ಯತ್ವ, ಕಟುತ್ವ, ಎಂದು ತಿಳಿಯಬೇಕು. 'ಆಯುಷ್ಯ—ಬಲ—ಆರೋಗ್ಯಾದಿಗಳನ್ನು ಬೆಳಿಸುವ' ಎಂಬ ವಿಶೇಷಣದಿಂದಲೂ, 'ದುಃಖದಾಯಕ' ಎಂಬ ವಿಶೇಷಣದಿಂದಲೂ, ರಸ್ಯತ್ವವಿದ್ದಾಗ್ಯೂ ರಸವಿಲ್ಲದ್ದು ಸಾತ್ವಿಕವೆನಿಸುವದು; ಮತ್ತು ಅತಿಕಟುವಿಲ್ಲದ್ದು ರಾಜಸವೆನಿಸುವದು. ಆದ್ದರಿಂದ ರಸಾಯನವೆಂದು ಅತಿಕಟು ಪದಾರ್ಥವನ್ನು ಸ್ವೀಕರಿಸಿದರೂ, ಅದು ರಾಜಸವೆನಿಸುವದು. ಅರ್ಜುನಾ, ಅಂತೆಯೇ ಅಸುರ, ತಾಮಸ, ಆಹಾರಗಳನ್ನು ಬಿಟ್ಟು ಸಾತ್ವಿಕ ಆಹಾರವನ್ನೇ ಸೇವಿಸು. ಅದರಿಂದ ಮೇಲೆ ಹೇಳಿದಂತೆ, ಆಯುಷ್ಯ ಮೊದಲಾದವುಗಳು ಬೆಳೆಯುವವು.

೧೧. ಸಾತ್ವಿಕಾದಿ ಭೇದಗಳಿಂದ ಯಜ್ಞದಲ್ಲಿ ಭೇದಹೇಳಿದ್ದು:—

अफलाकाङ्क्षिभिर्यज्ञो विधिदृष्टो य इज्यते ।
यष्टव्यमेवेति मनः समाधाय स सात्त्विकः ॥ ११ ॥

**ಅಂ**—ಫಲಾಸಕ್ತಿಯನ್ನು ತೊರೆದು ಭಗವದಾರಾಧನೆಗಾಗಿ ವಿಧಿಗನುಸಾರವಾಗಿ ಮಾಡತಕ್ಕದ್ದೆಂಬ ಮನೋನಿಶ್ಚಯದಿಂದ ಮಾಡಿದ ಯಜ್ಞವು ಸಾತ್ವಿಕವು.

೧೨.

अभिसंधाय तु फलं दम्भार्थमपि चैव यत् ।
इज्यते भरतश्रेष्ठ तं यज्ञं विद्धि राजसम् ॥ १२ ॥

ಅಂ—ಭರತಕುಲಶ್ರೇಷ್ಠನೇ, ಫಲಾಸಕ್ತಿಯಿಂದಲೂ, ಆತ್ಮಪ್ರೌಢಿಮೆಗಾಗಿಯೂ, ಮಾಡಿದ ಯಜ್ಞವು ರಾಜಸವು.

ವಿಂ ಅಂ—ಫಲೋದ್ದೇಶದಿಂದಲೇ ಮಾಡಿದ ಯಜ್ಞವು ರಾಜಸವು; ಅದಿರದಿದ್ದರೂ, ತಾನು ಮಹಾ ಧಾರ್ಮಿಕನೆಂದು ತೋರಿಸಲು ಮಾಡಿದ ಯಜ್ಞವೂ ರಾಜಸವು. ಫಲೋದ್ದೇಶದಿಂದಲೂ, ಧಾರ್ಮಿಕನೆಂದು ತೋರಿಸಲು ಮಾಡಿದ ಯಜ್ಞವು ಕೂಡ ರಾಜಸವು. ಇಲ್ಲಿ ಚ, ಏವ, ಇವೆರಡು ನಿಪಾತಗಳ ಪ್ರಯೋಗದಿಂದ ರಾಜಸದಲ್ಲಿ ಮೂರು ಭೇದಗಳುಂಟೆಂದು ಸೂಚಿತವಾಗುವದು.

೧೩.

विधिहीनमसृष्टान्नं मन्त्रहीनमदक्षिणम् ।
श्रद्धाविरहितं यज्ञं तामसं परिचक्षते ॥ १३ ॥

ಅಂ—ಶಾಸ್ತ್ರವಿಧಿವಿರುದ್ಧ, ಬ್ರಾಹ್ಮಣರಿಗೆ ಅರ್ಪಿಸದ, ಮಂತ್ರರಹಿತ, ದಕ್ಷಿಣಾರಹಿತ, ಶ್ರದ್ಧೆಯಿಲ್ಲದ ಯಜ್ಞವು ತಾಮಸವೆನಿಸುವದು. ಈ ಶ್ಲೋಕದಲ್ಲಿ ತಾಮಸ ಯಜ್ಞಕ್ಕೆ ವಿಶೇಷಣಗಳು ಹೇಳಲಾಗಿವೆ ಅವುಗಳಲ್ಲಿ ಒಂದೊಂದು ಯಜ್ಞಕ್ಕೆ ವಿಶೇಷಣವೆಂದು ತಿಳಿದರೆ, ಆ ಯಜ್ಞದಲ್ಲಿ ಐದು ವಿಧಗಳುಂಟೆಂದು ಕಂಡುಬರುವದು. ಆ ಐದು ವಿಶೇಷಣಗಳನ್ನು ಕೂಡಿಸಿ ಹೇಳಿದರೆ, ಅದರಲ್ಲಿ ಮತ್ತೊಂದು ವಿಧ ಉಂಟೆಂದು ತಿಳಿಯುವದು, ಮತ್ತು ೨, ೩, ೪ ನೆಯ ವಿಶೇಷಣಗಳನ್ನು ಕೂಡಿಸಿ ಹೇಳಿದರೆ, ಅದರಲ್ಲಿ ಅನೇಕ ವಿಧಗಳುಂಟೆಂದು ವ್ಯಕ್ತವಾಗುವದು.

೧೪. ಹಿಂದೆ ಪ್ರತಿಜ್ಞೆ ಮಾಡಿದಂತೆ, ಸಾತ್ವಿಕಾದಿ ಭೇದಗಳನ್ನು ಹೇಳುವದಕ್ಕಾಗಿ ಶರೀರಾದಿ ಭೇದದಿಂದ ತಪಸ್ಸಿನಲ್ಲಿ ಮೂರು ವಿಧಗಳನ್ನು ಹೇಳಿದ್ದು:—

देवद्विजगुरुप्राज्ञपूजनं शौचमार्जवम् ।
ब्रह्मचर्यमहिंसा च शारीरं तप उच्यते ॥ १४ ॥

ಅಂ—ದೇವ, ಬ್ರಾಹ್ಮಣ, ಗುರು, ತತ್ವಜ್ಞ, ಮುಂತಾದವರ ಯೋಗ್ಯತೆಗನುಸರಿಸಿ ಪೂಜೆ, ಬಾಹ್ಯಾಂತರಂಗ ಶುದ್ಧಿ, ವಿಹಿತ ಕರ್ಮದಲ್ಲಿ ದೇಹಾನುಕೂಲತೆ, ಬ್ರಹ್ಮಚರ್ಯ ಮತ್ತು ಅಹಿಂಸೆ ಇವುಗಳು ಶಾರೀರಿಕ ತಪಸ್ಸುಗಳೆನಿಸುವವು.

ವಿಂ ಅಂ—ಅರ್ಜುನಾ, ತಪಸ್ಸಿನಲ್ಲಿ ಸಾತ್ವಿಕಾದಿ ಭೇದಗಳನ್ನು ಹೇಳುವೆ. ಮೊದಲು ಅನ್ಯವಿಧದಿಂದ ತಪಸ್ಸಿನಲ್ಲಿ ಹೇಳುವ ಭೇದಗಳನ್ನು ಕೇಳು. ದೇವರು, ಬ್ರಾಹ್ಮಣರು, ತಾಯಿತಂದೆಗಳು, ಆಚಾರ್ಯರು, ತತ್ವಜ್ಞರಾದ ಪಂಡಿತರು ಈ ಮುಂತಾದವರಿಗೆ ನಮಸ್ಕಾರ, ಶುಶ್ರೂಷಾದಿ ಸತ್ಕಾರ, ಮಣ್ಣು—ನೀರಿನಿಂದಲೂ, ತೀರ್ಥಸ್ನಾನದಿಂದಲೂ, ದೇಹಶುದ್ಧಿಯು, ಬ್ರಹ್ಮಚಾರಿ ಮತ್ತು ಯತಿಗಳು ಭೋಗದೃಷ್ಟಿಯಿಂದ ಸ್ತ್ರೀಯರನ್ನು ನೋಡದಿರುವದು, ಗೃಹಸ್ಥರು, ವಾನಪ್ರಸ್ಥರು ನಿಷಿದ್ಧಕಾಲಗಳಲ್ಲಿ ಸ್ತ್ರೀಭೋಗವನ್ನಾಚರಿಸದಿರುವದು, ಭೋಗಬುದ್ಧಿಯಿಂದ ಅವರನ್ನು ನೋಡದಿರುವದು, ಕೈಕಾಲುಗಳಿಂದ ಅನ್ಯರನ್ನು ಪೀಡಿಸದಿರುವದು; ಇವುಗಳೆಲ್ಲ ಶರೀರಸಾಧ್ಯವಾದ ತಪಸ್ಸುಗಳು. ಸಕಲ ಕರ್ಮವು ಅಧಿಷ್ಠಾನ, ಕರ್ತೃ, ಸಾಧನ, ಚೇಷ್ಟೆ, ದೈವಗಳೆಂಬ ಐದು ಕಾರಣಗಳಿಂದ ಸಾಧ್ಯವಾಗಿದ್ದರೂ, [ ಈ ವಿಷಯಕ್ಕೆ ಮುಂದೆ (೧೮—೧೫) ಶ್ಲೋಕದಲ್ಲಿ ಹೇಳಲ್ಪಡುವದು ] ಆ ಐದರಲ್ಲಿ 'ಸಾಧನ' ಶಬ್ದದಿಂದ ಹೇಳಿದ ಮತ್ತು ಸಾಧನಕೋಟಿಯಲ್ಲಿ ಸೇರಿದ ಶರೀರವು ತಪಸ್ಸಿಗೆ ಶ್ರೇಷ್ಠವಾದ್ದರಿಂದ ಆ ತಪಸ್ಸು ಶರೀರ ಸಂಬಂಧ ತಪಸ್ಸೆನಿಸುವದು. 'ಬ್ರಾಹ್ಮಣರಲ್ಲದೆ ವಿದ್ವಾಂಸರು ' ಎಂದು ಬೇರೆ ಹೇಳಿದ್ದರಿಂದ ಅನೇಕ

ಜನ್ಮಗಳಲ್ಲಿ ಸಂಗ್ರಹಿಸಿದ ಪುಣ್ಯವು ಪಕ್ವವಾಗಿ, ಅದರಿಂದ ಪರಮಾತ್ಮನ ಅನುಗ್ರಹವನ್ನು ಪಡೆದ ಬ್ರಾಹ್ಮಣರಲ್ಲದ ಅನ್ಯರೂ ಪೂಜ್ಯರೆಂದು ಸೂಚಿತವಾಗುವದು. ಇದು ವಿದುರ, ಧರ್ಮವ್ಯಾಧ, ಮುಂತಾದವರಲ್ಲಿ ಕಂಡು ಬರುವದು. ಅವರು ಬ್ರಾಹ್ಮಣರಿರದಿದ್ದರೂ, ಪೂಜ್ಯರೇ ಸರಿ. 'ಗುರುಗಳಲ್ಲದೆ ವಿದ್ವಾಂಸರೂ' ಎಂದು ಬೇರೆ ಹೇಳಿದ್ದರಿಂದ ಗುರುತ್ವವಿಲ್ಲದಿದ್ದರೂ, ವಿದ್ವತ್ತೆಯು ಹೆಚ್ಚುಗಾರಿಕೆಯಿಂದಲೇ ಅವರು ಪೂಜ್ಯರೆಂದು ಸೂಚಿಸಲಾಯಿತು.

೧೫.

अनुद्वेगकरं वाक्यं सत्यं प्रियहितं च यत् ।
स्वाध्यायाभ्यसनं चैव वाङ्मयं तप उच्यते ॥ १५ ॥

ಅ೦—ಅನ್ಯರಿಗೆ ಹೆದರಿಸದ, ಯಥಾರ್ಥ, ತಿರುತಿರುಗಿ ಕೇಳುವ ಆಪೇಕ್ಷೆಯನ್ನುಂಟುಮಾಡುವ, ಕೆಲವು ಕಾಲನಂತರ ಸುಖಕೊಡುವಂಥ ಮಾತನಾಡುವದು, ಮತ್ತು ವೇದಕ್ಕನುಸರಿಸಿ ಮಹನೀಯರು ಮಾಡಿದ ಗ್ರಂಥ, ಪರಮಾತ್ಮನ ಮಹಿಮೆಯನ್ನು ಪ್ರತಿಪಾದಿಸುವ ಶಾಸ್ತ್ರ, ಇವುಗಳನ್ನು ಆಗಾಗ್ಗೆ ಓದುತ್ತಿರುವದು, ಬ್ರಹ್ಮಯಜ್ಞ, ಜಪಯಜ್ಞ, ಇವೆಲ್ಲ ವಾಚನಿಕತಪಸ್ಸು. ಈ ತಪಸ್ಸಿನಲ್ಲಿ ವಾಕ್ಕು ಪ್ರಧಾನವಾದ್ದರಿಂದ ಅದಕ್ಕೆ ವಾಚನಿಕ ತಪಸ್ಸೆಂದು ಹೆಸರು. ಇಲ್ಲಿ ವಿಶೇಷವೇನಂದರೆ, ಶ್ಲೋಕದಲ್ಲಿ ತಪಸ್ಸಿಗೆ ಹೇಳಿದ ನಾಲ್ಕು ವಿಶೇಷಣಗಳಿಂದ ಯುಕ್ತವಾದ ವಾಕ್ಯವೇ ವಾಚನಿಕತಪಸ್ಸು, ಹೊರ್ತು ಒಂದು ಅಥವಾ ಎರಡು, ಅಥವಾ ಮೂರು ವಿಶೇಷಣಗಳಿಂದ ಯುಕ್ತವಾದ ವಾಕ್ಯವಲ್ಲೆಂದು ತಿಳಿಯಬೇಕು.

೧೬.

मनःप्रसादः सौम्यत्वं मौनमात्मविनिग्रहः ।
भावसंशुद्धिरित्येतत्तपो मानसमुच्यते ॥ १६ ॥

ಅ೦—ಮನಸ್ಸಿನ ಪ್ರಸಾದವೆಂದರೆ, ವಿಷಯುಗಳಲ್ಲಿ ಪ್ರಯಾಸವಿಲ್ಲದ ಪ್ರವೃತ್ತಿಯು; ಅಥವಾ ರಾಗದ್ವೇಷಾದಿ ಮಲಗಳಿಲ್ಲದಿರುವದು, ಸೌಮ್ಯತ್ವವೆಂದರೆ, ಕ್ರೂರತನವಿಲ್ಲದಿರುವದು, ಮೌನ ಎಂದರೆ, ಮನನಶೀಲತೆಯು; ಆತ್ಮನಿಗ್ರಹವೆಂದರೆ, ಮನಸ್ಸನ್ನು ಪೂರ್ಣವಾಗಿ ಪರಮಾತ್ಮನಲ್ಲಿಡುವದು ಅಥವಾ ಮನೋನಿಗ್ರಹ, ಅಂತಃಕರಣ ಶುದ್ಧಿ ಅಂದರೆ, ವಿವಿಧ ಕಾಮನಾಗಳಿಲ್ಲದಿರುವದು, ಇವೇ ಮಾನಸಿಕ ತಪಸ್ಸುಗಳೆನಿಸುವವು. ಈ ತಪಸ್ಸಿನಲ್ಲಿ ಮನಸ್ಸೇ ಮುಖ್ಯವಾದುದರಿಂದ ಮಾನಸಿಕತಪಸ್ಸೆನಿಸುವದು

೧೭. ಇನ್ನು, ಸಾತ್ವಿಕಾದಿ ತಪೋಭೇದದಿಂದ ಸಾತ್ವಿಕಾದಿ ಜೀವಭೇದಗಳನ್ನೂ ಮುಂದಿನ ಮೂರು ಶ್ಲೋಕಗಳಿಂದ ಹೇಳಿದ್ದು:—

श्रद्धया परया तप्तं तपस्तत्त्रिविधं नरैः ।
अफलाकाङ्क्षिभिर्युक्तैः सात्त्विकं परिचक्षते ॥ १७ ॥

ಅ೦—ಪೂರ್ಣ ಶ್ರದ್ಧೆಯಿಂದ ಮೂರು ವಿಧದ ಜೀವರಾಶಿಗಳು ಆಚರಿಸುವ ಮತ್ತು ಹಿಂದೆ ಹೇಳಿದ ಶರೀರಾದಿ ಭೇದದಿಂದ ಮೂರು ವಿಧದ ತಪಸ್ಸು ಮತ್ತೆ ಸಾತ್ವಿಕಾದಿ ಭೇದದಿಂದ ಮೂರು ವಿಧವಾಗಿದೆ. ಅವು ಯಾವುವೆಂದರೆ, ಫಲಾಸಕ್ತಿಯಿಲ್ಲದೆ ಕೇವಲ ಪರಮಾತ್ಮನ ಆರಾಧನೆಗಾಗಿ ಮಾಡಿದ ತಪಸ್ಸು ಸಾತ್ವಿಕವೆನಿಸುವದು.

೧೮.

सत्कारमानपूजार्थं तपो दंभेन चैव यत् ।
क्रियते तदिह प्रोक्तं राजसं चलमध्रुवम् ॥ १८ ॥

**ಅಂ—** ಮನಸ್ಸಿನಿಂದ ಆದರ, ಮನಸುವಾಣಿಗಳಿಂದ ಶ್ಲಾಘನೆ, ಮತ್ತು ಸತ್ಕಾರ ಇವುಗಳ ಪ್ರಾಪ್ತಿಗಾಗಿ ದಂಭ ಅಥವಾ ಸ್ವಂತ ದೊಡ್ಡಸ್ತಿಕೆಗಾಗಿ ಆಚರಿಸಿದ ತಪಸ್ಸು ಈ ಲೋಕದಲ್ಲಿ ರಾಜಸ ವೆನಿಸುವದು; ಅದು ಭ್ರಷ್ಟಗೊಳಿಸಲು ಕಾರಣವಾಗಿದ್ದು ಅಶಾಶ್ವತವಾಗಿದೆ.

**ವಿಂ ಅಂ**—ಇವನು ತಪಸ್ವಿ ಎಂದು ಮನಸ್ಸಿನಿಂದ ಆದರ, ವಾಣಿಯಿಂದ ಶ್ಲಾಘನೆ, ಭಕ್ತಿಯಿಂದ ಸತ್ಕಾರ, ಇವುಗಳನ್ನು ಅನ್ಯರು ಹೊಗಳಬೇಕೆಂದು ಸ್ವಂತ ದೊಡ್ಡಸ್ತಿಕೆಯನ್ನು ಮೆರೆಯಿಸಲು ಮಾಡಿದ ತಪಸ್ಸು ಇಹಲೋಕದಲ್ಲಿಯೂ, ಸ್ವರ್ಗಲೋಕದಲ್ಲಿಯೂ, ರಾಜಸವೆನಿಸುವದು; ಅದು ಅನಿತ್ಯಫಲವುಳ್ಳದ್ದಿದ್ದು, ಮನಸ್ಸಿನ ಚಂಚಲತೆಗೂ ಕಾರಣವಾಗಿದೆ.

೧೯.

मूढग्राहेणात्मनो यत्पीडया क्रियते तपः ।
परस्योत्सादनार्थं वा तत्तामसमुदाहृतम् ॥ १९ ॥

**ಅಂ—**ಅವಿವೇಕಪೂರ್ಣದುರಾಗ್ರಹದಿಂದ ತನ್ನ ಅಥವಾ ಶತ್ರುಗಳ ನಾಶಕ್ಕಾಗಿ ಮಾಡಿದ ತಪಸ್ಸು ತಾಮಸವು.

**ವಿಂ ಅಂ—**'ಪರಮಶ್ರದ್ಧೆಯಿಂದ' ಎಂದು ಹೇಳಿದ್ದರಿಂದ ಶ್ರದ್ಧೆ ಇಲ್ಲದಿದ್ದರೆ, ಅದು ತಪಸ್ಸಾಗಲಾರದೆಂದು ಹೇಳಿದಂತಾಯಿತು. ಇಲ್ಲಿ ಸಾತ್ವಿಕಾದಿ ಭೇದಗಳಿಂದ ಕಾಯಿಕ, ವಾಚಿಕ ತಪಸ್ಸುಗಳಲ್ಲಿ ಮೂರು ವಿಧಗಳು ಸಂಭವಿಸುವವು; ಅಂದರೆ ಮಾನಸಿಕ ತಪಸ್ಸಿನಲ್ಲಿ ಅವು ಇರಲಾರವು. ಏಕೆಂದರೆ, ಮನಃಪ್ರಸಾದ, ಸೌಮ್ಯತ್ವ, ಮೌನತ್ವ, ಆತ್ಮವಿನಿಗ್ರಹ, ಅಂತಃಕರಣಶುದ್ಧಿ, ಇವುಗಳುಳ್ಳವರಿಗೆ ಸತ್ಕಾರಾದಿಗಳ ಅಪೇಕ್ಷೆ ಇರದು. ದಂಭವುಳ್ಳವರಲ್ಲಿ ಆತ್ಮಪೀಡೆ, ಶತ್ರುಗಳ ನಾಶವಾಗಬೇಕೆಂಬ ಬಗ್ಗೆ ಪ್ರವೃತ್ತಿ ಇರದು. ಮೌನವು ವಾಕ್‍ಸಂಯಮನರೂಪವಾದುದರಿಂದಲೂ, ಆತ್ಮನಿಗ್ರಹವು ಕೇವಲ ಮನೋನಿಗ್ರಹರೂಪವಾದ್ದರಿಂದಲೂ, ಸೌಮ್ಯತ್ವ, ಮೌನ, ಆತ್ಮನಿಗ್ರಹವೆಂಬ ಮಾನಸತಪಸ್ಸಿನಲ್ಲಿ ರಾಜಸ–ತಾಮಸಗಳೆಂಬ ಎರಡು ಭೇದಗಳೇ ಮಾತ್ರ ಸಂಭವಿಸುವವು. ಶರೀರಸಂಬಂಧವಾದ ಮೂರು ವಿಧದ ತಪಸ್ಸುಗಳಲ್ಲಿಯೂ ರಾಜಸ–ತಾಮಸಭೇದಗಳನ್ನು ಬಿಟ್ಟು, ಮೂರು ಬಗೆಯ ಸಾತ್ವಿಕ ತಪಸ್ಸನ್ನೇ ಆಚರಿಸಿ ಸಾತ್ವಿಕತ್ವವನ್ನು ಹೊಂದಬೇಕು.

೨೦. ಹಿಂದೆ ಪ್ರತಿಜ್ಞೆಮಾಡಿದ ಮೇರೆಗೆ, ದಾನಭೇದದಿಂದ ಸಾತ್ವಿಕಾದಿಭೇದಗಳನ್ನು ಮೂರು ಶ್ಲೋಕಗಳಿಂದ ಹೇಳಿದ್ದು:—

दातव्यमिति यद्दानं दीयतेऽनुपकारिणे ।
देशे काले च पात्रे च तद्दानं सात्त्विकं स्मृतम् ॥ २० ॥

**ಅಂ—** ಕೊಡತಕ್ಕದ್ದೆಂಬ ಆಸ್ತಿಕಬುದ್ಧಿಯಿಂದ, ಪರೋಪಕಾರವನ್ನಪೇಕ್ಷಿಸದ, ಸತ್ಪಾತ್ರ, ಪುಣ್ಯದೇಶ, ಪುಣ್ಯಕಾಲಗಳಲ್ಲಿ ಮಾಡಿದ ದಾನವು ಸಾತ್ವಿಕವೆಂದು ಮಹನೀಯರ ಮತ.

ವಿಂ ಅಂ—ವಿದ್ಯೆತಪಸ್ಸುಗಳ ತೇಜದಿಂದ ತನ್ನನ್ನೂ, ದಾನಕೊಡುವವನನ್ನೂ, ರಕ್ಷಿಸಲು ಸಮರ್ಥನಾದವನಿಗೆ ಮಾಡಿದ ದಾನವು ಸಾತ್ವಿಕವೆನಿಸುವದು; ಏಕೆಂದರೆ, ದಾನಸ್ವೀಕರಿಸಿದ ಗುಣಹೀನ ಬ್ರಾಹ್ಮಣನು ತನ್ನನ್ನು ತಾನು ನಾಶಪಡಿಸುವನಲ್ಲದೆ, ಕೊಡುವವನನ್ನೂ ರಕ್ಷಿಸಲು ಸಮರ್ಥನಾಗಲರಿಯನು. ದೇಶಕಾಲಗಳಿಗಿಂತ ಪಾತ್ರದ ಯೋಗ್ಯತೆಯೇ ಮೇಲು ಎಂದು ತೋರಿಸಲು, ಇಲ್ಲಿ 'ಪಾತ್ರ' ಶಬ್ದವು ಕೊನೆಗೆ ಬಂದಿದೆ. ದೇಶ, ಕಾಲ, ಪಾತ್ರಗಳನ್ನು ಒತ್ತಟ್ಟಿಗೆ ಹೇಳಿದ್ದರಿಂದ, ದಾನಸ್ವೀಕರಿಸುವ ಪಾತ್ರಕ್ಕೆ ಅನುಕೂಲವಾಗುವ ದೇಶಕಾಲಗಳಲ್ಲಿ ಮಾಡಿದ ದಾನವು ಕೂಡ ಸಾತ್ವಿಕವೆನಿಸುವದು. ಪಾತ್ರವು ಪ್ರಾಪ್ತವಾಗಿರಲು, 'ಪುಣ್ಯಸ್ಥಾನದಲ್ಲಿ ಪುಣ್ಯಕಾಲದಲ್ಲಿ ಮಾಡುವೆ; ಅಲ್ಲಿ ನೀನು ಬಂದು ದಾನಸ್ವೀಕರಿಸು' ಎಂದು ಹೇಳುವದು ಯೋಗ್ಯವಾಗದು. ಏಕೆಂದರೆ, ಯಾವ ದೇಶದಲ್ಲಿ, ಯಾವ ಕಾಲದಲ್ಲಿ, ಪಾತ್ರವು ಪ್ರಾಪ್ತವಾಗಿರುವದೋ ಅದೇ ಪುಣ್ಯಕಾಲ, ಪುಣ್ಯತಿಥಿ ಎನಿಸುವದು; ಇದೇ ಸಾತ್ವಿಕದಾನದ ಲಕ್ಷಣವಾಗಿದೆ.

೨೧.

यत्तु प्रत्युपकारार्थं फलमुद्दिश्य वा पुनः ।
दीयते च परिक्लिष्टं तद्दानं राजसं स्मृतम् ॥ २१ ॥

ಅಂ—ಅನ್ಯಾಯದಿಂದ ಗಳಿಸಿದ ದ್ರವ್ಯವನ್ನು ಪ್ರತ್ಯುಪಕಾರಾಪೇಕ್ಷೆಯಿಂದ ಅಥವಾ ಫಲಾಸಕ್ತಿಯಿಂದ ಕೊಡುವದು ರಾಜಸದಾನವೆನಿಸುವದು.

ವಿಂ ಅಂ—ಇದನ್ನು ಇವನಿಗೆ ದಾನಮಾಡಿದರೆ, ಮುಂದೆ ಯಾವಾಗಾದರೂ ಅವನು ಉಪಕಾರ ಮಾಡುವನೆಂಬ ಪ್ರತ್ಯುಪಕಾರಬುದ್ಧಿಯಿಂದ ಅಥವಾ ಐಹಿಕಾಮುಷ್ಮಿಕಫಲೋದ್ದೇಶದಿಂದ ಮನದಲ್ಲಿ ಕೊರಗುತ್ತ ಮಾಡಿದ ದಾನವು ರಾಜಸವು. ಸಾತ್ವಿಕದಾನಕ್ಕಿಂತ ರಾಜಸದಾನವು ಕೀಳವೆಂದು ಸೂಚಿಸುವದಕ್ಕಾಗಿ ಇಲ್ಲಿ ತು ಶಬ್ದವುಂಟು, ಪುನಃ ಶಬ್ದವು ಸಮುಚ್ಚಯಾರ್ಥವನ್ನು ಸೂಚಿಸುವದು. ಅದರಿಂದ ರಾಜಸದಾನದಲ್ಲಿ ವಿಕಲ್ಪದಿಂದ ಮೂರು, ಸಮುಚ್ಚಯದಿಂದ ಒಂದು, ಹೀಗೆ ನಾಲ್ಕು ಭೇದಗಳುಂಟೆಂದು ಸಿದ್ಧವಾಗುವದು.

೨೨.

अदेशकाले यद्दानमपात्रेभ्यश्च दीयते ।
असत्कृतमवज्ञातं तत्तामसमुदाहृतम् ॥ २२ ॥

ಅಂ—ಅಪವಿತ್ರ ದೇಶಕಾಲಗಳಲ್ಲಿ ಕುಪಾತ್ರರಿಗೆ ನಮಸ್ಕಾರಾದಿ ಸತ್ಕಾರಗಳಿಲ್ಲದೆ ಅವಮಾನ ಪಡಿಸಿಕೊಟ್ಟ ದಾನವು ತಾಮಸವು.

ವಿಂ ಅಂ—ಅಪ್ರಶಸ್ತ ದೇಶಕಾಲಗಳಲ್ಲಿ ಅಯೋಗ್ಯರಿಗೆ ಅಂದರೆ, ನಟರು, ವಿಟರು, ಗಾಯಕರು, ಇಂಥವರಿಗೆ ಪಾದಪ್ರಕ್ಷಾಲನಾದಿ ಸತ್ಕಾರವಿಲ್ಲದೆ, ವಾಣಿಯಿಂದಲೂ, ಶರೀರದಿಂದಲೂ, ತಿರಸ್ಕಾರಪೂರ್ವಕ ಮಾಡಿದ ದಾನವು ತಾಮಸವೆನಿಸುವದು. ತಾಮಸದಾನದಲ್ಲಿ ವಿಕಲ್ಪದಿಂದ ಐದು ಭೇದಗಳೂ, ಮೇಲೆ ಕಾಣಿಸಿದ ಐದು ವಿಶೇಷಣಗಳೂ ಕೂಡಿ ಆದ ಒಂದು, ಹೀಗೆ ಆರು ಭೇದಗಳುಂಟು. ೨,೩,೪, ಈ ವಿಶೇಷಣಗಳನ್ನು ಕೂಡಿಸಿ ಹೇಳಿದರೆ, ಅದರಲ್ಲಿ ಅನೇಕ ವಿಧಗಳುಂಟೆಂದು ತಿಳಿಯಬೇಕು.

೨೩. ಹಿಂದೆ, ಇದೇ ಅಧ್ಯಾಯದ ೧೭ನೆಯ ಶ್ಲೋಕದಲ್ಲಿ ಯಜ್ಞ, ತಪಸ್ಸು, ದಾನಗಳ ಸಾತ್ವಿಕತ್ವಾದಿ ಕಾರಣಗಳು ಅಸಾಧಾರಣಧರ್ಮಗಳೆಂದು ಹೇಳಲಾಗಿತ್ತು; ಅವುಗಳ ಸಾಧಾರಣ ಧರ್ಮಗಳನ್ನು ಹೇಳುವದಕ್ಕಾಗಿ ಅನೇಕರು ಮಾಡಿದ ಚರಿತ್ರೆಯ ಅನುವಾದವೆಂಬ ಪುರಾಕಲ್ಪಾರ್ಥವಾದವನ್ನು ಹೇಳಿದ್ದು:—

ॐ तत्सदिति निर्देशो ब्रह्मणस्त्रिविधः स्मृतः ।
ब्राह्मणास्तेन वेदाश्च यज्ञाश्च विहिताः पुरा ॥ २३ ॥

**ಅಂ**—ಪರಬ್ರಹ್ಮನ ನಾಮಗಳು ಮೂರು ವಿಧವಾಗಿವೆ. ಜಗತ್ತು ಪರಮಾತ್ಮನಲ್ಲಿ ಆಶ್ರಯ ಹೊಂದಿದೆ, ಅಥವಾ ಪರಮಾತ್ಮನು ಜಗತ್ತಿನಲ್ಲಿ ಅಂತರ್ಗತನಾಗಿರುವನು. ಆದ್ದರಿಂದ ಅವನಿಗೆ ॐ ಎಂಬ ನಾಮವು ಬಂದಿದೆ. ಈ ನಾಮವು ಹೇಗೆ ಸಿದ್ಧವಾಗಿರುವದೆಂಬುದಕ್ಕೆ **डिलोपश्चेति** ಎಂಬುವ ವ್ಯಾಕರಣಸೂತ್ರವನ್ನು ನೋಡಬೇಕು. ಗುಣಗಳಿಂದ ಎಲ್ಲವನ್ನು ವ್ಯಾಪಿಸಿದ್ದರಿಂದ ಅವನು **तत्** ಎನಿಸುವನು, ಅಥವಾ 'ಇರುವನೆಂದು' ಪರೋಕ್ಷದಿಂದ ಹೇಳಲ್ಪಡುವ ಮೂಲಕ ಅಥವಾ ಕೇವಲ ವೇದಗಳಿಗೆ ಪರೋಕ್ಷನಾದುದರಿಂದ **तत्** ನಾಮದಿಂದ ಕರೆಯಲ್ಪಡುವನು. ದೋಷವಿಲ್ಲದವನೂ, ಸಕಲ ಶುಭಗುಣಗಳಿಂದ ಪೂರ್ಣನೂ, ಆದುದರಿಂದ ಅವನಿಗೆ **सत्** ಎಂಬ ನಾಮಬಂದಿದೆ. ಇದೇ ಪರಬ್ರಹ್ಮನು ಸೃಷ್ಟಿಕಾಲದಲ್ಲಿ ತನ್ನ ಆರಾಧನೆಗಾಗಿ ಬ್ರಾಹ್ಮಣರನ್ನೂ, ಯಜ್ಞಗಳನ್ನೂ, ವೇದಗಳನ್ನೂ, ಹುಟ್ಟಿಸಿದನು. ಇಲ್ಲಿ ವೇದಗಳ ನಿರ್ಮಾಣವೆಂದರೆ, **ಪ್ರಕಟನೆ** ಎಂದು ತಿಳಿಯಬೇಕು.

**ವಿಂ ಅಂ**—ಪರಬ್ರಹ್ಮನಿಗೆ ಓಂ, ತತ್, ಸತ್‌ಗಳೆಂಬ ಮೂರು ನಾಮಗಳುಂಟೆಂದು ಮಹರ್ಷಿಗಳು ಹೇಳುವರು. ಅದೇ ಮೇರೆಗೆ, ಈ ನಾಮಗಳು **ॐमिति ब्रह्म** ( ತೈಂ ೧—೮ ), **तत्त्वमसि** (ಛಾಂ ೬—೮—೭), **सदेव सौम्य** (ಛಾಂ ೬—೨—೧), ಎಂಬ ಮಂತ್ರಗಳಲ್ಲಿ ಹೇಳಲ್ಪಟ್ಟಿವೆ. ಈ ಪರಬ್ರಹ್ಮನು ಸ್ವಂತ ಆರಾಧನೆಗಾಗಿ ಯಜ್ಞಗಳನ್ನೂ, ಅವುಗಳನ್ನು ಪ್ರತಿಪಾದಿಸುವ ವೇದಗಳನ್ನೂ, ಅವುಗಳನ್ನು ಅಧ್ಯಯನಮಾಡುವ ಬ್ರಾಹ್ಮಣರನ್ನೂ, ಸೃಷ್ಟಿಕಾಲಕ್ಕೆ ನಿರ್ಮಿಸಿದನು. ಹೀಗೆ ಪರಮಾತ್ಮನು ತನ್ನ ಆರಾಧನೆಗೆ ಬೇಕಾದ ಯಜ್ಞ, ದಾನ, ತಪಸ್ಸುಗಳೆಂಬ ಕರ್ಮಗಳನ್ನೂ, ಅವುಗಳಿಗೆ ಬೇಕಾದ ಮಂತ್ರಗಳನ್ನೂ, ಉಪದೇಶಿಸುವ ಬ್ರಾಹ್ಮಣರನ್ನೂ, ನಿರ್ಮಿಸಿ ಸಜ್ಜೀವಗಳ ಮೇಲೆ ಅತ್ಯುಪಕಾರ ಮಾಡಿರುವನು. ಅವನೇ ನಾನೆಂದು ತಿಳಿದು, ನನ್ನ ಈ ಮೂರು ನಾಮಗಳನ್ನೂ, ಉಪಲಕ್ಷಣದಿಂದ ಅನ್ಯ ನಾಮಗಳನ್ನೂ, ಉಚ್ಚರಿಸಿ, ನಡುನಡುವೆ ನನ್ನ ಸ್ಮರಣೆ, ನಾಮೋಚ್ಚಾರಪೂರ್ವಕ ಮಾಡಿದ ಕರ್ಮವು,— ಅದರಲ್ಲಿ ಕೆಲವು ನ್ಯೂನತೆಗಳಿದ್ದರೂ— ರಾಜಸ, ತಾಮಸ, ಅಂಶದಿಂದ ಬೆರಕೆಯಾಗಿದ್ದರೂ, ಸಾತ್ವಿಕವೇ ಆಗುವದು ಕಂಡಿಯಾ ? ಈ ಬಗ್ಗೆ ಸಂದೇಹ ಅಥವಾ ವ್ಯಥೆ ಪಡಕೂಡದು. ಲೋಕದಲ್ಲಿ ಕೂಡ, ಸುಖವಾಗಲು ಕರ್ಮಮಾಡುವವರು ಅತ್ಯುಪಕಾರಮಾಡಿದ ಪರಮಾತ್ಮನ ಸ್ಮರಣೆ ಮತ್ತು ನಾಮಗಳ ಉಚ್ಚಾರದಿಂದಲೇ ಕರ್ಮಮಾಡುವರು. ಈ ಕರ್ಮವು ಅಲ್ಪನ್ಯೂನವಾಗಿದ್ದರೂ, ಮೇಲ್ಕಂಡ ಮೂರು ನಾಮಗಳ ಉಚ್ಚಾರಣೆಯಿಂದ ಸಗುಣವೂ, ಸಾತ್ವಿಕವೂ, ಆಗುವದಲ್ಲದೆ ಪೂರ್ಣ ಫಲದ್ರೂಪವಾಗುವದು. ಈ ವಿಷಯಕ್ಕೆ " ಯಜ್ಞದಲ್ಲಿ ಪ್ರಮಾದದಿಂದ ಆದ ಕರ್ಮವು ನ್ಯೂನವಾದರೂ, ಶ್ರೀವಿಷ್ಣುವಿನ ಸ್ಮರಣೆಯಿಂದ ಪೂರ್ಣವಾಗುವದು" ಎಂದೂ, " ಪ್ರಾಯಶ್ಚಿತ್ತ ಮುಂತಾದ ಅನೇಕ ಕರ್ಮಗಳೆಲ್ಲ ಶ್ರೀಕೃಷ್ಣನ ಸ್ಮರಣೆಯಿಂದ ಸಫಲವಾಗುವವು " ಎಂದೂ, ಸ್ಮೃತಿವಚನಗಳು ಪ್ರಮಾಣವಾಗಿವೆ.

೨೪.

तस्मादोमित्युदाहृत्य यज्ञदानतपःक्रियाः ।
प्रवर्तन्ते विधानोक्ताः सततं ब्रह्मवादिनाम् ॥ २४ ॥

**ಅ೦—**ಓಂ ಎಂಬುದು ಪರಮಾತ್ಮನ ನಾಮವಾದ್ದರಿಂದ, ಓಂಕಾರವನ್ನು ಉಚ್ಚಾರ ಮಾಡಿಯೇ ಬ್ರಹ್ಮವಾದಿಗಳ ವಿಧಿಗನುಸರಿಸಿದ ಯಜ್ಞಾದಿ ವಿಹಿತ ಕಾರ್ಯಗಳು ಪ್ರವರ್ತಿಸುವವು. ಇದರಿಂದ ಓಂಕಾರಾರ್ಥಜ್ಞಾನಪೂರ್ವಕವಾಗಿ ಓಂ ಎಂದು ಉಚ್ಚರಿಸಿ, ಬ್ರಾಹ್ಮಣರಿಂದ ವಿಧಿಗನುಸರಿಸಿದ ಅನುಷ್ಠಾನವು, ಯಜ್ಞಾದಿಗಳು, ಸಾತ್ವಿಕವೆಂದು ಹೇಳಿದಂತಾಯಿತು.

**ವಿ೦ ಅ೦**—ವೇದವಾದಿಗಳು ಪರಮಾತ್ಮನ ನಾಮಗಳನ್ನೇ ಉಚ್ಚರಿಸಿ, ಯಜ್ಞಾದಿ ಕರ್ಮಗಳನ್ನು ಮಾಡುವದರಿಂದ, ಅರ್ಜುನಾ, ನೀನೂ ಹಾಗೆಯೇ ಆಚರಿಸು. ಪರಮಾತ್ಮನಿಗೆ ಅನಂತ ನಾಮಗಳುಂಟು, ಅವುಗಳಲ್ಲಿ ಈ ಮೂರು ನಾಮಗಳು ಮುಖ್ಯವಾಗಿವೆ. ಅವುಗಳಲ್ಲಿ ಕೂಡ ಓಂಕಾರವು ಮುಖ್ಯವಾಗಿದೆ. ಆದ್ದರಿಂದ ಅದನ್ನು ಮೊದಲು ಹೇಳಿ ಇದೆ.

೨೫.

तदित्यनभिसंधाय फलं यज्ञतपःक्रियाः ।
दानक्रियाश्च विविधाः क्रियन्ते मोक्षकाङ्क्षिभिः ॥ २५ ॥

**ಅ೦—**ಮೇಲಾಗಿ ತತ್ ಎಂದರೆ ಪರೋಕ್ಷಫಲವಾದ ಸ್ವರ್ಗಾದಿಗಳ ಅನುಸಂಧಾನವಿಲ್ಲದೆ, ಅಂದರೆ ತನಗಾಗಲೆಂದು ಬಯಸದೆ, ಮತ್ತು ಕೇವಲ ವೇದಗಳಿಗೆ ಪರೋಕ್ಷನಾದ ಬ್ರಹ್ಮನೆಂಬ ಅನುಸಂಧಾನದಿಂದ ಅಂದರೆ, ಅವನೇ ತನಗೆ ಪ್ರಾಪ್ತವಾಗಲೆಂಬ ಇಚ್ಛೆಯಿಂದ ಅಗ್ನಿಹೋತ್ರಾದಿ ತಪಸ್ಸೆಂಬ ಕ್ರಿಯೆಗಳೂ, ಹಿಂದೆ ಹೇಳಿದ ಶರೀರಾದಿ ತಪಸ್ಸೆಂಬ ಕ್ರಿಯೆಗಳೂ, ದಾನಕ್ರಿಯೆಗಳೂ, ಹೀಗೆ ಹಲವು ಕ್ರಿಯೆಗಳು ಮೋಕ್ಷಬಯಸುವ ಅಧಿಕಾರಿಯಿಂದ ಆಚರಿಸಲ್ಪಡುವವು. ಇದರಿಂದ, ಕೇವಲ ವೇದಗಳಿಂದ ತಿಳಿಯಲ್ಪಡುವ ಅಲ್ಲದೆ ಅನ್ಯರ ಉದ್ದೇಶದಿಂದಲ್ಲದ 'ತತ್' ಪದವಾಚ್ಯ ಪರಬ್ರಹ್ಮನ ಉದ್ದೇಶದಿಂದಲೇ ಮಾಡುವ ಕ್ರಿಯೆಯು ಯಜ್ಞಾದಿಗಳ ಸಾತ್ವಿಕತ್ವಾದಿಗಳಿಗೆ ಕಾರಣವೆಂದು ಹೇಳಿದಹಾಗಾಯಿತು. ಅದೇ ಮೇರೆಗೆ ಪರಬ್ರಹ್ಮನ ಉದ್ದೇಶದಿಂದ ಯಜ್ಞಾದಿಕಾರ್ಯಗಳು ಮಾಡಲ್ಪಡುವದರಿಂದ ಅವನಿಗೆ 'ತತ್' ಎಂಬ ಹೆಸರು ಪ್ರಾಪ್ತವಾಯಿತೆಂಬುದು ಸ್ಪಷ್ಟವಾಯಿತು.

೨೬—೨೭. ಸಾಧುಗುಣವುಳ್ಳವನಾದುದರಿಂದ 'ಸತ್' ಶಬ್ದಾರ್ಥನಾದ ಭಗವತ್‌ಜ್ಞಾನಪೂರ್ವಕವಾಗಿ ಮಾಡಿದ ಅನುಷ್ಠಾನವು ಕೂಡ ಸಾತ್ವಿಕತ್ವಕ್ಕೆ ಕಾರಣವೆಂಬುವ ಅನ್ಯ ಲಕ್ಷಣವು ಯಜ್ಞಾದಿಗಳಿಗೆ ಉಂಟೆಂಬ ಅಭಿಪ್ರಾಯದಿಂದ 'ಸತ್' ಶಬ್ದಾರ್ಥವನ್ನು ವಿವರಿಸಿದ್ದು; ಮತ್ತು, ಭಗವದ್ಭಕ್ತಿಪೂರ್ವಕವಾಗಿ ಮಾಡಿದ ಕರ್ಮಗಳು ಕೂಡ ಸಾತ್ವಿಕತ್ವಕ್ಕೆ ಕಾರಣಗಳೆಂಬ ಅನ್ಯ ಲಕ್ಷಣವುಂಟೆಂಬ ಅಭಿಪ್ರಾಯದಿಂದ ನಿಷ್ಠೆಯು ಕೂಡ 'ಸತ್' ಶಬ್ದಾರ್ಥವೆಂಬುದನ್ನು ಕುರಿತು ಹೇಳಿದ್ದು:—

सद्भावे साधुभावे च सदित्येतत्प्रयुज्यते ।
प्रशस्ते कर्मणि तथा सच्छब्दः पार्थ युज्यते ॥ २६ ॥

यज्ञे तपसि दाने च स्थितिः सदिति चोच्यते ।
कर्म चैव तदर्थोऽयं सदित्येवाभिधीयते ॥ २७ ॥

ಅ೦—ಅರ್ಜುನಾ, ಅಸ್ತಿತ್ವವನ್ನು ತೋರಿಸುವ ಅರ್ಥದಿಂದ 'ಸತ್' ಶಬ್ದವು ಉಪಯೋಗಿಸಲ್ಪಟ್ಟಿರುವದು; ಅದೇ ಮೇರೆಗೆ, ಸಚ್ಚರಿತ ಇತ್ಯಾದಿ ಅಂದರೆ ಸಾಧುತ್ವವಾಚ್ಯಾರ್ಥದಿಂದ 'ಸತ್' ಪದವು ಉಪಯೋಗಿಸಲ್ಪಡುವದು. ಹೀಗೆ 'ಸತ್' ಶಬ್ದವು ಅಸ್ತಿತ್ವ ಮತ್ತು ಸಾಧುತ್ವಗಳಿಗೆ ವಾಚಕವಾಗಿದೆ. ಅದರಂತೆ, ಅತಿಮಂಗಲಕರವಾದ ವಿವಾಹಾದಿ ಕರ್ಮಗಳಲ್ಲಿ 'ಸತ್' ಶಬ್ದವನ್ನು ಉಪಯೋಗಿಸುವರು; ಅಂದರೆ, ಅದು ಅತಿಮಂಗಲ ಕರ್ಮವಾಚ್ಯವಾಗಿದೆ. ಯಜ್ಞ, ದಾನ, ತಪಸ್ಸುಗಳಲ್ಲಿ ನಿಷ್ಠೆ ಅಂದರೆ, ಪರಮಾತ್ಮನೇ ಅವುಗಳಿಗಾಗಿ ಫಲಕೊಡುವನೆಂಬ ಬುದ್ಧಿಯು ಸತ್ ಎನಿಸುವದು. ಭಗವದಾರಾಧನೆಗಾಗಿ ಮಾಡುವ ಕರ್ಮವು ಕೂಡ ಸತ್ ಎನಿಸುವದು.

ವಿ೦ ಅ೦—ಪರಮಾತ್ಮನ ಆರಾಧನೆಗಾಗಿ ನಿಷ್ಕಾಮದಿಂದ ಮಾಡಿದ ಯಜ್ಞಾದಿ ಕರ್ಮವು ಕೂಡ ಸತ್ ಎನಿಸುವದು. ಪರಮಾತ್ಮನ ಪ್ರಾಪ್ತಿ ಎಂಬ ಫಲವುಳ್ಳ ಕರ್ಮವೆಂದರೆ, ಅವನ ಆರಾಧನೆಯೋಸ್ಕರ, ಮತ್ತು ಆ ಆರಾಧನೆಗಾಗಿ ಬೇಕಾದ ಸಾಮಗ್ರಿ, ದೇವರಮನೆ ಸಾರಿಸೋಣ, ಉಡಗೋಣ, ರಂಗವಲ್ಲ್ಯಾದಿಗಳಿಂದ ಅಲಂಕರಿಸೋಣ, ಇವೆಲ್ಲ ಕ್ರಿಯೆಗಳೂ, ಅದಕ್ಕೆ ಅವಶ್ಯವಿರುವ ಹೂದೋಟ, ದೇವತಾಗೃಹ, ಅದಕ್ಕೆ ಬೇಕಾದ ಧನಾರ್ಜನೆ, ಈ ಕ್ರಿಯೆಗಳೆಲ್ಲ ಸತ್ ಎನಿಸುವವು. ಈ ಕರ್ಮಗಳನ್ನು ಮಾಡುವಾಗ ಪರಮಾತ್ಮನನ್ನು ಸ್ಮರಿಸಿ, 'ಸತ್' ಎಂದು ಉಚ್ಚರಿಸಿ, ನಡನಡುವೆ ಅವನ ಅನ್ಯ ನಾಮಗಳನ್ನು ಸ್ಮರಿಸುತ್ತ ಮಾಡಿದ ಕರ್ಮವು ನ್ಯೂನವಾಗಿದ್ದರೂ, ಸಾತ್ವಿಕವೇ ಸರಿ. ಆದುದರಿಂದಲೇ ಅದಕ್ಕೆ ಅದರಿಂದ ಫಲವು ಕಟ್ಟಿಟ್ಟದ್ದೆಂತಲೇ ತಿಳಿಯಬೇಕು. ಅರ್ಜುನಾ, ಪರಮಾತ್ಮನ ಒಂದು ನಾಮದಲ್ಲಿ ಇಂಥ ಮಹಿಮೆ ಇರುವದರಿಂದ ಆ ಮೂರು ನಾಮಗಳ ಮಹಿಮೆ ಎಷ್ಟೆಂತು ವರ್ಣಿಸುವದು! ಅದುಕಾರಣ, ಸಂದೇಹವನ್ನು ಈಡಾಡಿ ಸ್ವಧರ್ಮಕ್ಕನುಸರಿಸಿ ಆಚರಿಸು.

೨೮. ಯಜ್ಞಾದಿಗಳ ಸಾತ್ವಿಕತ್ವಕ್ಕೆ ಹೇತುವಾಗಿರುವ ಧರ್ಮಗಳನ್ನು ಹೇಳಿ, ಅಂಥ ಧರ್ಮಗಳಿಲ್ಲದ ಕಾಲಕ್ಕೆ ಕಾರಣವಾದ ಅನ್ಯ ಧರ್ಮಗಳನ್ನು ನಿರೂಪಿಸಿದ್ದು, ಅಥವಾ, "ವಿಧಿಜ್ಞಾನವಿಲ್ಲದೆ, ಶ್ರದ್ಧೆಯಿಂದ ಆಚರಿಸಿದ ಕರ್ಮವು ಸಫಲವಾಗುವದೇ ಸರಿ; ಆದರೆ, ಅದರಿಂದಾಗುವ ಫಲವು ಒಂದೇ ವಿಧವಲ್ಲ; ಏಕೆಂದರೆ, ಶ್ರದ್ಧೆಯಲ್ಲಿ ಸತ್ವಾದಿ ಮೂರು ಗುಣಗಳ ಸಂಬಂಧಮೂಲಕ ಭೇದಗಳಿರುವದರಿಂದ, ಕರ್ಮಗಳಲ್ಲಿ ಸಾತ್ವಿಕಾದಿ ಭೇದಗಳು ಸಂಭವಿಸುವವು. ಅವುಗಳಿಗನುಸರಿಸಿ ಫಲದಲ್ಲಿ ಕೂಡ ಭೇದವು ಸಂಭವಿಸುವದು. ಇನ್ನು, ಜ್ಞಾನವಿಲ್ಲದೆ ಮಾಡಿದ ಕರ್ಮಗಳು ನಿಷ್ಫಲವಾಗುವದಿಲ್ಲೆಂದು ಹಿಂದೆ ಹೇಳಿ ಇದೆ. ಅಂದಬಳಿಕ ಶ್ರದ್ಧೆಯಿಲ್ಲದೆ ಜ್ಞಾನಪೂರ್ವಕ ಮಾಡಿದ ಕರ್ಮಕ್ಕೆ ಫಲ ಉಂಟೇ ಅಥವಾ ಇಲ್ಲವೇ ಇದನ್ನು ಹೇಳು" ಎಂದು ಅರ್ಜುನನು ಕೇಳಿದ್ದಕ್ಕೆ ಸಮಾಧಾನ ಹೇಳಿದ್ದು :—

**अश्रद्धया हुतं दत्तं तपस्तप्तं कृतं च यत् ।**
**असदित्युच्यते पार्थ न च तत्प्रेत्य नो इह ॥ २८ ॥**

ಅ೦—ಭಗವತ್‌ಶ್ರದ್ಧೆಯಿಲ್ಲದೆ ಮಾಡಿದ ಹೋಮ, ಕೊಟ್ಟ ದಾನ, ಆಚರಿಸಿದ ತಪಸ್ಸು, ಇವುಗಳು ಒಂದುವೇಳೆ ಶಾಸ್ತ್ರಕ್ಕನುಸರಿಸಿದ್ದರೂ, ಅಸತ್ ಎನಿಸುವವು. ಇವುಗಳನ್ನಾಚರಿಸಿದ ಅಧಿಕಾರಿಗೆ ಇವು ಐಹಿಕಾಮುಷ್ಮಿಕ ಫಲಗಳನ್ನು ಕೊಡಲಾರವು. ಆದ್ದರಿಂದ ಪರಮಾತ್ಮನ ಶ್ರದ್ಧೆ–ಭಕ್ತಿಪೂರ್ವಕವಾಗಿ ಆಚರಿಸಿದ ಹೋಮಾದಿಗಳು ಅಂತಹ ಫಲಗಳನ್ನು ಕೊಡುವದರಿಂದ ಶ್ರದ್ಧೆಯೇ ಕಾರಣವೆಂದು ಹಿಂದೆ ಅಂದರೆ ಈ ಅಧ್ಯಾಯದ ೨ನೆಯ ಶ್ಲೋಕದಲ್ಲಿ ಶ್ರದ್ಧೆಗೆ ಪ್ರಾಧಾನ್ಯವು ಹೇಳಿಯಿದೆ. ಆದರೆ ನಿಜವಾಗಿ ಆಲೋಚಿಸಿ ನೋಡಲು, ಶ್ರದ್ಧೆ ಇಲ್ಲದೆ ಮಾಡಿದ ಕರ್ಮವು ಶಾಸ್ತ್ರಕ್ಕನುಸರಿಸಿ ಇರುವದೆಂದು ಹೇಳಲಾಗದು.

೨೮ ಅಂ—ಶಾಸ್ತ್ರದ ಜ್ಞಾನವಿದ್ದರೂ, ಪರಮಾತ್ಮನಲ್ಲಿ ಶ್ರದ್ಧೆಯಿಲ್ಲದೆ ಮಾಡಿದ ಹೋಮ, ದಾನ, ತಪಸ್ಸು ಮುಂತಾದ ಅನ್ಯ ಕರ್ಮ, ಇವೆಲ್ಲ ಫಲದಿಂದಲೂ, ಸ್ವರೂಪದಿಂದಲೂ, ಅಸತ್ತೇ ಎನಿಸುವವು. ಅಧಿಕಾರಿಯು ಮರಣಹೊಂದಿದ ಬಳಿಕ, ಅವನು ಮಾಡಿದ ಇಂಥ ಕರ್ಮವು ಫಲಕೊಡುವದಿಲ್ಲ, ಮತ್ತು ಅವನು ಜೀವಿಸಿರುವಾಗ ಇಹಲೋಕದಲ್ಲಿಯೂ ಫಲಕೊಡುವದಿಲ್ಲ. ಇಹಲೋಕದಲ್ಲಿ ಸಜ್ಜನರು ಆ ಕರ್ಮವನ್ನು ನಿಂದಿಸುವರು. ಆದುದರಿಂದ ಅಂಥ ಕರ್ಮವು ಫಲದ್ರೂಪವಾಗಲರಿಯದು; ಏಕೆಂದರೆ, "ಇವನು ದಾಂಭಿಕನು; ಅನ್ಯರ ವಂಚನೆಗಾಗಿ ಪರಮಾತ್ಮನಲ್ಲಿ ಶ್ರದ್ಧೆಯಿಲ್ಲದೆ ಕರ್ಮಮಾಡುವನು. ಆದ್ದರಿಂದ ಅವನು ಅಸುರನೇ ಸರಿ" ಎಂದು ಹೇಳುತ್ತ ಅವನನ್ನು ನಿಂದಿಸುವರು. ಅದರಂತೆಯೇ, "ಕರ್ಮಗಳಲ್ಲಿಯೂ, ಅವುಗಳ ಪ್ರವೃತ್ತಿಯನ್ನುಂಟುಮಾಡುವ ವೇದಗಳಲ್ಲಿಯೂ, ಅವುಗಳಿಗೆ ಉದ್ದೇಶ್ಯರಾದ ನಮ್ಮಲ್ಲಿಯೂ, ಶ್ರದ್ಧೆಯಿಲ್ಲದೆ, ಈ ದಾಂಭಿಕನು ಕರ್ಮಮಾಡುವನು" ಎಂದು ನುಡಿದು, ದೇವತೆಗಳು ಕೂಡ ಫಲಕೊಡುವದಿಲ್ಲ. ಆದ್ದರಿಂದ ಹಿಂದೆ (೧೬—೨೪) ನೆಯ ಶ್ಲೋಕದಲ್ಲಿ ಹೇಳಿದಂತೆ, ಶಾಸ್ತ್ರಜ್ಞಾನ ಮತ್ತು ಶ್ರದ್ಧೆ ಇವೆರಡರಿಂದ ಯುಕ್ತವಾಗಿ ಮಾಡಿದ ಕರ್ಮವೇ ಮಹಾಫಲವನ್ನು ಕೊಡುವದು; ಆದರೆ, ಶಾಸ್ತ್ರಜ್ಞಾನವಿರದಿದ್ದರೂ, ಶ್ರದ್ಧೆಯಿಂದ ಮಾಡಿದ ಕರ್ಮವು ಶ್ರದ್ಧೆಗನುಸರಿಸಿ ಕೆಲವರಿಗೆ ಫಲಕೊಡುವದು. ಇನ್ನು, ಶ್ರದ್ಧೆಯಿಲ್ಲದೆ ಮಾಡಿದ ಕರ್ಮವು ಜ್ಞಾನಪೂರ್ವಕವಿದ್ದಾಗ್ಯೂ, ಯಾರಿಗೂ ಫಲಕೊಡದು; ಅಂದರೆ, ಶ್ರದ್ಧೆಯಿಲ್ಲದೆ ಮಾಡಿದ ಕರ್ಮವು ನಿಷ್ಫಲವೇ ಸರಿ.

ॐतत्सदिति श्रीमद्भगवद्गीतासूपनिषत्सु ब्रह्मविद्यायां योगशास्त्रे श्रीकृष्णार्जुनसंवादे श्रद्धात्रयविभागो नाम सप्तदशोऽध्यायः ॥ १७ ॥

ಅಂ—ಈ ಮೇರೆಗೆ, ಷಡ್ಗುಣೈಶ್ವರ್ಯಸಂಪನ್ನನಾದ ಪರಮಾತ್ಮನಿಂದ ಮನೋಹರ, ಅಲಂಕಾರಿಕ ಮತ್ತು ಇಷ್ಟಶಬ್ದಗಳಿಂದ ಉಪದೇಶಿಸಲ್ಪಟ್ಟದ್ದೂ, ಉಪನಿಷತ್ತಿಗೆ ಸಮಾನವೂ, ಪರಬ್ರಹ್ಮವಿಷಯಕ ವಿದ್ಯೆಯೂ ಎನಿಸುವ ಮತ್ತು ಕರ್ಮಯೋಗಗಳನ್ನು ಪ್ರತಿಪಾದಿಸುವ, ಶ್ರೀಕೃಷ್ಣನಿಗೂ, ಅರ್ಜುನನಿಗೂ ನಡೆದ ಸಂವಾದರೂಪವಾದ **ಗೀತಾಶಾಸ್ತ್ರದಲ್ಲಿಯ ಶ್ರದ್ಧಾತ್ರಯವಿಭಾಗವೆಂಬ ಹದಿನೇಳನೆಯ** ಅಧ್ಯಾಯವು ಮುಗಿಯಿತು.



# ೧೮ನೆಯ ಅಧ್ಯಾಯವು.

೧. ಗೀತಾಶಾಸ್ತ್ರದ ಉಪದೇಶವು ೧೭ನೆಯ ಅಧ್ಯಾಯಕ್ಕೆ ಮುಗಿಯಿತು. ಇದನ್ನು ಕುರಿತು ಪರಮಾತ್ಮನು ಅದೇ ಅಧ್ಯಾಯದ ೨೦ನೆಯ ಶ್ಲೋಕದಲ್ಲಿ ಸ್ಪಷ್ಟೀಕರಿಸಿರುವನು. ಮುಂದೆ “ಈ ಮಹತ್ತಾದ ಗೀತಾಶಾಸ್ತ್ರಕ್ಕೆ ಅಧಿಕಾರಿಗಳ್ಯಾರು ? ಅನಧಿಕಾರಿಗಳ್ಯಾರು ?” ಎಂದು ಅರ್ಜುನನು ಕೇಳಲಾಗಿ, ಪರಮಾತ್ಮನು ೧೬ನೇ ಅಧ್ಯಾಯದಲ್ಲಿ ದೇವ ಮತ್ತು ಅಸುರಸ್ವಭಾವದವರನ್ನು ವಿಂಗಡಿಸಿ, ದೇವಸ್ವಭಾವದವರೇ ಅಧಿಕಾರಿಗಳು, ಅಸುರಸ್ವಭಾವದವರು ಅನಧಿಕಾರಿಗಳೆಂಬುದನ್ನು ಒಡೆದು ಹೇಳಿದನಷ್ಟೇ ? ಆ ಅಧ್ಯಾಯದ ಕೊನೆಯಲ್ಲಿ ಪರಮಾತ್ಮನು “ಶಾಸ್ತ್ರವಿಧಾನ ತಿಳಿದು, ಅದಕ್ಕನುಸರಿಸಿ, ಕರ್ಮಮಾಡಬೇಕು” ಎಂದು ಹೇಳಿದ್ದನ್ನು ಕೇಳಿ, ಅರ್ಜುನನು “ವಿಧಿಯನ್ನರಿಯದೆ ಶ್ರದ್ಧೆಯಿಂದಾಚರಿಸಿದ ಕರ್ಮಕ್ಕೆ ಫಲ ಉಂಟೇ ಇಲ್ಲವೇ?” ಎಂದು ತಿರಿಗಿ ಪ್ರಶ್ನಮಾಡಲು, ಅದಕ್ಕೆ ಪರಮಾತ್ಮನು “ಅಂಥ ಜ್ಞಾನವಿಲ್ಲದೆ ಶ್ರದ್ಧೆಯಿಂದ ಆಚರಿಸಿದ ಕರ್ಮಕ್ಕೆ ಶ್ರದ್ಧೆಯ ಭೇದದಿಂದ ಫಲ ಉಂಟು; ಶ್ರದ್ಧೆಯು ಸಾತ್ವಿಕವಿದ್ದರೆ, ಸಾತ್ವಿಕ ಫಲವು ಸಿಗುವದು. ಆದ್ದರಿಂದ ಆಹಾರಾದಿಗಳಲ್ಲಿ ಸಾತ್ವಿಕಾದಿ ಭೇದಗಳನ್ನು ತಿಳಿದು ರಾಜಸ–ತಾಮಸ ಆಹಾರಗಳನ್ನು ಬಿಟ್ಟು, ಸಾತ್ವಿಕ ಆಹಾರಸೇವನೆಯಿಂದಲೇ ಸಾತ್ವಿಕನಾಗಿ, ಸಾತ್ವಿಕಶ್ರದ್ಧೆಯಿಂದಲೇ ಕರ್ಮವನ್ನಾಚರಿಸಬೇಕು. ಪ್ರಮಾದಾದಿಗಳಿಂದ ಒಂದುವೇಳೆ ಅದರಲ್ಲಿ ಕೊರತೆಯುಂಟಾದರೆ, ಪರಮಾತ್ಮನ ನಾಮೋಚ್ಚಾರಣೆಯಿಂದ ಅದು ಪೂರ್ಣವಾಗುವದು. ಇನ್ನು, ವಿಧಿಜ್ಞಾನವಿದ್ದು, ಶ್ರದ್ಧೆಯಿಲ್ಲದೆ ಮಾಡಿದ ಕರ್ಮವೂ, ಶ್ರದ್ಧೆಯಿದ್ದು ಶಾಸ್ತ್ರವಿರುದ್ಧ ಮಾಡಿದ ಕರ್ಮವೂ, ಶಾಸ್ತ್ರಕ್ಕನುಸರಿಸಿದ್ದರೂ ಶ್ರದ್ಧೆ ಇರದ ಕರ್ಮವೂ ಇವೆಲ್ಲ ಪೊಳ್ಳು; ಆದ್ದರಿಂದ ವಿಧಿಜ್ಞಾನದಿಂದ ವಿಹಿತಕರ್ಮವನ್ನೇ ಶ್ರದ್ಧೆಯಿಂದ ಆಚರಿಸಬೇಕು” ಎಂದು ಹೇಳಿದನು. ಬಳಿಕ, ಪರಮಾತ್ಮನು (೨–೧೧) ನೇ ಶ್ಲೋಕ ಮೊದಲ್ಗೊಂಡು ೧೬ನೆಯ ಅಧ್ಯಾಯ ಮುಗಿಯುವವರೆಗೆ ಅಲ್ಲಲ್ಲಿ ಹೇಳಿದ ಬೇರೆ ಬೇರೆ ಅರ್ಥಗಳು ಬುದ್ಧಿಗೋಚರವಾಗಬೇಕೆಂದು ಆ ವಿಷಯಗಳನ್ನು ಸಕಲ ಶಾಸ್ತ್ರದ ಉಪಸಂಹಾರಕವಾದ ಈ ಅಧ್ಯಾಯದಲ್ಲಿ ಪುನಃ ವಿಸ್ತರಿಸಬೇಕೆಂದು ಆಲೋಚಿಸಿದನು. ಇನ್ನು “ಕೇಳದಲೆ, ನಾನು ಹೇಳತೊಡಗಿದರೆ, ಹೇಳಿದ ವಿಷಯಗಳನ್ನೇ ಪುನಃ ಹೇಳುವದರಲ್ಲಿ ಅರ್ಥವೇನೆಂದು ಅರ್ಜುನನು ಆಕ್ಷೇಪಿಸಬಹುದು, ಆದ್ದರಿಂದ ಅವನು ಪ್ರಾರ್ಥಿಸಿದಾಗ ಹೇಳಿದರೆ, ಅದರಲ್ಲಿ ಆದರ ಹುಟ್ಟುವದು” ಎಂದು ಯೋಚಿಸಿ, “ನನ್ನನ್ನೇ ಕೇಳು” ಎಂದು ಅವನಲ್ಲಿಯ ಅಂತರ್ಗತ ಪ್ರೇರಣೆಯಿಂದ ತಾನು ನಿರೂಪಣೆಗೆ ಪ್ರಾರಂಭಿಸಿದ್ದು; ಅಥವಾ, ಹಿಂದೆ (೨–೧೭) ನೆಯ ಶ್ಲೋಕದಲ್ಲಿ ಮಹಾಫಲವಾದ ಮೋಕ್ಷಕ್ಕೆ ಕಾರಣವಾದ ಜ್ಞಾನಸಾಧನವು ಹಿಂದಿನ ಅಧ್ಯಾಯಗಳಲ್ಲಿ ವಿಸ್ತಾರವಾಗಿ ಹೇಳಲಾಗಿದೆ, ಮಂದಮತಿಗಳಿಗೆ ತಿಳಿಯಬೇಕೆಂದು ಆ ಸಾಧನವು ಇಲ್ಲಿ ಸಂಕ್ಷೇಪದಿಂದ ವಿವರಿಸಲಾಗುವದು. ಅದೇ ಮೇರೆಗೆ, ೧೪ನೆಯ ಅಧ್ಯಾಯದಲ್ಲಿ ಹೇಳಿದ ತ್ರಿಗುಣಕಾರ್ಯವು ವಿವರಿಸಲ್ಪಡುವದು. ೧೭ನೇ ಅಧ್ಯಾಯದ ೬ನೇ ಶ್ಲೋಕದಲ್ಲಿ ಹೇಳಿದ ಸನ್ಯಾಸ ಮತ್ತು ೧೨–೧೨ ನೇದರಲ್ಲಿ ಹೇಳಿದ ತ್ಯಾಗ, ಇವು ಪುರುಷಾರ್ಥವಾದ ಮೋಕ್ಷಕ್ಕೆ ಕಾರಣಗಳೆಂದು ಹೇಳಲ್ಪಟ್ಟದೆ. ಇವರೆಡರ ಸ್ವರೂಪನಿರ್ಣಯಕ್ಕಾಗಿ ಅರ್ಜುನನು ಕೇಳಿದ್ದು :—

**अर्जुन उवाच ।**

**संन्यासस्य महाबाहो तत्त्वमिच्छामि वेदितुम् ।**
**त्यागस्य च हृषीकेश पृथक्केशिनिषूदन ॥ १ ॥**

ಅಂ—ಇಂದ್ರಿಯಗಳಿಗೆ ಪ್ರೇರಕನಾದ, ಕೇಶಿರಾಕ್ಷಸನನ್ನು ಸಂಹರಿಸಿದ ಶ್ರೀಕೃಷ್ಣಾ, ಸನ್ಯಾಸ ಮತ್ತು ತ್ಯಾಗ, ಇವುಗಳ ಸ್ವರೂಪವನ್ನು ಬೇರೆಬೇರೆಯಾಗಿ ತಿಳಿಯಬೇಕೆಂದು ನನಗೆ ಆಸೆ. ಏಕೆಂದರೆ, ಅವೆರಡು ಶಬ್ದಗಳ ಅರ್ಥವು ಮೇಲ್ಮೇಲೆ ಒಂದಾಗಿ ತೋರುವದು.

ವಿಂ ಅಂ—ಶ್ರದ್ಧಾದಿಗಳು ಸಾತ್ವಿಕಾದಿಗಳಿಂದ ಮೂರು ಬಗೆ ಎಂದು ಹೇಳಿ ಇದೆ. ಈಗ (೬—೧) ನೆಯ ಶ್ಲೋಕದಲ್ಲಿ ಹೇಳಿದ ಮತ್ತು ೩ರಿಂದ ೪ ಅಧ್ಯಾಯಗಳ ವರೆಗೆ ಅವಶ್ಯವೆಂದು ಪ್ರತಿಪಾದಿಸಲ್ಪಟ್ಟ ಮಾಡುವ ಕರ್ಮಗಳಲ್ಲಿ ಫಲತ್ಯಾಗವು ಸನ್ಯಾಸಕ್ಕೆ ಸಮಾನವಾಗಿ ತೋರುವದರಿಂದ, ಸಾತ್ವಿಕಾದಿ ಭೇದಗಳಿಂದ ಸನ್ಯಾಸಸ್ವರೂಪವನ್ನು ತಿಳಿಯಲಿಚ್ಛಿಸುವೆ. ಆದುದರಿಂದ ಕರ್ಮಫಲ ತ್ಯಾಗವೆಂಬ ಸನ್ಯಾಸದ ಸಾತ್ವಿಕಾದಿ ಭೇದಗಳನ್ನು ಹೇಳು. ಇನ್ನು, ಅಲ್ಲಲ್ಲಿ ವಿವರಿಸಿದ ತ್ಯಾಗದ ಅರ್ಥವು ಸನ್ಯಾಸವೇ ಆದರೆ, ಸನ್ಯಾಸಸ್ವರೂಪ ವ್ಯಾಖ್ಯಾನದಿಂದಲೇ ತ್ಯಾಗಸ್ವರೂಪವನ್ನು ಹೇಳಿದಂತಾಗುವದು, ಅಂದಬಳಿಕ ತ್ಯಾಗವೆಂಬುದನ್ನು ಕುರಿತು ಬೇರೆ ಹೇಳುವದೇನೂ ಕಾರಣವಿಲ್ಲ. ತ್ಯಾಗವು ಸನ್ಯಾಸದಿಂದ ಭಿನ್ನವಾದರೆ, ತ್ಯಾಗದ ಸ್ವರೂಪವನ್ನು ಕೂಡ ಬೇರೆ ತಿಳಿಯಲಿಚ್ಛಿಸುವೆ. ಇವೀಗ ನನ್ನ ಎರಡು ಪ್ರಶ್ನಗಳನ್ನು ಸಮಾಧಾನಪಡಿಸು. ಈ ಅಭಿಪ್ರಾಯವು "ಸನ್ಯಾಸ ಮತ್ತು ತ್ಯಾಗ ಇವುಗಳ ತತ್ವಗಳನ್ನು ತಿಳಿಯಬಯಸುವೆನೆಂದು ಹೇಳದೆ, ಸನ್ಯಾಸದ ತತ್ವವನ್ನೂ, ತ್ಯಾಗದ ತತ್ವವನ್ನೂ, ತಿಳಿಯಲಪೇಕ್ಷಿಸುವೆ" ಎಂದು ಹೇಳಿದ್ದರಿಂದ ಸೂಚಿತವಾಗುವದು. ನೀನು ಮಹಾಬಾಹುವುಳ್ಳವನು. ನಿನ್ನ ಆಶ್ರಯ ಹೊಂದಿದ ಸಜ್ಜನರ ಸಂರಕ್ಷಣೆಗಾಗಿ ಕೇಶಿ ಮುಂತಾದ ಅನೇಕ ಅಸುರರನ್ನು ಸಂಹರಿಸಿರುವಿ. ಇಂಥ ಪರಾಕ್ರಮಿಯಾದ ನೀನು ತತ್ವೋಪದೇಶದಿಂದ ಜ್ಞಾನ ಹುಟ್ಟಿಸಿ, ನನ್ನ ಅಂತರಂಗ ಶತ್ರುವಾದ ಅಜ್ಞಾನವನ್ನು ನಾಶಗೊಳಿಸಿ, ದೀನನಾದ ನನ್ನನ್ನು ಉದ್ಧರಿಸು ಕಂಡಿಯಾ. ಸಕಲ ಇಂದ್ರಿಯಗಳಿಗೆ ಪ್ರೇರಕ ನೀನಾದುದರಿಂದ, ನನ್ನ ಇಂದ್ರಿಯಗಳನ್ನೆಲ್ಲ ಸ್ಥಿರಗೊಳಿಸು.

೨. ಅಭಿಪ್ರಾಯಭೇದದಿಂದ ಸನ್ಯಾಸ ಮತ್ತು ಕರ್ಮಗಳಲ್ಲಿ ಭೇದ ಉಂಟೆಂದು ಉತ್ತರ ಹೇಳಿದ್ದು :—

**श्रीभगवानुवाच ।**

**काम्यानां कर्मणां न्यासं संन्यासं कवयो विदुः ।**
**सर्वकर्मफलत्यागं प्राहुस्त्यागं विचक्षणाः ॥ २ ॥**

ಅಂ—ಐಚ್ಛಿಕ ಕಾಮ್ಯಕರ್ಮಗಳಾದ ಜ್ಯೋತಿಷ್ಟೋಮಾದಿಗಳಲ್ಲಿ ಸ್ವರ್ಗಾದಿ ಫಲವನ್ನು ಬಯಸದೆ, ಐಚ್ಛಿಕಾಂಶತ್ಯಾಗದಿಂದ ಕಾಮ್ಯಕರ್ಮಗಳ ತ್ಯಾಗ, ನಿಯತ ಕಾಮ್ಯಕರ್ಮಗಳಾದ (ಕಾರೀರ್ಯ ಒಂದು ವಿಧದ ಇಷ್ಟಿ) ಕಾರೀರ್ಯಾದಿಗಳ ಸ್ವರೂಪದಿಂದ ತ್ಯಾಗ, ಇವು ಸನ್ಯಾಸವೆಂದು ಜ್ಞಾನಿಗಳ ಮತ; ಮತ್ತು ಕುಶಲರು ಪರಮಾತ್ಮನ ಪ್ರೀತಿಯ ಹೊರ್ತು ಸರ್ವ ಕರ್ಮಗಳ ಫಲ ತ್ಯಾಗವೇ ತ್ಯಾಗದ ನಿಜವಾದ ಶಬ್ದಾರ್ಥವೆಂದು ನುಡಿಯುವರು.

ವಿಂ ಅಂ—ಸನ್ಯಾಸ ಮತ್ತು ತ್ಯಾಗ ಶಬ್ದಗಳು ಒಂದೇ ಅರ್ಥಬೋಧಕಗಳಲ್ಲ. ಅವುಗಳಲ್ಲಿ ಕಾಮ್ಯಕರ್ಮಗಳು ಐಚ್ಛಿಕ ನಿಯತವೆಂದು ಎರಡು ವಿಧ. ಮಹನೀಯರಾದ ಜನಕಾದಿಗಳು ಅನುಷ್ಠಾನಮಾಡಿದ ಅಶ್ವಮೇಧಾದಿ ಕರ್ಮಗಳು ಐಚ್ಛಿಕಗಳು. ದಶರಥಾದಿಗಳು ನಡಿಸಿದ ಪುತ್ರಕಾಮೇಷ್ಟಿ ಮುಂತಾದವುಗಳೂ, ಕಾರೀರ್ಯಾದಿಗಳೂ, ನಿಯತ ಕಾಮ್ಯಕರ್ಮಗಳೆನಿಸುವವು. ಇವೆರಡರಲ್ಲಿ, ಐಚ್ಛಿಕ ಕಾಮ್ಯಕರ್ಮದಲ್ಲಿ ಮಾತ್ರ ಫಲಾಂಶವನ್ನು ಬಿಟ್ಟುಬಿಡಲೇಬೇಕು. ಇದಕ್ಕೆ ಜನಕಾದಿಗಳೇ ಪ್ರಮಾಣ. ನಿಯತ ಕಾಮ್ಯಕರ್ಮಗಳನ್ನು ಫಲೇಚ್ಛೆಯಿಂದ ಮಾಡಬಹುದು, ಏಕೆಂದರೆ, ದಶರಥಾದಿಗಳು ಫಲೇ

ಚ್ಛೆಯಿಂದಲೇ ಹಾಗೆ ಮಾಡಿದರೆಂದು ಅನುಭವದ ಮಾತು. ಹೀಗೆ ಐಚ್ಛಿಕ ಕಾಮ್ಯಕರ್ಮಗಳಲ್ಲಿ ಫಲಪರಿತ್ಯಾಗವು, ನಿಯತ ಕಾಮ್ಯಕರ್ಮಗಳಲ್ಲಿ ಸ್ವರೂಪತ್ಯಾಗವು, ಇವೆರಡೂ 'ಸನ್ಯಾಸ' ಶಬ್ದಾರ್ಥಗಳೆಂದು ಹೇಳುವರು. ಸಕಲ ಕಾಮ್ಯಕರ್ಮಗಳಲ್ಲಿ ಐಚ್ಛಿಕ ಮತ್ತು ನಿಯತ ಕಾಮ್ಯಕರ್ಮಗಳ ಫಲತ್ಯಾಗವು 'ತ್ಯಾಗ' ಶಬ್ದಾರ್ಥವೆಂದು ಹೇಳುವರು. ಇಲ್ಲಿ, ಸಕಲ ಕರ್ಮಗಳಲ್ಲಿ ಎರಡು ಬಗೆಯ ಕಾಮ್ಯಕರ್ಮಗಳಷ್ಟೇ ಬರುವವು ಏಕೆಂದರೆ, ಕರ್ಮತ್ಯಾಗದ ನಿತ್ಯ—ನೈಮಿತ್ತಿಕ ಕರ್ಮಗಳ ಫಲವು ಅಂತಃಕರಣಶುದ್ಧಿಗೆ ಅವಶ್ಯವಾದ್ದರಿಂದ ಅವುಗಳ ತ್ಯಾಗವು ಸಂಭವಿಸುವದು. ಹಾಗಾದರೆ, ಐಚ್ಛಿಕ ಕಾಮ್ಯಕರ್ಮಗಳಲ್ಲಿರುವ ಫಲಾಂಶದ ತ್ಯಾಗವೇ ಸನ್ಯಾಸ ಮತ್ತು ತ್ಯಾಗವೆಂದು ಹೇಳಬಹುದು; ಇನ್ನು, ಐಚ್ಛಿಕ ಕಾಮ್ಯಕರ್ಮಗಳಲ್ಲಿಯ ಸನ್ಯಾಸ ಮತ್ತು ತ್ಯಾಗ ಇವುಗಳ ಭೇದವೇನು ಎಂದು ಕೇಳಿದರೆ, ಫಲತ್ಯಾಗಪೂರ್ವಕವಾದ ಕರ್ಮಾಚರಣೆಯು ಸನ್ಯಾಸವು, ಫಲತ್ಯಾಗವಷ್ಟೇ ತ್ಯಾಗವು, ಹೀಗೆಂದು ಅದರಲ್ಲಿಯ ಭೇದ ತಿಳಿ. ತ್ಯಾಗದಲ್ಲಿ ಮಾಡೋಣ ಬಿಡೋಣಗಳ ಅಭಿಪ್ರಾಯವಿಲ್ಲ. ಏಕೆಂದರೆ, ಇಚ್ಛೆಯಿಲ್ಲದೆ ಅಥವಾ ಕರ್ಮಮಾಡದೆ ಕೂಡ ಕಾಮ್ಯಕರ್ಮಗಳ ತ್ಯಾಗವು ಸನ್ಯಾಸವು, ಫಲತ್ಯಾಗವು ತ್ಯಾಗವು, ಎಂದು ಶ್ರುತಿಯ ಆಜ್ಞೆ, ಐಚ್ಛಿಕ ಕಾಮ್ಯಕರ್ಮಗಳಲ್ಲಿ ಸನ್ಯಾಸ ಮತ್ತು ತ್ಯಾಗಗಳಲ್ಲಿ ಮಾಡು—ಬಿಡುವದರಿಂದಲೇ ಭೇದ ಉಂಟು; ಆದರೆ, ನಿಯತ ಕಾಮ್ಯಕರ್ಮಗಳಲ್ಲಿ ಸ್ವರೂಪತ್ಯಾಗ ಫಲತ್ಯಾಗಗಳಿಂದ ಅವುಗಳಿಗೆ ಭೇದವಿದೆ. ಸನ್ಯಾಸ, ತ್ಯಾಗ, ಇವುಗಳಲ್ಲಿ ತ್ಯಾಗಾಂಶವು ಇದ್ದೇ ಇರುವದರಿಂದ ಅವುಗಳ ಅರ್ಥ ಒಂದೇ ಎಂದು ಮೇಲ್ನೋರಿಕೆ.

೩. ಐಚ್ಛಿಕ ಕಾಮ್ಯಕರ್ಮಗಳಲ್ಲಿ ಫಲತ್ಯಾಗವೆಂದು ಸನ್ಯಾಸತ್ಯಾಗ ಶಬ್ದಗಳಿಂದ ಹೇಳಿದ್ದೇ ತನಗೆ ಅಭಿಮತವೆಂದು ಹೇಳುವದಕ್ಕಾಗಿ ಕಾಮ್ಯಕರ್ಮಗಳಲ್ಲಿ ಮೇಲ್ಮೇಲೆ ಕಾಣಿಸುವ ವಿರೋಧವನ್ನು ಶ್ರೀಕೃಷ್ಣನು ಹೇಳಿದ್ದು :—

**त्याज्यं दोषवदित्येके कर्म प्राहुर्मनीषिणः ।**
**यज्ञदानतपःकर्म न त्याज्यमिति चापरे ॥ ३ ॥**

**ಅ೦**—ಕಾಮ್ಯಕರ್ಮವು ಬಂಧಕದೋಷವುಳ್ಳದ್ದರಿಂದ ಅದನ್ನು ಮಾಡಕೂಡದೆಂದು ಕೆಲವು ಜ್ಞಾನಿಗಳು ಹೇಳುವರು; ಮತ್ತೆ ಕೆಲವರು ಯಜ್ಞ, ದಾನ, ತಪಸ್ಸುಗಳೆಂಬ ಕರ್ಮಗಳನ್ನು ಬಿಡಕೂಡದೆಂದು ಹೇಳುವರು; ತಪಸ್ಸೆಂದರೆ ಕೃಚ್ಛ್ರ, ಚಾಂದ್ರಾಯಣಾದಿ ವ್ರತಗಳು; ಇವು ಯಜ್ಞದ ಅಂಗಗಳಾಗಿವೆ. ಅಥವಾ, ಮೊದಲನೆಯ ಪಕ್ಷದಲ್ಲಿ ಕಾಮ್ಯಕರ್ಮಗಳನ್ನು ಬಿಡಬೇಕೆಂದು ಹೇಳಿದ್ದರಲ್ಲಿ ಮಾಡುವ ನಿತ್ಯ—ನೈಮಿತ್ತಿಕ ಕರ್ಮಗಳಲ್ಲಿ ಫಲತ್ಯಾಗವೇ ಉದ್ದೇಶವಾಗಿದೆಯೇ ಹೊರ್ತು ಅವುಗಳ ಸ್ವರೂಪತ್ಯಾಗವಲ್ಲ; ಆದರೆ, ಆ ಎರಡು ಮತಗಳಿಗೂ ವಿರೋಧವಿಲ್ಲ.

**ವಿ೦ ಅ೦**—ಹಿಂದೆ, ಪ್ರಾಣಿಯು ಕರ್ಮದಿಂದ ಬದ್ಧನಾಗುವನೆಂದು ಹೇಳಿದಂತೆ, ಕಾಮ್ಯಕರ್ಮವು ಬಂಧಕದೋಷವುಳ್ಳದ್ದು. ನಾನಾದರೂ ಈ ಬಗ್ಗೆ (೩—೯) ನೆಯ ಶ್ಲೋಕದಲ್ಲಿ ಹೇಳಿರುವೆ. ಇಂಥ ಕರ್ಮ ಬಿಡಬೇಕೆಂದು ಕೆಲವು ಜ್ಞಾನಿಗಳ ಮತ, ಅನ್ಯ ಜ್ಞಾನಿಗಳು ಯಜ್ಞ, ದಾನ, ತಪಸ್ಸುಗಳೆಂಬ ಕರ್ಮಗಳನ್ನು ಮಾಡಲೇಬೇಕೆಂದು ಹೇಳುವರು. ಹಾಗಾದರೆ, ಯಜ್ಞಾದಿ ಕಾಮ್ಯಕರ್ಮಗಳನ್ನು ಬಿಡಬೇಕೆಂತಲೂ, ಬಾರದೆಂತಲೂ ಹೇಳುವವರು ಜ್ಞಾನಿಗಳೇ ಸರಿ; ಆದರೆ, ತ್ಯಜಿಸಬೇಕು, ಬಾರದು, ಹೀಗೆಂಬುದು ವಿರುದ್ಧವಲ್ಲವೇ ? ಜ್ಞಾನಿಗಳು ಪರಸ್ಪರ ವಿರುದ್ಧವಾದುದನ್ನು ಹೇಳರು. ಇದನ್ನು ಕುರಿತು ನಾನು (೨—೪೫) ನೆಯ ಶ್ಲೋಕದಲ್ಲಿ ಹೇಳಿರುವೆ. ಆದ್ದರಿಂದ ವಿರೋಧಬರದಂತೆ, ಅವರ ಅಭಿಪ್ರಾಯವನ್ನು ತಿಳಿದುಕೊಳ್ಳುವದು ಅವಶ್ಯ, ಅದು ಹೇಗಂದರೆ, ಬಿಡಕೂಡದೆಂದು ಹೇಳಿ

ದ್ದರ ಅರ್ಥವು ಸ್ವರೂಪದಿಂದ ತ್ಯಜಿಸಕೂಡದೆಂದೂ, ಬಿಡಬೇಕೆಂದು ಹೇಳಿದ್ದರಲ್ಲಿ ಫಲತ್ಯಾಗವೆಂತಲೂ, ತಿಳಿಯತಕ್ಕದ್ದು. ಹೀಗೆ ಅವರ ಅಭಿಪ್ರಾಯವನ್ನು ಅಳೆದು ತೂಗಿ ನೋಡಿದರೆ, ಫಲಾಂಶ ಬಿಟ್ಟು ಯಜ್ಞಾದಿಗಳನ್ನು ಮಾಡಬೇಕೆಂತಲೇ ಫಲಿತಾರ್ಥವು. ಇದರಿಂದ ಅವರ ಅಭಿಪ್ರಾಯಕ್ಕೆ ವಿರೋಧವಿಲ್ಲ. ಹೀಗೆ ತಿಳಿಯದೆ, ಅವರ ಮತಗಳಿಗೆ ಪರಸ್ಪರ ವಿರೋಧವಿದೆಯೆಂದು ತಿಳಿದರೆ, ನಾನು ಹೇಳುವ ಸಿದ್ಧಾಂತಕ್ಕೆ ವಿರೋಧ ಬರುವದು. ಜ್ಞಾನಿಗಳು ನಾನು ಹೇಳುವ ಸಿದ್ಧಾಂತಕ್ಕೆ ವಿರೋಧಬರುವಂತೆ ಎಂದೂ ಹೇಳರು. ಆದ್ದರಿಂದ ಬಿಡಬೇಕು, ಬಿಡಕೂಡದು ಎಂಬಲ್ಲಿ ಯಜ್ಞಾದಿಗಳನ್ನು ಬಿಡದೆ ಮಾಡಲೇಬೇಕು, ಆದರೆ, ಅವುಗಳಲ್ಲಿಯ ಫಲಾಪೇಕ್ಷೆಯನ್ನು ಬಿಟ್ಟೇತೀರಲುಬೇಕು. ಫಲಾಪೇಕ್ಷೆಯು ವಿಹಿತವಲ್ಲ.

೪. ಶ್ರೀಕೃಷ್ಣನು ಹಿಂದೆ ಹೇಳಿದ ಜ್ಞಾನಿಗಳ ಮತಗಳಿಗೆ ವಿರೋಧ ಬರದಂತೆ ಸ್ವಂತ ಮತವನ್ನು ಮಂಡಿಸಿದ್ದು:—

**निश्चयं शृणु मे तत्र त्यागे भरतसत्तम ।**
**त्यागो हि पुरुषव्याघ्र त्रिविधः संप्रकीर्तितः ॥ ४ ॥**

**ಅಂ**—ಭರತಕುಲಶ್ರೇಷ್ಠನೇ, ವಿರುದ್ಧವಾಗಿ ತೋರುವ ತ್ಯಾಗದ ವಿಷಯದಲ್ಲಿ ನನ್ನ ನಿಶ್ಚಿತ ಮತವನ್ನು ಕೇಳು, ಅದರಲ್ಲಿ ಶ್ರದ್ಧೆಯನ್ನಿಡು. ಪುರುಷ ಶ್ರೇಷ್ಠನೇ, ತ್ಯಾಗವು ಫಲತ್ಯಾಗವೆಂತಲೂ, ಮಾಡುವ ಕರ್ಮಗಳಲ್ಲಿ ಆಸಕ್ತಿತ್ಯಾಗವೆಂತಲೂ, ಪರಮಾತ್ಮನಲ್ಲಿ ಕರ್ತೃತ್ವದ ಅನುಸಂಧಾನವನ್ನಿಟ್ಟು ತಾನು ಕರ್ತನೆಂಬ ಅಭಿಮಾನತ್ಯಾಗವೆಂತಲೂ. ಮೂರು ವಿಧವೆಂದು ಕೆಲವರ ಮತ; ಇನ್ನು ಕೆಲವರು ಈ ಮೂರು ವಿಧಗಳು ಮುಂದೆ ಹೇಳುವ ಸಾತ್ವಿಕಾದಿ ಭೇದಗಳಿಗೆ ಅನುಸರಿಸಿರುವವೆಂದೂ ಹೇಳುವರು.

೫. ಹಿಂದಿನ ಶ್ಲೋಕದಲ್ಲಿ ಪ್ರತಿಜ್ಞೆಮಾಡಿದಂತೆ, ಶ್ರೀಕೃಷ್ಣನು ತನ್ನ ಸಿದ್ಧಾಂತವನ್ನು ಹೇಳಿದ್ದು:—

**यज्ञदानतपःकर्म न त्याज्यं कार्यमेव तत् ।**
**यज्ञो दानं तपश्चैव पावनानि मनीषिणाम् ॥ ५ ॥**

**ಅಂ**—ಯಜ್ಞ, ದಾನ, ತಪಸ್ಸೆಂಬ ಕರ್ಮಗಳನ್ನು ಬಿಡದೆ ಮಾಡಲೇಬೇಕು. ಏಕೆಂದರೆ, ಅವುಗಳು ಜ್ಞಾನಿಗಳನ್ನು ಪವಿತ್ರಗೊಳಿಸುವವು; ಅಂದರೆ ಬಂಧಿಸಲಾರವು; ಅಥವಾ ಅವರಿಗೆ ಮುಕ್ತಿಯಲ್ಲಿ ಹೆಚ್ಚಿನ ಆನಂದವನ್ನು ಕೊಡುವವು. ಆದ್ದರಿಂದ ಎಲ್ಲರೂ ತಮ್ಮ ತಮ್ಮ ವರ್ಣಾಶ್ರಮಗಳಿಗೆ ವಿಧಿಸಿದ ಕರ್ಮಗಳನ್ನು ಮಾಡಿ ತೀರಲೇಬೇಕು. ಯತಿಗಳಿಗೂ ಕೂಡ ಜ್ಞಾನಯಜ್ಞವು, ವಿದ್ಯೆ, ಅಭಯದಾನ, ಬ್ರಹ್ಮಚರ್ಯ, ಮೊದಲಾದ ತಪಸ್ಸುಗಳು, ಇದ್ದೇ ಇರುವವು. ಸ್ತ್ರೀ-ಶೂದ್ರರಿಗೂ ಶ್ರೀವಿಷ್ಣುವಿನ ಧ್ಯಾನವೆಂಬ ಯಜ್ಞವೂ, ಸತ್ಯ, ಉಪವಾಸ ಮುಂತಾದ ತಪಸ್ಸುಗಳೂ, ಇದ್ದೇ ಇರುವವು.

ವಿಂ ಅ—ಯಜ್ಞ, ದಾನ, ತಪಸ್ಸುಗಳೆಂಬ ಕರ್ಮಗಳನ್ನು ಬಿಡಲಾಗದು; ಮಾಡಲೇಬೇಕು. ಇಲ್ಲಿ, ಬಿಡಕೂಡದೆಂದು ಹೇಳುವದರಿಂದಲೇ ಮಾಡಬೇಕೆಂಬ ಅರ್ಥವು ಸಿದ್ಧವಾಗುವದು; ಆದರೆ, ಮಾಡಲೇಬೇಕೆಂದು ಹೇಳಿದ್ದು ನಿಶ್ಚಯಾರ್ಥದಲ್ಲಿ. ಹಾಗಾದರೆ, ಯಜ್ಞಾದಿ ಕರ್ಮಗಳನ್ನು ಮಾಡಲೇಬೇಕೆಂದು ಹೇಳಲು ಕಾರಣವೇನೆಂದರೆ, ಅವುಗಳು ಅಜ್ಞಾನಿಗಳ ಬುದ್ಧಿಯನ್ನೂ, ಮೋಕ್ಷೇಚ್ಛುಗಳ

ಅಂತಃಕರಣವನ್ನೂ, ಶುದ್ಧಿಗೊಳಿಸುವದಲ್ಲದೆ, ಮುಕ್ತಿಯಲ್ಲಿ ಜ್ಞಾನಿಗಳ ಆನಂದ ವೃದ್ಧಿಗೆ ಕಾರಣವಾಗುವವು. ಇನ್ನು, ಯಜ್ಞ, ದಾನ ಶಬ್ದಗಳಿಗೆ ಸಮಾಸದಿಂದ ಅರ್ಥಮಾಡಿದರೆ, ಯಜ್ಞ, ದಾನ ಮೊದಲಾದವುಗಳನ್ನು ಬಿಡಕೂಡದೆಂದು ಸೂಚಿತವಾಗುವದು. ಯಜ್ಞ ಮತ್ತು ದಾನ ಎಂದು ಭಿನ್ನ ಪದವಿಟ್ಟು ಅರ್ಥಮಾಡಿದರೆ, ಅವುಗಳಲ್ಲಿ ಯಾವುದೇ ಒಂದು ಅಂತಃಕರಣಶುದ್ಧಿಗೆ ಸಾಕು, ಅಂದ ಬಳಿಕ ಅವೆಲ್ಲವೂ ಕೂಡಿದ್ದರೆ, ಅಂತಃಕರಣಶುದ್ಧಿಗೊಳಿಸುವವೆಂದು ಹೇಳಲಿಕ್ಕೆ ಕಾರಣವಿಲ್ಲ ಎಂಬುವ ಅರ್ಥ ಸೂಚಿತವಾಗುವದು. ಇದೀಗ ನನ್ನ ಅಭಿಪ್ರಾಯ.

೬. ಹಿಂದಿನ ಶ್ಲೋಕದಲ್ಲಿ ಯಜ್ಞಾದಿ ಕರ್ಮಗಳನ್ನು ಮಾಡಲೇಬೇಕು, ಹೊರ್ತು ಬಿಡತಕ್ಕದ್ದಲ್ಲವೆಂಬುದು ಅಯೋಗ್ಯವು. ಏಕೆಂದರೆ, ಕರ್ಮವನ್ನು ತ್ಯಜಿಸಬೇಕೆಂದು ಹೇಳುವ ಜ್ಞಾನಿಗಳ ಮತಕ್ಕೆ ಅದರಿಂದ ಬಾಧೆ ಬರುವದಲ್ಲ ? ಎಂದು ಸಂದೇಹಗೊಂಡರೆ, ಕರ್ಮಫಲದಲ್ಲಿ ಆಸಕ್ತಿಯ ತ್ಯಾಗವೇ ಅವರ ಉದ್ದಿಷ್ಟ ಅಭಿಪ್ರಾಯ, ಕರ್ಮವನ್ನು ಸ್ವರೂಪದಿಂದ ಬಿಡತಕ್ಕದ್ದಲ್ಲ ಎಂಬೀ ಅಭಿಪ್ರಾಯದಿಂದ ಯಜ್ಞಾದಿ ಕರ್ಮಗಳನ್ನು ಮಾಡುವ ವಿಧ ಹೇಳಿದ್ದು, ಅಥವಾ ಯಜ್ಞಾದಿ ಕರ್ಮಗಳು ಪವಿತ್ರಗೊಳಿಸುವದರಿಂದ ಅವನ್ನು ಮಾಡಲೇಬೇಕೆಂದು ಹೇಳಿ ಇದೆ. ಅವು ಸ್ವಾಭಾವಿಕವಾಗಿಯೇ ಪಾವನಗೊಳಿಸುವಂಥವಿದ್ದರೆ, ಫಲಾಪೇಕ್ಷೆಯಿಂದ ಅವುಗಳನ್ನಾಚರಿಸಿದರೂ, ಅವು ಪವಿತ್ರಗೊಳಿಸದಿರಲಾರವು. ಅಂದ ಬಳಿಕ, ಕೃಷ್ಣಾ, ಅಲ್ಲಲ್ಲಿ ನೀನು ಫಲತ್ಯಾಗದ ಪಲ್ಲವಿಯನ್ನೇ ಹಾಡುವದೇಕೆ ? ಮೇಲಾಗಿ, ನೀನು (೨–೪೭, ೨–೫೧, ೫–೧೨, ೪–೨೦, ೬–೧) ಈ ಶ್ಲೋಕಗಳಲ್ಲಿ ಹಾಗೆ ಹೇಳಿರುವಿ ಕೂಡ. ಆದ್ದರಿಂದ ನನ್ನ ಸಂದೇಹ ನಿವಾರಿಸಬೇಕೆಂದು ನುಡಿದದ್ದಕ್ಕೆ ಉತ್ತರ ಹೇಳಿದ್ದು —

एतान्यपि तु कर्माणि सङ्गं त्यक्त्वा फलानि च ।
कर्तव्यानीति मे पार्थ निश्चितं मतमुत्तमम् ॥ ६ ॥

**ಅಂ**– ಹಿಂದೆ ಉಕ್ತವಾದ ಯಜ್ಞಾದಿ ಕರ್ಮಗಳಲ್ಲಿ ಮಮತೆ ಅಭಿಮಾನಗಳನ್ನು ಬಿಟ್ಟು, ಸ್ವರ್ಗಾದಿ ಫಲಾಪೇಕ್ಷೆಯಿಲ್ಲದೆ, ಆ ಕರ್ಮಗಳನ್ನು ಮಾಡಲೇಬೇಕಂದು ನನ್ನ ನಿಶ್ಚಿತ ಮತ್ತು ಉತ್ತಮವಾದ ಮತ.

**ವಿಂ ಅಂ**—ಯಜ್ಞಾದಿ ಕರ್ಮಗಳು ಕಾಮ್ಯವಾದರೂ, ಮಾಡಬೇಕೆಂದು ವಿಧಿಸಲ್ಪಟ್ಟದ್ದರಿಂದ ಅವುಗಳಲ್ಲಿ ಫಲಾಪೇಕ್ಷೆಯನ್ನಿಡದೆ ಆಚರಿಸತಕ್ಕದ್ದು. ಇಲ್ಲಿ ತು ಶಬ್ದದಿಂದ ಫಲಾಪೇಕ್ಷೆಯಿಂದ ಮಾಡಿದ ಕರ್ಮಗಳಿಗಿಂತ ಅದಿಲ್ಲದೆ ಮಾಡಿದ ಕರ್ಮಗಳು ಮಹಾಫಲಕೊಡತಕ್ಕವು ಎಂದು ಸೂಚಿತವಾಗುವದು. ಯಜ್ಞಾದಿ ಕರ್ಮಗಳು ಕಾಮ್ಯವಾದರೂ, ಫಲಾಪೇಕ್ಷೆ ಇಲ್ಲದೆ ಮಾಡಿದರೆ, ಅಂತಃಕರಣ ಶುದ್ಧಿಗೊಳಿಸುವವು. ಅಂದಬಳಿಕ ನಿತ್ಯ–ನೈಮಿತ್ತಿಕ ಕರ್ಮಗಳು ಶುದ್ಧಿಗೊಳಿಸುವವೆಂದು ಒಡೆದು ಹೇಳಲಿಕ್ಕೇ ಬೇಡ. ಹಾಗಾದರೆ, ನಿತ್ಯ–ನೈಮಿತ್ತಿಕ ಕರ್ಮಗಳು ಕಾಮ್ಯವಾಗದ್ದರಿಂದ ಅವುಗಳಿಗೆ ಫಲವಿಲ್ಲ; ಅಂದಬಳಿಕ ಫಲ ಬಿಡಬೇಕೆಂದು ಹೇಳುವದೇಕೆ ? ಎಂದು ಆಕ್ಷೇಪಿಸಿದರೆ, ನಿತ್ಯ-ನೈಮಿತ್ತಿಕ ಕರ್ಮಗಳಿಗೂ ಫಲ ಉಂಟು. ಈ ವಿಷಯಕ್ಕೆ (ಛಾಂ ೨–೧೩–೧, ಬೃಂ ೩–೫–೧೬, ನಾರಾಂಶ್ರುತಿ ೪೯) ಈ ಮಂತ್ರಗಳಲ್ಲಿ ಫಲವುಂಟೆಂದು ಹೇಳಲಾಗಿದೆ. ಆದುದರಿಂದ ಫಲತ್ಯಾಗ ಹೇಳಿದ್ದು ಸೂಕ್ತವೇ ಸರಿ. ಇನ್ನು, ಫಲವಿಲ್ಲದ ಕರ್ಮಗಳಲ್ಲಿ ಹೇಗೆ ಪ್ರವೃತ್ತಿ ಹುಟ್ಟುವದೆಂದು ಕೇಳಿದರೆ, ಅವುಗಳು ಅಂತಃಕರಣವನ್ನು ನಿರ್ಮಲಗೊಳಿಸಿ ಜ್ಞಾನರೂಪ ಫಲವನ್ನು ಕೊಡುವದರಿಂದ ಸಫಲವೇ ಸರಿ. ಅವು ಸಫಲವಾದರೆ, ಅಕಾಮ್ಯವೆಂದು ಹೇಳುವದೇಕೆ ? ಅಂದರೆ ಅವುಗಳಿಂದ ಫಲಪ್ರಾಪ್ತಿಯಾದರೂ, ಫಲಾಪೇಕ್ಷೆ ಇಲ್ಲದ್ದರಿಂದ ಅವೂ ಅಕಾಮ್ಯವೇ ಎನಿಸುವವು ಕಾಮ್ಯ, ಅಕಾಮ್ಯ, ಕರ್ಮಗಳಿಗೆ ಫಲವಿರು

ವದು, ಇಲ್ಲದಿರುವದು, ಇದರಿಂದ ಭೇದವಾಗದೆ ಫಲಾಪೇಕ್ಷೆಯಿಂದ ಹೆಚ್ಚುಕಡಿಮೆಯಾಗುವದು. ಈ ಪ್ರಮೇಯವನ್ನು ಹಿಂದೆ ೩ನೆಯ ಅಧ್ಯಾಯದಲ್ಲಿ ಸ್ಪಷ್ಟಗೊಳಿಸಲಾಗಿದೆ. ಕಾಮ್ಯಕರ್ಮಗಳನ್ನು ಫಲಾಪೇಕ್ಷೆಯಿಂದ ಮಾಡಿದರೆ, ಅಂತಃಕರಣವನ್ನು ಶುದ್ಧಿಗೊಳಿಸಿದರೂ, ಆ ಶುದ್ಧಿಯು ಜ್ಞಾನಕ್ಕೆ ಉಪಯೋಗವಾಗದೆ ಆಯಾ ಫಲಭೋಗಕ್ಕೆ ಉಪಯೋಗವಾಗುವದು. ಜ್ಞಾನೋಪಯೋಗಿಯಾಗುವ ಅಂತಃಕರಣಶುದ್ಧಿಯು ಫಲಾಪೇಕ್ಷೆ ಇಲ್ಲದೆ ಆಚರಿಸಿದ ಕರ್ಮಗಳಿಂದಲೇ ದೊರೆಯುವದು. ಆದುದರಿಂದ ಜ್ಞಾನಕ್ಕೆ ಸಾಧನವಾದ ಅಂತಃಕರಣಶುದ್ಧಿಗಾಗಿಯೇ ಫಲಾಪೇಕ್ಷೆ ಇಲ್ಲದೆ ಕರ್ಮ ಮಾಡಬೇಕೆಂದು ನನ್ನ ನಿಶ್ಚಿತ ಮತವು. ಇದರಿಂದ ಹೊರಡುವ ನಿಷ್ಕರ್ಷವೇನಂದರೆ, ನಿಯತಾದಿ ಕರ್ಮಗಳನ್ನು ಫಲಾಪೇಕ್ಷೆಯಿಲ್ಲದೆ ಆಚರಿಸುವದು ಸನ್ಯಾಸ ಮತ್ತು ತ್ಯಾಗ ಎಂದು ಅಲ್ಲಲ್ಲಿ ಹೇಳಿದೆಯೇ, ಹೊರತಾಗಿ ಅವುಗಳನ್ನು ಸ್ವರೂಪದಿಂದ ಬಿಡಬೇಕೆಂದಲ್ಲ.

೭. ಸ್ವರೂಪದಿಂದ ಕರ್ಮಗಳನ್ನು ಬಿಡಕೂಡದೆಂದು ಹೇಳಲು ಹಿಂದೆ ೪ನೆಯ ಶ್ಲೋಕದಲ್ಲಿ ತ್ಯಾಗವು ಮೂರು ವಿಧವಾಗಿದೆ ಎಂದು ಹೇಳಿದ ವಿಷಯವನ್ನು ವರ್ಣಿಸಿದ್ದು —

**नियतस्य तु संन्यासः कर्मणो नोपपद्यते ।**
**मोहात्तस्य परित्यागस्तामसः परिकीर्तितः ॥ ७ ॥**

ಅಂ— ವರ್ಣಾಶ್ರಮಗಳಿಗೆ ವಿಧಿಸಲ್ಪಟ್ಟ ವಿಹಿತ ಕರ್ಮಗಳ ತ್ಯಾಗವು ಯೋಗ್ಯವಲ್ಲ; ಏಕೆಂದರೆ, ಪದ್ಮಪುರಾಣದಲ್ಲಿ "ತಮ್ಮ ತಮ್ಮ ವರ್ಣಾಶ್ರಮಗಳಿಗೆ ಉಚಿತವಾದ ಯಜ್ಞಾದಿ ಕರ್ಮಗಳನ್ನು ಬಿಟ್ಟರೆ, ಅಧಿಕಾರಿಯು ನರಕಭಾಗಿಯಾಗುವಲ್ಲಿ ಸಂದೇಹವಿಲ್ಲ" ಎಂದು ಪ್ರತಿಬಂಧ ಹೇಳಲಾಗಿದೆ. ತ್ಯಾಗವೆಂದರೆ ಸ್ವರೂಪದಿಂದಲೇ ತ್ಯಾಗವು; ಅಲ್ಲದೆ, ಕರ್ಮಾಸಕ್ತಿ, ಕರ್ಮಫಲ, ಇವುಗಳ ತ್ಯಾಗವಲ್ಲೆಂಬ ಮಿಥ್ಯಾಜ್ಞಾನದ ಮೋಹಕ್ಕೆ ಒಳಪಟ್ಟು ಮಾಡಿದ ಯಜ್ಞಾದಿ ಕರ್ಮಗಳ ತ್ಯಾಗವು ತಾಮಸವೆನಿಸುವದು.

**ವಿಂ ಅಂ**—ಮಾಡಬೇಕೆಂದು ವಿಧಿಸಿದ ನಿತ್ಯ ಕರ್ಮಗಳ ತ್ಯಾಗವು ಮಿಥ್ಯಾಜ್ಞಾನ ಮತ್ತು ವಿಪರೀತಜ್ಞಾನ ಮೂಲಕವಾಗಿದೆ. ಲೋಕದಲ್ಲಿ ಮಾಡಲ್ಪಡುವ ಕರ್ಮಗಳು ಬಂಧಕವಾಗುವವೆಂಬ ವಿಪರೀತಜ್ಞಾನದಿಂದ ತಾಮಸರು ಆ ಕರ್ಮಗಳನ್ನು ತ್ಯಜಿಸುವದು ಕಂಡಿದೆ. ತಾಮಸ ತ್ಯಾಗವು ವಿಪರೀತಜ್ಞಾನ ಮೂಲಕವೆಂತಲೂ, ಅಜ್ಞಾನಮೂಲಕವೆಂತಲೂ, ಎರಡು ವಿಧ. ಏಕೆಂದರೆ, ಅಜ್ಞಾನ ವಿಪರೀತಜ್ಞಾನಗಳು ತಮೋಗುಣದ ಕಾರ್ಯಗಳು. ಈ ಬಗ್ಗೆ ೧೪, ೧೫ ಶ್ಲೋಕಗಳಲ್ಲಿ ಹೇಳಲಾಗಿದೆ. ಅವುಗಳಲ್ಲಿ ಎರಡನೆಯ ವಿಧದ ತ್ಯಾಗವು ಹೆಚ್ಚು ದೋಷವುಳ್ಳದ್ದು. ತಾಯಿತಂದೆ, ಅರಸು ಇವರನ್ನು ಕುರಿತು ಅಜ್ಞಾನದಿಂದ ಮಾಡಿದ ಅವಮಾನವು ವಿಪರೀತಜ್ಞಾನದಿಂದ ಮಾಡಿದ ಅವಮಾನಕ್ಕಿಂತ ಹೆಚ್ಚು ದೂಷ್ಯವಾದುದು. ಹಾಗಾದರೆ, ತಾಮಸರು ಅಜ್ಞಾನ, ವಿಪರೀತಜ್ಞಾನ ಮೂಲಕ ಕರ್ಮಬಿಡುವರೆಂದು ಹೇಳುವದೇಕೆ ? ಆ ಕರ್ಮಗಳು ತ್ಯಜಿಸಲು ಯೋಗ್ಯವೆಂಬ ಯಥಾರ್ಥ ಜ್ಞಾನದಿಂದಲೇ ಬಿಡುವರೆಂದು ಏಕೆ ಹೇಳಲಾಗದು ಎಂದು ಕೇಳಿದರೆ, ವರ್ಣಾಶ್ರಮಗಳಿಗೆ ಉಚಿತವಾದ ನಿತ್ಯ ನೈಮಿತ್ತಿಕ ಮತ್ತು ಕಾಮ್ಯಕರ್ಮಗಳ ಸ್ವರೂಪದಿಂದ ತ್ಯಾಗವು ಯೋಗ್ಯವಲ್ಲ; ಹಾಗೆ ತಿಳಿಯುದಿದ್ದರೆ, ಅವುಗಳನ್ನು ಪ್ರತಿಪಾದಿಸುವ ಶಾಸ್ತ್ರಕ್ಕೆ ವೈಯರ್ಥ್ಯ ಬರುವದು; ಮೇಲಾಗಿ ಅಂತಃಕರಣಶುದ್ಧಿಗೆ ಬೇಕಾದ ಜ್ಞಾನವು ಇಲ್ಲದಂತಾಗಿ, ಮೋಕ್ಷದ ದ್ವಾರವೇ ಮುಚ್ಚಿದಂತಾದೀತು; ಆದ್ದರಿಂದ ವಿಹಿತಕರ್ಮಗಳನ್ನು ಸ್ವರೂಪದಿಂದ ಬಿಡಬೇಕೆಂದು ಹೇಳುವದು ವಿಪರೀತಜ್ಞಾನವೇ ಸರಿ. ಅಂಥ ಜ್ಞಾನದಿಂದ ಅನರ್ಥವು ತಪ್ಪೀತೇ ? ಇಲ್ಲ.

೮.

**दुःखमित्येव यत्कर्म कायक्लेशभयात्त्यजेत् ।**
**स कृत्वा राजसं त्यागं नैव त्यागफलं लभेत् ॥ ८ ॥**

**ಅಂ**— ದುಃಖವೂ, ದೇಹಕ್ಕೆ ಕ್ಲೇಶವೂ, ಉಂಟಾಗುವವೆಂಬ ಭೀತಿಯಿಂದ ವಿಹಿತಕರ್ಮತ್ಯಾಗವು ರಾಜಸವು. ಇಂಥ ರಾಜಸ ತ್ಯಾಗಿಯಾದ ಅಧಿಕಾರಿಯು ತ್ಯಾಗದ ಫಲವೆಂದರೆ, ಪರಮಾತ್ಮನ ಪ್ರೀತಿ ಎಂಬ ಫಲವನ್ನು ಹೊಂದಲರಿಯನು.

**ವಿಂ ಅಂ**— ಕಣ್ಣಿಗೆ ಹೊಗೆಬಡಿಯುವದರಿಂದ ಆಗುವ ತಾತ್ಕಾಲಿಕ ದುಃಖ, ಶರೀರಕ್ಕೆ ಅಸ್ವಾಸ್ಥ್ಯ ಉಂಟಾಗುವದೆಂಬ ಭೀತಿ, ಮತ್ತು ದ್ರವ್ಯ ಸಂಪಾದನೆಗಾಗಿ ದೇಹಕ್ಕೆ ಆಯಾಸ ಉಂಟಾಗುವದೆಂಬ ಅಂಜಿಕೆ ಇವುಗಳಿಗೆ ವಿಹಿತಕರ್ಮವು ಕಾರಣವಾಗುವದೆಂದು ಹೆದರಿ, ಮಾಡಿದ ವಿಹಿತ ಕರ್ಮತ್ಯಾಗವೇ ರಾಜಸತ್ಯಾಗವು, ಹೊರ್ತು ಮೋಹದಿಂದ ಮಾಡಿದ ತ್ಯಾಗವಲ್ಲ. ಇಂತಹ ತ್ಯಾಗದಿಂದ ತ್ಯಾಗದ ಫಲದೊರೆಯದು, ಅಂದರೆ, ಅದರಿಂದ ಅಂತಃಕರಣದ ಶುದ್ಧಿಯಾಗದೆ, ಜ್ಞಾನ, ಮೋಕ್ಷಗಳು ದೊರೆಯಲಾರವು, ಮೇಲಾಗಿ, ಸಾತ್ವಿಕ ತ್ಯಾಗದ ಉತ್ತಮ ಫಲವೂ, ತಾಮಸ ತ್ಯಾಗದ ಅನರ್ಥಕಾರಕ ಫಲವೂ, ದೊರೆಯವು. ಸತ್ವಗುಣ ಮೂಲಕ ಜ್ಞಾನದಿಂದ ಆಚರಿಸಿದ ಕರ್ಮವು ಮೋಕ್ಷಕ್ಕೆ ಸಾಧನವು. ತಮೋಗುಣ ಮೂಲಕ ವಿಪರೀತಜ್ಞಾನದಿಂದ ಬಿಟ್ಟ ಕರ್ಮವು ಮಹಾ ಅನರ್ಥಕ್ಕೆ ಸಾಧನವಾಗುವದು; ಆದರೆ, ರಜೋಗುಣ ಮೂಲಕ ದ್ರವ್ಯತ್ಯಾಗದಿಂದ ಆಚರಿಸಿದ ಕರ್ಮವು ಮೋಕ್ಷಕ್ಕೂ, ಮಹಾ ಅನರ್ಥಕ್ಕೂ, ಕಾರಣವಾಗದೆ, ವಿಹಿತವನ್ನಾಚರಿಸದ್ದರಿಂದ ಒದಗುವ ಅನಿಷ್ಟಕ್ಕೆ ಕಾರಣವಾಗುವದು. ಹಾಗಾದರೆ, ಸಾತ್ವಿಕ ರಾಜಸ ತ್ಯಾಗಗಳಿಗೆ ಸ್ವರೂಪವಷ್ಟೇ ಹೇಳಿದಂತೆ ರಾಜಸ ತ್ಯಾಗಕ್ಕೆ ಅದನ್ನು ಹೇಳದೆ, ಫಲವಿಲ್ಲೆಂದು ಹೇಳಿದ್ದೇಕೆಂದು ಕೇಳಿದರೆ, ಸಾತ್ವಿಕ ತ್ಯಾಗದಿಂದ ಜ್ಞಾನದ್ವಾರಾ ಮೋಕ್ಷವಾಗುವದೆಂಬರ್ಥವೂ, ತಾಮಸ ತ್ಯಾಗದಿಂದ ನರಕಾದಿ ಮಹಾ ಅನರ್ಥಗಳು ಉಂಟಾಗುವವೆಂಬ ಅರ್ಥವೂ, ಸ್ಪಷ್ಟವಾದುದರಿಂದ, ಅವುಗಳಿಗೆ ಫಲ ಹೇಳಿಲ್ಲ. ಇನ್ನು, ರಾಜಸ ತ್ಯಾಗದಲ್ಲಿ ವಿಪರೀತಜ್ಞಾನವಿಲ್ಲದ್ದರಿಂದ ಅದು ಸಾತ್ವಿಕತ್ಯಾಗಕ್ಕೆ ಸದೃಶವಾಗಿದೆ, ಮತ್ತು ಅದರಲ್ಲಿ ಕರ್ಮಾಚರಣೆ ಇಲ್ಲದ್ದರಿಂದ ತಾಮಸತ್ಯಾಗಕ್ಕೆ ಸದೃಶವಾಗಿದೆ. ಆದ್ದರಿಂದ ರಾಜಸತ್ಯಾಗಕ್ಕೆ ಸಾತ್ವಿಕ ಫಲವುಂಟೋ, ತಾಮಸ ಫಲವುಂಟೋ ಎಂಬ ಸಂದೇಹ ಬರುವದು. ಅದರ ನಿರಸನೆಗಾಗಿ ರಾಜಸತ್ಯಾಗಕ್ಕೆ ರಾಜಸ—ಸಾತ್ವಿಕ ತ್ಯಾಗಗಳ ಫಲವಾಗದೆ, ಕೇವಲ ವಿಹಿತಕರ್ಮವನ್ನು ಬಿಟ್ಟದ್ದರಿಂದ ಆಗುವ ಫಲವೇ ಅದಕ್ಕೂ ಲಭಿಸುವದೆಂದು ಹೇಳುವದಕ್ಕಾಗಿ ರಾಜಸ ಫಲ ಹೇಳಿದೆ; ಹಾಗಾದರೆ, ರಾಜಸ ಮತ್ತು ತಾಮಸರಿಬ್ಬರು ಅಸುರಕೋಟಿಯಲ್ಲಿ ಸೇರಿದ್ದರಿಂದ ಅವರಲ್ಲಿ ಫಲಭೇದವೇಕೆಂದು ಕೇಳಿದರೆ, ವಿಹಿತ ಕರ್ಮವು ಬಂಧಕವಾಗಿ ಪರಲೋಕ ದುಃಖಕ್ಕೆ ಕಾರಣವಾಗುವದೆಂಬ ಭೀತಿಯಿಂದ ತಾಮಸತ್ಯಾಗಿಯು ಕರ್ಮವನ್ನು ಬಿಡುವನು. ರಾಜಸತ್ಯಾಗಿಯು ಪರಲೋಕದಲ್ಲಿ ದುಃಖವಾಗದೆ, ಸುಖವಾಗುವದೆಂಬ ಜ್ಞಾನವುಳ್ಳವನಾದರೂ, ದೇಹಕ್ಕೆ ಆಯಾಸವಾಗುವ ಭಯದಿಂದ ಕರ್ಮವನ್ನು ತೊರೆಯುವನು, ಇದು ರಾಜಸ ತಾಮಸರಿಗಿದ್ದ ಭೇದವು. ಇನ್ನು ತಾಮಸತ್ಯಾಗಿಯು "ಕರ್ಮವನ್ನೇಕೆ ಮಾಡುವದಿಲ್ಲ" ಎಂದು ಕೇಳಿದರೆ, "ವಿಹಿತ ಕರ್ಮವು ಬಂಧಕವಾಗುವ ಮೂಲಕ" ಎಂದು ಉತ್ತರ ಹೇಳುವನು; ಅದರಿಂದ ಅನ್ಯರು ಕೂಡ ವಿಹಿತ ಕರ್ಮ ಬಿಡುವರು. ಹೀಗೆ ತಾಮಸತ್ಯಾಗಿಯು ತನ್ನನ್ನು ನರಕದಲ್ಲಿ ನೂಕುವದಲ್ಲದೆ, ಅನ್ಯರನ್ನೂ ಎಳೆಯುವನು. ರಾಜಸತ್ಯಾಗಿಯನ್ನು ಕುರಿತು "ನೀನೇಕೆ ಕರ್ಮಮಾಡುವದಿಲ್ಲ" ಎಂದು ಕೇಳಿದರೆ, ಅವನು "ವಿಹಿತ ಕರ್ಮವು ಅವಶ್ಯವೇನೋ ಸರಿ, ಆದರೆ ದೇಹದ ಅಸ್ವಾಸ್ಥ್ಯ ಮೂಲಕ ನಾನು ಮಾಡುವದಿಲ್ಲ" ಎಂದು ಉತ್ತರ ಕೊಡುವನು. ಅದರಿಂದ, ಅವನಿಗೆ ಅನಿಷ್ಟ ಒದಗಿದರೂ,

ಅನ್ಯರ ಅನಿಷ್ಟಕ್ಕೆ ಕಾರಣನಾಗನು; ಆದ್ದರಿಂದ ತಾಮಸ ತ್ಯಾಗಕ್ಕಿಂತ ರಾಜಸ ತ್ಯಾಗವೇ ಮೇಲು. ಈ ಬಗ್ಗೆ ಎರಡು ಕಣ್ಣಿಲ್ಲದವನಿಗಿಂತ ಒಕ್ಕಣ್ಣನೂ, ಮೂಕನಿಗಿಂತ ತೊದಲು ನುಡಿಯುವವನೇ ಮೇಲು ಎಂಬುದು ಲೋಕದ ಅನುಭವ; ಆದ್ದರಿಂದ ವಿಹಿತಕರ್ಮವನ್ನು ದೇಹಾಯಾಸ ಮುಂತಾದವುಗಳ ಭೀತಿಯಿಂದ ಎಂದೂ ಬಿಡತಕ್ಕದ್ದಲ್ಲ.

೯.

कार्यमित्येव यत्कर्म नियतं क्रियतेऽर्जुन ।
संगं त्यक्त्वा फलं चैव स त्यागः सात्त्विको मतः ॥ ९ ॥

ಅಂ— ವಿಹಿತಕರ್ಮವನ್ನು ಅವಶ್ಯವಾಗಿ ಮಾಡತಕ್ಕದ್ದೇನೋ ಸರಿ; ಬಿಟ್ಟರೆ ಪ್ರತಿಬಂಧಕ ಉಂಟೆಂಬ ಜ್ಞಾನದಿಂದಲೂ, ಕರ್ಮದಲ್ಲಿ ಆಸಕ್ತಿ, ಸ್ವರ್ಗಾದಿಫಲ, ಇವುಗಳ ತ್ಯಾಗದಿಂದಲೂ, ವರ್ಣಾಶ್ರಮೋಚಿತ ಕರ್ಮಗಳನ್ನಾಚರಿಸುವವನು ಸಾತ್ವಿಕನೆನಿಸುವನು; ಇದೇ ಸಾತ್ವಿಕತ್ಯಾಗವು.

ವಿಂ ಅಂ— ವರ್ಣಾಶ್ರಮಗಳಿಗೆ ವಿಹಿತವಾದ ನಿತ್ಯಾದಿ ಕರ್ಮಗಳಲ್ಲಿ ಆಸಕ್ತಿ ಫಲಗಳನ್ನೀಡಾಡಿ, ಅವುಗಳನ್ನು ಮಾಡಲೇಬೇಕೆಂಬ ಯಥಾರ್ಥಜ್ಞಾನವುಳ್ಳವರು ಸಾತ್ವಿಕರು. ಅವರು ಆ ಕರ್ಮಗಳಲ್ಲಿ ಫಲಾಪೇಕ್ಷೆ ಬಿಡುವದರಿಂದ ಅದು ಸಾತ್ವಿಕತ್ಯಾಗವೆನಿಸುವದು. ಅರ್ಜುನಾ, ನೀನು ಯಾವಾಗಲೂ ನಿರ್ಮಲ ಕರ್ಮಮಾಡುವದರಿಂದ ನಿನಗೆ ಅರ್ಜುನನೆಂಬ ಹೆಸರು ಬಂದಿದೆ. ಆದ್ದರಿಂದ ನಿನಗೆ ಸಾತ್ವಿಕತ್ಯಾಗವೇ ಯೋಗ್ಯವು; ಅಂದರೆ ನೀನು ವಿಹಿತಕರ್ಮಗಳಲ್ಲಿ ಆಸಕ್ತಿ, ಫಲಗಳತ್ಯಾಗದಿಂದ ಅವುಗಳನ್ನು ಮಾಡುವದೇ ಯೋಗ್ಯವು.

೧೦. ಸಾತ್ವಿಕತ್ಯಾಗಗಳಲ್ಲಿಯು ವಿಶೇಷವನ್ನು ತಿಳಿಸಿಹೇಳಿದ್ದು —

न द्वेष्ट्यकुशलं कर्म कुशले नानुषज्जते ।
त्यागी सत्त्वसमाविष्टो मेधावी छिन्नसंशयः ॥ १० ॥

ಅಂ— ತಾತ್ಕಾಲಿಕ ಸುಖವನ್ನಷ್ಟೇ ಅಲ್ಲ; ಆದರೆ ದೇಹದುಃಖಪಡಿಸುವ ಕರ್ಮಗಳನ್ನು ಕೂಡ ಸಾತ್ವಿಕನು ಹೀನೈಸುವದಿಲ್ಲ. ವಿಹಿತಕರ್ಮಗಳಿಂದ ಹಿಂದೆ ಸಂಪಾದಿಸಿದ ಪುಣ್ಯಫಲದಲ್ಲಿ ಆಸಕ್ತಿಯನ್ನಿಡುವದಿಲ್ಲ. ಹೀಗೆ ಸತ್ವಗುಣವುಳ್ಳ, ಪರಮಾತ್ಮನ ತತ್ವಜ್ಞಾನವುಳ್ಳ, ಪರಾಪರತತ್ವವಿಷಯದಲ್ಲಿ ಅಥವಾ ಪರಮಾತ್ಮನ ವಿಷಯಕ ಧರ್ಮಾಚರಣೆಯಲ್ಲಿ ಸಂದೇಹವಿರದ, ಸಾತ್ವಿಕನು ಮಾಡಿದ ಸಕಲಕರ್ಮಗಳನ್ನು ಪರಮಾತ್ಮನಿಗೆ ಅರ್ಪಿಸುವದರಿಂದ ಸಾತ್ವಿಕತ್ಯಾಗಿ ಎನಿಸುವನು.

೧೧. ಹಿಂದೆ ೬ನೆಯ ಶ್ಲೋಕದೊಳಗೆ ಕರ್ಮದಲ್ಲಿ ಆಸಕ್ತಿ ಮತ್ತು ಫಲ, ಇವುಗಳ ತ್ಯಾಗವೇ 'ತ್ಯಾಗ' ಶಬ್ದಾರ್ಥವೆಂದು ನಿನ್ನ ನಿಶ್ಚಿತ ಸಿದ್ಧಾಂತವೆಂದು ಹೇಳಿರುವಿ. ಈಗ, ೩ನೆಯ ಶ್ಲೋಕದಲ್ಲಿ ಕರ್ಮವು ದೋಷಪೂರ್ಣವಾದುದರಿಂದ ತ್ಯಜಿಸಬೇಕೆಂದು ಹೇಳುವ ಮತಖಂಡನೆಗಾಗಿ ಎಲ್ಲರೂ ಕರ್ಮವನ್ನು ಸ್ವರೂಪತಃ ಸರ್ವಥಾ ಬಿಡೋಣ ಅಥವಾ ವಿಹಿತ ಕರ್ಮತ್ಯಾಗ ಎಂಬುದೇ 'ತ್ಯಾಗ' ಶಬ್ದಾರ್ಥವಲ್ಲ ಎಂಬ ಅಭಿಪ್ರಾಯದಿಂದ ಹೇಳಿದ್ದು —

न हि देहभृता शक्यं त्यक्तुं कर्माण्यशेषतः ।
यस्तु कर्मफलत्यागी स त्यागीत्यभिधीयते ॥ ११ ॥

ಅಂ—“ಕರ್ಮಮಾಡದೆ ಯಾವನೂ ಇರಲಾರನು” ಎಂದು ಹಿಂದೆ (೩–೫) ನೆಯ ಶ್ಲೋಕದಲ್ಲಿ ಹೇಳಿದ್ದರಿಂದ ದೇಹಧಾರಿಗಳಿಗೆ ಸ್ವರೂಪದಿಂದ ಕರ್ಮಬಿಡುವದು ಶಕ್ಯವಲ್ಲ. ಅದೇಮೇರೆಗೆ, “ವರ್ಣಾಶ್ರಮಗಳಿಗೆ ವಿಹಿತವಾದ ಕರ್ಮತ್ಯಾಗದಿಂದ ನರಕವು ತಪ್ಪದು” ಎಂಬ ಪ್ರತಿಬಂಧಕವಿರುವದರಿಂಡ, ವಿಹಿತವಿರುವ ಎಲ್ಲ ಕರ್ಮಗಳ ತ್ಯಾಗವು ಶಕ್ಯವಲ್ಲ; ಆದುದರಿಂದ ಕರ್ಮಫಲತ್ಯಾಗಿಯೇ ತ್ಯಾಗಿ ಎನಿಸುವನು. ಇದರಿಂದ ಕರ್ಮತ್ಯಾಗವೆಂದು ಹೇಳಿದ ಸ್ಥಳದಲ್ಲಿ ಕೂಡ ಫಲತ್ಯಾಗವೇ ಎಂಬ ಅರ್ಥವು ಧ್ವನಿತವೆಂದು ತಿಳಿಯಬೇಕು.

ವಿಂ ಅಂ—ದೇಹಧರಿಸಿದವನು ಹೊಟ್ಟೆಹೊರಕೊಳ್ಳಲು ಕೈಕಾಲುಗಳಿಂದಾಗುವ ಬೇಕಾದ ಕರ್ಮಗಳನ್ನೆಲ್ಲ ಬಿಡುವದು ಶಕ್ಯವಲ್ಲ; ಹಾಗೆ ತಿಳಿಯದಿದ್ದರೆ, ಹೊಟ್ಟೆ ತುಂಬಿಕೊಳ್ಳಬಹುದೇ? ಅದರಂತೆಯೇ, ವಿಹಿತ ಯಜ್ಞಾದಿಕರ್ಮಗಳನ್ನು ಕೂಡ ತ್ಯಜಿಸುವದು ಶಕ್ಯವಲ್ಲ. ಏಕೆಂದರೆ, ಅಂಥ ತ್ಯಾಗವು ಅನರ್ಥಕ್ಕೆ ಉಗಮವು. ಮೇಲಾಗಿ, ಪರಮಾತ್ಮನು ಮೋಕ್ಷಸಾಧನಕ್ಕೆ ಬೇಕಾದ ಜ್ಞಾನಾರ್ಜನೆಗಾಗಿ ದೇಹವನ್ನು ಕೊಟ್ಟಿರುವ ಮೂಲಕ ಕರ್ಮಬಿಡುವದು ಅನ್ಯಾಯವೇ ಸರಿ ಹಾಗಾದರೆ, ತ್ಯಾಗವೆಂದು ಹೇಳುದೇಕೆಂದು ಕೇಳಿದರೆ, ತ್ಯಾಗವೆಂದರೆ ಫಲತ್ಯಾಗ; ಆದರೆ, ಕರ್ಮವು ಬಂಧಕವಾದುದರಿಂದ ಅದನ್ನೇಕೆ ಬಿಡಕೂಡದೆಂದರೆ, ಅದರಲ್ಲಿ ಫಲಬಿಡುವದರಿಂದ ಬಂಧಕವಾಗದು. ಈ ಬಗ್ಗೆ ಹಿಂದೆ (೨–೫೧,೩–೯,೫–೧೨) ಶ್ಲೋಕಗಳಲ್ಲಿ ಹೇಳಿರುವೆ; ಹಾಗಾದರೆ, ಈ ಶ್ಲೋಕದ ಕೊನೆಯ ಚರಣದಲ್ಲಿ ತ್ಯಾಗವೆಂದು ಹೇಳದೆ, ತ್ಯಾಗಿ ಎಂದು ಹೇಳುವ ಕಾರಣವೇನೆಂದು ಕೇಳಿದರೆ, ತ್ಯಾಗವು ಧರ್ಮವು; ಆದರೆ, ಅದು ಉಚಿತವೋ, ಅನುಚಿತವೋ ಎಂದು ಆಲೋಚಿಸುವದು ಧರ್ಮವುಳ್ಳವನ ಯೋಗ್ಯತೆಗನುಸರಿಸಿ ಇರುವದು. ಆದ್ದರಿಂದ ತ್ಯಾಗಿ ಎಂದು ಹೇಳಿ ಇದೆ.

೧೨. ಫಲತ್ಯಾಗಮಾಡದ ಅಧಿಕಾರಿಯನ್ನು ನಿಂದಿಸಿ, ಫಲತ್ಯಾಗಿಯನ್ನು ಹೊಗಳಿದ್ದು:—

**अनिष्टमिष्टं मिश्रं च त्रिविधं कर्मणः फलम् ।**
**भवत्यत्यागिनां प्रेत्य न तु संन्यासिनां क्वचित् ॥ १२ ॥**

ಅಂ—ಅನಿಷ್ಟವೆಂದರೆ, ನರಕಾದಿಫಲವು, ಇಷ್ಟವೆಂದರೆ, ಕಾಮ್ಯಕರ್ಮವನ್ನು ಮಾಡುವ ಅಧಿಕಾರಿಯು ಅಪೇಕ್ಷಿಸುವ ಸ್ವರ್ಗಾದಿಫಲವು, ಮಿಶ್ರವೆಂದರೆ, ಇಷ್ಟ–ಅನಿಷ್ಟಗಳು ಕಲೆತ ಮಾನುಷ ಫಲವು ಹೀಗೆ ಕರ್ಮಗಳಿಂದಾಗುವ ಮೂರು ಫಲಗಳು; ಕರ್ಮಫಲತ್ಯಾಗಮಾಡದ ಅಧಿಕಾರಿಗಳು ಕಾಲವಾದಬಳಿಕ ಈ ಮೂರು ವಿಧದ ಫಲಗಳನ್ನನುಭವಿಸುವರು, ಆದರೆ, ಅನಿಯತ ಕಾಮ್ಯಕರ್ಮಗಳಲ್ಲಿ ಫಲಬಿಡುವ ಮತ್ತು ನಿಯತ ಕರ್ಮಫಲಗಳನ್ನು ಸ್ವರೂಪದಿಂದ ಬಿಡುವ ಸನ್ಯಾಸಿಗಳಿಗೆ (ಅಧಿಕಾರಿಗಳಿಗೆ) ಇಹಪರಗಳಲ್ಲಿ ಮೇಲೆ ಹೇಳಿದ ಮೂರು ವಿಧದ ಕರ್ಮಫಲಗಳು ದೊರೆಯಲಾರವು. ಇಲ್ಲಿ, ತ್ಯಾಗಿಗಳೆಂದು ಹೇಳದೆ, ಸನ್ಯಾಸಿಗಳೆಂದು ಹೇಳುವ ಕಾರಣವೇನೆಂದು ಕೇಳಿದರೆ, ತ್ಯಾಗಿಗಳು ಅನ್ಯರ ಸಲುವಾಗಿ ಕಾರೀರ್ಯ ಮುಂತಾದ ನಿಯತ ಕಾಮ್ಯಕರ್ಮಗಳನ್ನು ಮಾಡುವರು; ಆದರೆ, ಸನ್ಯಾಸಿಗಳು ಅದನ್ನು ಕೂಡ ಮಾಡುವದಿಲ್ಲ. ಈ ವೈಶಿಷ್ಟ್ಯವನ್ನು ಸೂಚಿಸುವಕ್ಕಾಗಿ ಹಾಗೆ ಹೇಳಲಾಗಿದೆ. ಮೇಲಾಗಿ, ಅವರಿಬ್ಬರಲ್ಲಿ ಫಲಾಪೇಕ್ಷೆ ಇಲ್ಲದ ಮೂಲಕ ತ್ಯಾಗವು ಇರುವದೇ ಸರಿ. ಇಲ್ಲ ತ್ತ ಶಬ್ದವು ಫಲತ್ಯಾಗಿಗೆ ಜ್ಞಾನ–ಭಕ್ತಿದ್ವಾರಾ ಅಪರೋಕ್ಷಜ್ಞಾನದಿಂದ ಮುಕ್ತಿಯಲ್ಲಿ ಹೆಚ್ಚಿಗೆ ಆನಂದವಾಗುವದೆಂದು ಸೂಚಿಸುವದು. ಈ ವಿಷಯಕ್ಕೆ ಹಿಂದೆ (೧೨–೧೨) ನೆಯ ಶ್ಲೋಕದ ಭಾಷ್ಯದಲ್ಲಿ ಹೇಳಿ ಇದೆ.

ವಿಂ ಅಂ—ಮೇಲೆ, ಕಾಮ್ಯಕರ್ಮಮಾಡುವವರಿಗೆ ಅವರು ಬಯಸುವ ಸ್ವರ್ಗ, ಅಥವಾ ಪುತ್ರ–ಪಶ್ವಾದಿರೂಪ ಫಲವಾಗಬಹುದು; ಆದರೆ, ನರಕಾದಿ ಅನಿಷ್ಟಫಲವಾಗದು. ಏಕೆಂದರೆ,

ಅವರು ಅಂತಹ ಅನಿಷ್ಟಫಲದಾಸೆಗಾಗಿ ಕರ್ಮಮಾಡುವದಿಲ್ಲವಲ್ಲ? ಎಂದು ಕೇಳಿದರೆ, ಸ್ವರ್ಗಾದಿ ಫಲೋದ್ದೇಶಕ್ಕಾಗಿ ಮಾಡುವ ಕರ್ಮಗಳು ರಾಗದ್ವೇಷಪೂರ್ವಕವಾದುದರಿಂದಲೂ, ರಾಗದ್ವೇಷಗಳು ಹಿಂದೆ (೨-೬೨) ನೆಯ ಶ್ಲೋಕದಲ್ಲಿ ಹೇಳಿದಂತೆ, ನರಕಾದಿ ಅನರ್ಥಗಳಿಗೆ ಕಾರಣವಾದುದರಿಂದಲೂ, ಕಾಮ್ಯಕರ್ಮಮಾಡುವವರು ಬಯಸದಿದ್ದರೂ, ನರಕಾದಿ ಅನಿಷ್ಟಗಳನ್ನು ಹೊಂದುವದೇ ಸರಿ. ಆಯಾ ಫಲಾಪೇಕ್ಷೆಯಿಂದ ಮಾಡುವ ಕಾಮ್ಯಕರ್ಮಗಳು ರಾಗದ್ವೇಷಮೂಲಕವಾದುದರಿಂದ ಪಾಪ-ಪುಣ್ಯ-ಮಿಶ್ರಗಳೆಂಬ ಮೂರು ವಿಧದ ಕರ್ಮಗಳಾಗುವವು. ಅವುಗಳಲ್ಲಿ ಪುಣ್ಯದಿಂದ ಸ್ವರ್ಗವೂ, ಪಾಪದಿಂದ ನರಕವೂ, ಮಿಶ್ರದಿಂದ ಮನುಷ್ಯತ್ವವೂ, ಹೀಗೆ ಮೂರು ವಿಧದ ಫಲಗಳು ದೊರೆಯುವವು. ಹಾಗಾದರೆ, ಫಲಾಪೇಕ್ಷೆಯಿಲ್ಲದೆ ವಿಹಿತಕರ್ಮಮಾಡುವ ಸನ್ಯಾಸಿಗಳಿಗೆ (ಅಧಿಕಾರಿಗಳಿಗೆ) ಇಷ್ಟಫಲವಿಲ್ಲೆಂದು ಹೇಳುವದೇಕೆ ? ಇಷ್ಟಜ್ಞಾನಕ್ಕೆ ಫಲವಾಗದೆ ಬಿಟ್ಟೀತೇ? ಪರಮಾತ್ಮನ ಪ್ರೀತಿಗಾಗಿ ಮಾಡಿದ ನಿಷ್ಕಾಮಕರ್ಮವು ನಿಷ್ಫಲವಾಗಬಹುದೇ? ಎಂದು ಕೇಳಿದರೆ, ಅನ್ಯರಿಗೆ ಇಷ್ಟವಾದ ಸ್ವರ್ಗಾದಿಫಲವು ಸನ್ಯಾಸಿಗಳಿಗೆ ಆಗುವದಿಲ್ಲೆಂದು ಅಂಗೀಕರಿಸಿದರೆ, ವಿರೋಧವಿಲ್ಲ. ಆದ್ದರಿಂದ ನಿತ್ಯನೈಮಿತ್ತಿಕ ಕರ್ಮಗಳನ್ನೂ, ಐಚ್ಛಿಕ ಕಾಮ್ಯಕರ್ಮಗಳನ್ನೂ, ಫಲಾಪೇಕ್ಷೆಯಿಲ್ಲದೆ ಅವಶ್ಯವಾಗಿ ಆಚರಿಸತಕ್ಕದ್ದೇ ಸರಿ.

೧೩. ಹಿಂದೆ ೨ನೆಯ ಶ್ಲೋಕದಲ್ಲಿ ಹೇಳಿದಂತೆ, ಐಚ್ಛಿಕ ಕಾಮ್ಯಕರ್ಮಗಳಲ್ಲಿ ಫಲತ್ಯಾಗವು, ನಿಯತಕಾಮ್ಯಕರ್ಮಗಳ ಸ್ವರೂಪದಿಂದ ತ್ಯಾಗವು ಮತ್ತು ಹಿಂದಿನ ಶ್ಲೋಕದಲ್ಲಿ ಹೇಳಿದಂತೆ, ಅನ್ಯರ ಸಲುವಾಗಿ ಕೂಡ ನಿಯತಕಾಮ್ಯಕರ್ಮಗಳನ್ನಾಚರಿಸದಿರೋಣ, ಹೀಗೆ ಮೂರು ಅರ್ಥಗಳನ್ನೇ ಮಾತ್ರ ಸನ್ಯಾಸ' ಶಬ್ದಕ್ಕೆ ಹೇಳಕೂಡದು. ಆದರೆ, ಮಾಡುವ ಕರ್ಮಗಳಲ್ಲಿ ಕರ್ತೃತ್ವ ಅಭಿಮಾನತ್ಯಾಗವು ಕೂಡ ಅದರಲ್ಲಿ ಸೇರುವದೆಂದು ಹೇಳುವದಕ್ಕಾಗಿ ಕರ್ಮವು ಯಾವ ಕಾರಣಗಳಿಂದ ಆಗುವದೆಂಬುದನ್ನು ಮುಂದಿನ ಮೂರು ಶ್ಲೋಕಗಳಿಂದ ಹೇಳಿದ್ದು:—

**पंचैतानि महाबाहो कारणानि निबोध मे ।**
**सांख्ये कृतांते प्रोक्तानि सिद्धये सर्वकर्मणाम् ॥ १३ ॥**

**ಅಂ**—ಮಹಾಬಾಹುವುಳ್ಳ ಅರ್ಜುನನೇ, ಶ್ರೀವಿಷ್ಣುವು ಮಾಡಿದ ಸಾಂಖ್ಯವೆಂಬ ಶಾಸ್ತ್ರದಲ್ಲಿ ಸಕಲ ಕರ್ಮಗಳು ಜರಗಲು ಬೇಕೆಂದು ಹೇಳಿದ ಮತ್ತು ಮುಂದೆ ಹೇಳುವ ಕಾರಣಗಳನ್ನು ನನ್ನಿಂದ ತಿಳಿದುಕೊಳ್ಳು.

೧೪. ಕರ್ಮಕ್ಕೆ ಅವಶ್ಯವಾದ ಕಾರಣಗಳನ್ನು ಹೇಳಿದ್ದು:—

**अधिष्ठानं तथा कर्ता करणं च पृथग्विधम् ।**
**विविधाश्च पृथक्चेष्टा दैवं चैवात्र पंचमम् ॥ १४ ॥**

**ಅಂ**—ಅಧಿಷ್ಠಾನವೆಂದರೆ, ದೇಹ, ಭೂಮ್ಯಾದಿಗಳು, ಕರ್ತನೆಂದರೆ, ಶ್ರೀವಿಷ್ಣುವು, ವಿವಿಧ ಕಾರಣವೆಂದರೆ, ಇಂದ್ರಿಯ, ಗಂಧಮಾಲ್ಯಾದಿಗಳು, ವಿವಿಧ ಚೇಷ್ಟೆಗಳೆಂದರೆ, ಹಸ್ತದಿಂದಾಗುವ ಕ್ರಿಯೆ, ಧ್ಯಾನದಿಂದಾಗುವ ಮಾನಸಕ್ರಿಯೆ, ಪ್ರಧಾನ ಹೋಮವಾದ ಕ್ರಿಯೆಗೆ ಕಾರಣವಾದ ಸಾಧನದಿಂದಾಗುವ ಅವಾಂತರ ಕ್ರಿಯೆ, ದೈವವೆಂದರೆ ಅದೃಷ್ಟ, ಹೀಗೆ ಪ್ರತಿಯೊಂದು ಕಾರ್ಯಕ್ಕೆ ಐದು ಕಾರಣಗಳು ಅವಶ್ಯ; ಅಥವಾ 'ಕರ್ತೃ' ಪದದಿಂದ ಪರಾಧೀನ ಕರ್ತನಾದ ಜೀವವೂ, 'ದೈವ' ಪದದಿಂದ ಶ್ರೀವಿಷ್ಣುವೂ, ಎಂದು ತಿಳಿಯಬೇಕು. ಕರ್ಮಗಳು ಕರ್ತೃ ಮೊದಲಾದ ಆರು ಸಾಧನಗಳಿಂದ ಸಂಭವಿಸಿದರೂ, ಕರ್ಮಕ್ಕೆ ಬೇಕಾದ ನಿಮಿತ್ತಕಾರಣವು ಎಲ್ಲಕಡೆಗೂ ಸಂಭವಿಸದ್ದರಿಂದ ಅದನ್ನಿಲ್ಲಿ ಹೇಳಿಲ್ಲ.

ವಿಂ ಅಂ—ಇಲ್ಲಿ ಏಥಾ ಶಬ್ದವು ಕರ್ಮದಲ್ಲಿ ಅಧಿಷ್ಠಾನವು ಹೇಗೆ ಅವಶ್ಯವೋ ಹಾಗೇ ಕರ್ತೃ ಮುಂತಾದ ಉಳಿದ ನಾಲ್ಕು ಕಾರಣಗಳು ಅವಶ್ಯವೆಂದು ಸೂಚಿಸುವದು. ಹಾಗಾದರೆ, ಅಧಿಷ್ಠಾನ ಮೊದಲಾದ ನಾಲ್ಕು ಕಾರಣಗಳಿಂದಲೇ ಕರ್ಮವು ಸಂಭವಿಸುವದರಿಂದ, ದೈವವೆಂಬ ಐದನೆಯ ಕಾರಣ ವನ್ನು ಹೇಳುವದೇಕೆಂದು ಕೇಳಿದರೆ, ದೈವವೇ ಮುಖ್ಯಕಾರಣವಾದ್ದರಿಂದ ಅಧಿಷ್ಠಾನ ಮುಂತಾದ ನಾಲ್ಕು ಕಾರಣಗಳಿದ್ದರೂ, ದೈವದ ಅನುಗ್ರಹವಿಲ್ಲದೆ ಯಾವ ಕರ್ಮವೂ ಆಗದು. ಇಲ್ಲಿ ಲೌಕಿಕ ದೃಷ್ಟಾಂತವೇನಂದರೆ, ಭೋಜನವೆಂಬ ಕರ್ಮದಲ್ಲಿ ಭೂಮಿ ಎಂಬ ಅಧಿಷ್ಠಾನವೂ, ಭೋಕ್ತೃನಾದ ಕರ್ತೃವೂ, ಅಡಿಗೆಯುವನೂ, ಬಡಿಸುವವನೂ, ಪಾತ್ರೆ,ಅಡಿಗೆಯ ಪದಾರ್ಥ ಮುಂತಾದ ಸಾಧನಗಳೂ, ಕಲೆಸುವದು, ತುತ್ತುಮಾಡುವದು, ಬಾಯಲ್ಲಿಡುವದು, ಮುಂತಾದ ವ್ಯಾಪಾರಗಳೂ, ಪರಮಾತ್ಮ ನೆಂಬ ಅದೃಷ್ಟವೂ, ಹೀಗೆ ಐದು ಕಾರಣಗಳಿರುವಂತೆ, ಸಕಲ ಕರ್ಮಗಳಲ್ಲಿ ಮೇಲೆ ಹೇಳಿದ ಅಧಿಷ್ಠಾನ ಮುಂತಾದ ಐದು ಕಾರಣಗಳು ಅವಶ್ಯವೆಂದು ತಿಳಿಯಬೇಕು.

೧೫. ಹಿಂದೆ ಹೇಳಿದ ಐದು ಕಾರಣಗಳು ಸಕಲ ಕರ್ಮಗಳಲ್ಲಿ ಅವಶ್ಯವೋ ಅಥವಾ ವಿಶಿಷ್ಟಕರ್ಮಗಳಲ್ಲಿ ಎಂದು ಕೇಳಿದ್ದಕ್ಕೆ ಉತ್ತರಹೇಳಿದ್ದು :—

शरीरवाङ्मनोभिर्यत्कर्म प्रारभते नरः ।
न्याय्यं वा विपरीतं वा पंचैते तस्य हेतवः ॥ १५ ॥

ಅಂ—ಪ್ರಾಣಿಯು ದೇಹ, ವಾಣಿ, ಮನಸುಗಳ ಮೂಲಕ ನ್ಯಾಯ, ಅನ್ಯಾಯಗಳಿಂದ ಆರಂಭಿ ಸುವ ಕರ್ಮಕ್ಕೆ ಈ ಐದು ಕಾರಣಗಳು ಅವಶ್ಯ. ಇಲ್ಲಿ ಲೌಕಿಕ ದೃಷ್ಟಾಂತಗಳು ಯಾವುವೆಂದರೆ, ಕೆಲಒಬ್ಬ ಸಜ್ಜನಪ್ರಾಣಿಯು ದಾರಿಕಾರರ ಶ್ರಮಪರಿಹಾರಕ್ಕಾಗಿ ಅರವಟ್ಟಿಗೆಯನ್ನು ಕಟ್ಟಿಸಿ, ಅಲ್ಲಿ ಮಜ್ಜಿಗೆ, ನೀರು, ಮುಂತಾದವುಗಳ ದಾನದಿಂದ ಪುಣ್ಯಕರ್ಮ ಮಾಡುವನು; ಆ ಕರ್ಮದಲ್ಲಿ ಅರವಟ್ಟಿ ಗೆಯು ಅಧಿಷ್ಠಾನ, ದಾನಮಾಡುವವನು ಕರ್ತನು, ಪಾತ್ರೆ ಮುಂತಾದವುಗಳು ಸಾಧನ, ಕೈಕಾಲುಗಳ ವ್ಯಾಪಾರ, ಅದೃಷ್ಟ, ಹೀಗೆ ಐದು ಕಾರಣಗಳು. ಅದರಂತೆ, ಯಾವನೊಬ್ಬ ಪಾಪಿಯು ಹಾದಿಕಾರರ ಸುಲಿಗೆಗಾಗಿ ಕೈಯಲ್ಲಿ ದೊಡ್ಡ ಬಡಿಗೆಯನ್ನು ಹಿಡಿದು, ದಾರಿಯಲ್ಲಿ ನಿಂತು ಸುಲಿಯುವ ಪಾಪಕರ್ಮ ನಡಿಸುವನು. ಈ ಕರ್ಮದಲ್ಲಿ ಜನರಿಲ್ಲದ ಪ್ರದೇಶವೇ ಅಧಿಷ್ಠಾನ, ಅಪಹರಿಸುವವನೇ ಕರ್ತ, ಆತ ಹಿಡಿದ ದಂಡವೇ ಕಾರಣ, ಕೈಕಾಲುಗಳಿಂದಾಗುವ ಚೇಷ್ಟೆಯೇ ವ್ಯಾಪಾರ, ಮತ್ತು ದೈವ ಇವಿಷ್ಟು ಐದು ಕಾರಣಗಳು. ಮಾಡುವ ಕರ್ಮದಲ್ಲಿ ತಾನು ಕರ್ತನಲ್ಲೆಂದು ಅನುಸಂಧಾನ ಮಾಡುವದಕ್ಕೆ ಅಧಿಕಾರಿಯು ಬೇಕೆಂದು ಇಲ್ಲಿ नरः ಎಂದು ಹೇಳಲ್ಪಟ್ಟಿದೆ. ಇಲ್ಲಿ प्रारभते ಎಂದರೆ, ಮಾಡುವನೆಂದು ತಿಳಿಯಬೇಕು; ಏಕೆಂದರೆ, ದೇಹ, ವಾಣಿ, ಮನಸುಗಳಿಂದ ಕಾರ್ಯವು ಆರಂಭವಾಗುವದು; ಆದರೆ, ಕರ್ಮವು ಮಾತ್ರ ಅಧಿಷ್ಠಾನ ಮುಂತಾದ ಐದು ಕಾರಣಗಳಿಂದ ಹುಟ್ಟುವದು. ಈ ಅರ್ಥದ ಸೂಚನೆ ಗಾಗಿ, ಇಲ್ಲಿ यत्कुरुते ಎಂದು ಹೇಳದೆ आरभते ಎಂದು ಹೇಳಿದೆ. ಹಾಗಾದರೆ, ಸಕಲಕರ್ಮಗಳು ಅಧಿಷ್ಠಾನ ಮುಂತಾದ ಐದು ಕಾರಣಗಳಿಂದಲೇ ಸಾಧ್ಯವಾದುದರಿಂದ, ಎಲ್ಲ ಕರ್ಮಗಳು ಕಾಯಿಕ, ವಾಚಿಕ, ಮಾನಸಿಕ, ಹೀಗೆ ಮೂರು ವಿಧ ಎಂದು ಹೇಳುವ ಕಾರಣವೇನೆಂದು ಕೇಳಿದರೆ, ಎಲ್ಲ ಕರ್ಮ ಗಳು ಅಧಿಷ್ಠಾನ ಮುಂತಾದ ಐದು ಕಾರಣಗಳಿಂದ ಸಾಧ್ಯವಾದರೂ, ಅವು ಮೂರೇ ವಿಧದಿಂದ ಹುಟ್ಟು ವವು. ಅವುಗಳಲ್ಲಿ ದೇಹವೇ ಮುಖ್ಯಸಾಧನವಾಗಿದ್ದರೆ ಶಾರೀರಿಕ, ವಾಣಿಪ್ರಧಾನವಾಗಿದ್ದರೆ ವಾಚ ನಿಕ, ಮನಸು ಮುಖ್ಯವಾಗಿದ್ದರೆ ಮಾನಸಿಕ ಎಂತಲೂ ತಿಳಿಯಬೇಕು.

೧೬.

तत्रैव सति कर्तारमात्मानं केवलं तु यः ।
पश्यत्यकृतबुद्धित्वान्न स पश्यति दुर्मतिः ॥ १६ ॥

ಅ೦—ಕರ್ಮದಲ್ಲಿ ಈಶ್ವರ, ಅಧಿಷ್ಠಾನ, ಮುಂತಾದ ಐದು ಕಾರಣಗಳು ಅವಶ್ಯವಿದ್ದು ಜೀವವು ಪರಮಾತ್ಮನ ಪ್ರೇರಣೆ ಇಲ್ಲದೆ, ಸ್ವತಃ ಯಾವ ಕಾರ್ಯವನ್ನೂ ಮಾಡಲು ಅಸಮರ್ಥನಿರಲಾಗಿ, ತಾನು ಕರ್ಮಮಾಡಲು ಸ್ವತಂತ್ರನೆಂದು ತಿಳಿಯುವ ಪ್ರಾಣಿಯು ಶ್ರವಣ ಮೊದಲಾದವುಗಳ ಸುಸಂಸ್ಕೃತಿ ಇರದ್ದರಿಂದ ದುಷ್ಟಬುದ್ಧಿಯುವನಾಗಿ ಪರಮಾತ್ಮವಿಷಯಕ ತತ್ವವನ್ನು ಅರಿಯದೆ ಹೋಗುವನು.

ವಿ೦ ಅ೦— ಪರಾಧೀನ ಕರ್ತನಾದ ಜೀವವು ತನ್ನಲ್ಲಿ ಇಲ್ಲದ ಸ್ವಾತಂತ್ರ್ಯವನ್ನು ಹೇಳುವ ಜ್ಞಾನವು ವಿಪರೀತಜ್ಞಾನವೆನಿಸುವದು. ಅಂಥ ಜ್ಞಾನಕ್ಕೆ ಮಹಾ ಅನರ್ಥವೇ ಫಲವು. ಆದ್ದರಿಂದ 'ನಾನು ಮಾಡುವೆನೆಂಬ' ಕರ್ತೃತ್ವದ ಅನುಸಂಧಾನವನ್ನು ಬಿಟ್ಟೇ ಕಾರ್ಯಮಾಡಬೇಕು. ಇಲ್ಲಿ , ಕೇವಲ ' ಶಬ್ದಾರ್ಥವು ಒಬ್ಬನೇ ಎಂದು ತಿಳಿಯಕೂಡದು. ಏಕೆಂದರೆ, ಜೀವನೊಬ್ಬನೇ ಕರ್ತನೆಂದು ತಿಳಿಪವನು ದುರ್ಮತಿ ಎಂದು ನಿಂದಿಸಲ್ಪಟ್ಟಿದ್ದರಿಂದ ಮೇಲ್ಕಾಣಿಸಿದ ಐವರ ಸಹಾಯವುಳ್ಳವನೇ ಕರ್ತೃ ಎಂದು ಸ್ಪಷ್ಟವಾಯಿತು; ಆದರೆ, ಹಾಗೆ ತಿಳಿದರೆ ಹಾನಿ ಏನೆಂದು ಕೇಳಿದರೆ, ಸಹಾಯವುಳ್ಳವನು ಕರ್ತನೆಂದು ಹೇಳುವದು ಸರಿಯಲ್ಲ. ಜೀವವು ಸ್ವತಂತ್ರ ಕರ್ತೃ ಎಂದು ತಿಳಿದ ಜ್ಞಾನವು ಮಿಥ್ಯಾಜ್ಞಾನವು. ಹಾಗಾದರೆ, ಸಹಾಯವುಳ್ಳ ಜೀವವು ಕರ್ತನೆಂದು ಹೇಳಿದರೆ, ಅದು ಪರಾಧೀನ ಕರ್ತೃವೇ ಎಂದು ಹೇಳಿದಂತಾಯಿತೆಂದು ಎಣಿಸಲಾಗದು. ಕೇವಲ ಸಹಾಯವುಳ್ಳವನು ಕರ್ತನೆಂದು ಹೇಳಿದರೆ, ಪರಾಧೀನತೆ ಸಿದ್ಧವಾಗದು. ಅದರಿಂದ ಸ್ವಾತಂತ್ರ್ಯಕ್ಕೆ ಹಾನಿ ತಟ್ಟದೆ, ಅದು ಐಶ್ವರ್ಯದ್ಯೋತಕವಾಗುವದು. ಈ ವಿಷಯಕ್ಕೆ (೨-೧-೧೯)ನೆಯ ಸೂತ್ರದಲ್ಲಿ ಹೇಳಿ ಇದೆ. ಇಲ್ಲಿ ಲೌಕಿಕದೃಷ್ಟಾಂತವೇನಂದರೆ, ಚಕ್ರವರ್ತಿಯು ಸಹಾಯವುಳ್ಳವನಾದರೂ, ಪರಾಧೀನ ಕರ್ತನಾಗನು. ಆದ್ದರಿಂದ ಜೀವವು ನಿಷ್ಕ್ರಿಯ ಅಥವಾ ಸುಮ್ಮನಿರುವದು ಎಂದೇ ಹೇಳಬೇಕಾಗುವದು; ಅಂದರೆ ಅದು ಪರಾಧೀನ ಕರ್ತೃ; ಆದ್ದರಿಂದ ಸ್ವತಂತ್ರ ಕರ್ತೃ ಎಂದು ತಿಳಿದವನು ದುರ್ಮತಿ ಎಂದು ನಿಂದಿಸಲ್ಪಟ್ಟಿರುವನು. ಆದುಕಾರಣ, ಅದು ಪರಾಧೀನ ಕರ್ತೃವೆಂದು ಅಂಗೀಕರಿಸಿದಂತಾಯಿತು. ಇದೇ ಅಭಿಪ್ರಾಯದಿಂದ ಈ ಶ್ಲೋಕಾರ್ಥವು ಜೀವಪರವಾಗಿದೆ; ಮತ್ತು ಸ್ವತಂತ್ರ ಕರ್ತೃಅಪೇಕ್ಷೆಯಿಂದ ಪರಮಾತ್ಮಪರವಾಗಿಯೂ ಅದೆ.

೧೭. ಹೀಗೆ ಕರ್ತೃತ್ವ ಅಭಿಮಾನವುಳ್ಳವನನ್ನು ನಿಂದಿಸಿ, ಅದಿಲ್ಲದವನನ್ನು ಸ್ತುತಿಸಿದ್ದು—

यस्य नाहंकृतो भावो बुद्धिर्यस्य न लिप्यते ।
हत्वाऽपि स इमांल्लोकान्न हंति न निबध्यते ॥ १७ ॥

ಅ೦—"ನಾನು ಕರ್ತೃ ಎಂದರೆ, ಈ ಕಾರ್ಯವು ನನ್ನಿಂದಾಯಿತು " ಎಂಬ ಸ್ವಾತಂತ್ರ್ಯದ ಅಭಿಮಾನವು ಮತ್ತು ಕರ್ಮದಲ್ಲಿ ಫಲಾಸಕ್ತಿ, ಇವುಗಳಿಲ್ಲದವನು ಸ್ವಾತಂತ್ರ್ಯಜ್ಞಾನಹೀನನಾದ್ದರಿಂದ ಹತ್ಯಾದಿ ದೋಷಗಳನ್ನು ಮಾಡಿದರೂ, ಅವು ಅವನಿಗೆ ತಗಲವು. ಏಕೆಂದರೆ, ಅವನು 'ನಾನು ಕೊಲ್ಲುವೆನು' ಎಂಬ ಸ್ವಾತಂತ್ರ್ಯ ಅಹಂಕಾರವಿಲ್ಲದವನು; ಮತ್ತು ಆ ದೋಷಕ್ಕೆ ಒದಗುವ ಫಲವಿಲ್ಲದವನು. ಇನ್ನು ಹನನ ಕ್ರಿಯೆಯು ಹಿಂಸಾರೂಪವಾದುದರಿಂದ, ಅಂಥ ಕರ್ಮದಲ್ಲಿ ಆಸಕ್ತಿ—ಫಲ

ಗಳನ್ನು ಬಿಟ್ಟು ಅದನ್ನು ಮಾಡುವದು ಹೇಗೆಂದು ಕೇಳಿದರೆ, ಈ ಹನನಕ್ರಿಯೆಯು ಎಲ್ಲರಿಗೂ ಯುಕ್ತವಲ್ಲ, ಆದರೆ, ಪರಮಾತ್ಮನು ಆ ಕ್ರಿಯೆಗಾಗಿ ವಿಧಿಸಿದ ರುದ್ರ–ಯಮರು ಅಂಥ ಕ್ರಿಯೆ ಮಾಡಿದರೂ, ಅವುಗಳಿಂದ ಬದ್ಧರಾಗಲಾರರು. ಏಕೆಂದರೆ, ಅವರಲ್ಲಿ ತಾವು ಕೊಲ್ಲುವವರೆಂಬ ಅಭಿಮಾನವಿಲ್ಲ; ಹೀಗೆ ಆಸಕ್ತಿ ಮತ್ತು ಫಲತ್ಯಾಗಪೂರ್ವಕ ಮಾಡಿದ ಹನನಕ್ರಿಯೆಯು ಕೂಡ ದೋಷಫಲಕೊಡಲು ಸಮರ್ಥವಾಗದು; ಅಂದಬಳಿಕ ಆಸಕ್ತಿ–ಫಲತ್ಯಾಗಪೂರ್ವಕಮಾಡಿದ ವಿಹಿತ ಕರ್ಮವು ದೋಷಕಾರಕವಾಗದೆಂದು ಹೇಳಲಿಕ್ಕೆ ಬೇಡ. ಇನ್ನು ಅಪರೋಕ್ಷಜ್ಞಾನಿಯಲ್ಲಿ ಕರ್ತೃತ್ವದ ಅಭಿಮಾನವಿದ್ದರೆ, ಅವನಿಗೆ ಅದರ ದೋಷವು ತಗಲದಿರದು. ಈ ವಿಷಯಕ್ಕೆ ವೃತ್ರಾಸುರನ ಸಂಹಾರದಿಂದ ಇಂದ್ರನಿಗೂ ಅಹಂಕಾರಮೂಲಕ ಬಂಧವು ಬಿಡಲಿಲ್ಲೆಂದು ಹೇಳಿ ಇದೆ. ಈ ಮೇರೆಗೆ ಕರ್ತೃತ್ವಾಭಿಮಾನವುಳ್ಳ, ಅದಿಲ್ಲದ ಅಧಿಕಾರಿಗಳನ್ನು ನಿಂದೆ–ಸ್ತುತಿಮಾಡಿದ್ದರಿಂದ ಕರ್ಮ ದಲ್ಲಿ ಕರ್ತೃತ್ವಾಭಿಮಾನದ ತ್ಯಾಗವು ಕೂಡ 'ಸನ್ಯಾಸ' ಶಬ್ದಾರ್ಥವೆಂದು ಹೇಳದಂತಾಯಿತು.

೧೮. ಇನ್ನು, ಜೀವಕ್ಕೆ ಸ್ವತಂತ್ರಕರ್ತೃತ್ವವು ಇಲ್ಲೆಂದು ಹೇಳಲಾಗಿದೆ, ಅದರಿಂದ ಶಾಸ್ತ್ರ ವಿಧಿಗಳಿಗೆ ಅವನು ಕರ್ತನಾಗದ್ದರಿಂದ ವಿಧಿಗಳಿಗೆ ವೈಯರ್ಥ್ಯ ಉಂಟಾಗುವದು, ಏಕೆಂದರೆ, ಜೀವವು ವಿಷಯನಲ್ಲ, ಜಡ, ಈಶ್ವರ, ಮುಕ್ತರು, ಕೂಡ ಅವುಗಳಿಗೆ ವಿಷಯರಾಗದ್ದರಿಂದ ಶಾಸ್ತ್ರ ದಲ್ಲಿ ವಿಧಿಸಿದ ಕರ್ಮಗಳಿಗೆ ವಿಷಯನಾರೆಂದು ಕೇಳಿದ್ದಕ್ಕೆ ಉತ್ತರಹೇಳಿದ್ದು .—

**ज्ञानं ज्ञेयं परिज्ञाता त्रिविधः कर्म चोदना ।**
**करणं कर्म कर्तेति त्रिविधः कर्मसंग्रहः ॥ १८ ॥**

**ಅಂ—** ಇಲ್ಲಿ ವಿಧಿ, ಚೋದನಾ, ಪ್ರೇರಣಾ, ಈ ಮೂರು ಶಬ್ದಗಳೂ ಒಂದೇ ಅರ್ಥಪರ ವಾಗಿವೆ. ವಿಧಿಕರ್ಮಗಳಲ್ಲಿ ಪ್ರೇರಣೆಯ ಜ್ಞಾನ, ಜ್ಞೇಯ, ಪರಿಜ್ಞಾತಾ, ಎಂದು ಮೂರು ವಿಧ. ಜ್ಞಾನವೆಂದರೆ, ವಿಧಿವಿಷಯವು; ಜ್ಞೇಯವೆಂದರೆ, ಚೇಷ್ಟಾ, ಪ್ರಯತ್ನ, ಮುಂತಾದವು ಗಳಿಂದ ಪ್ರವೃತ್ತಿ, ಅಧಿಷ್ಠಾನಾದಿಗಳು, ಪುರುಷಾರ್ಥ, ಈ ಲಕ್ಷಣಗಳುಳ್ಳದ್ದು; ಪರಿಜ್ಞಾತಾ ಎಂದರೆ, ಸರ್ವಜ್ಞನೂ, ಸರ್ವಪ್ರೇರಕನೂ, ಆದ ಪರಮಾತ್ಮನ ಸನ್ನಿಧಿಯುಳ್ಳ ಜೀವಸಮುದಾಯ; ಈ ಮೂರು ಕರ್ಮಪ್ರೇರಣೆಗೆ ಕಾರಣಗಳು. ಹೇಗಂದರೆ, ಸ್ಮೃತಿಗಳಲ್ಲಿ ಹೇಳಿದ ವಿಷಯಗಳಲ್ಲಿ ಸ್ವಂತ ಪ್ರವೃತ್ತಿಯುಂಟಾಗಲು, ಜ್ಞಾನವು ಪ್ರೇರಣೆಗೆ ಕಾರಣವಾಗುವದು; ಬಳಿಕ, ಇಚ್ಛೆ, ಪ್ರಯತ್ನ, ಮುಂತಾದ ಪ್ರವೃತ್ತಿಯು ಪರಮಾತ್ಮನ ಸನ್ನಿಧಾನವುಳ್ಳ ಪರಮಾತ್ಮನ ಪ್ರೇರಣೆಯಿಂದ ಪುರುಷಾರ್ಥಕ್ಕಾಗಿ ಕರ್ಮದಲ್ಲಿ ಹುಟ್ಟುವದು. ಹೀಗೆ, ವಿಧಿಜ್ಞಾನಕ್ಕೂ, ಕರ್ಮಪ್ರೇರಣೆಗೂ, ನಿಮಿತ್ತ–ನಿಮಿತ್ತಿ ಸಂಬಂಧವೆಂದು ತಿಳಿಯತಕ್ಕದ್ದು. ಹಾಗಾದರೆ, ಜೀವವು ಸ್ವತಂತ್ರಕರ್ತನಾಗದೆ ಪರಾಧೀನ ಕರ್ತೃವಾದ್ದರಿಂದ, ವಿಧಿಜ್ಞಾನದ್ವಾರಾ ಪ್ರವೃತ್ತಿಯು ಸಲುವಾಗಿ ಅದು ವಿಧಿಗೆ ವಿಷಯ ವಾಗದೆಂದು ಸಂದೇಹಪಡಕೂಡದು; ಯಾಕೆಂದರೆ, ಪರಾಧೀನನಾಗದ ಕರ್ತನು ವಿಧಿಗೆ ವಿಷಯ ನಾಗಲು ಯೋಗ್ಯನೆಂಬುದು ಎಲ್ಲಿಯೂ ಕಂಡಿಲ್ಲ, ಅಂದಬಳಿಕ, ಪರಾಧೀನಕರ್ತೃತ್ವಶಕ್ತಿಯುಳ್ಳವನೇ ವಿಧಿಗೆ ವಿಷಯನೆಂದು ಅಂಗೀಕರಿಸುವದು ಅವಶ್ಯ; ಹೀಗೆ, ಜಡ, ಈಶ್ವರ, ಮುಕ್ತರು ವಿಧಿಗೆ ವಿಷಯರಾಗದ್ದರಿಂದ, ಪ್ರಮಾಣಗಳಾದ ವಿಧಿಗಳಿಗೆ ವೈಯರ್ಥ್ಯವಿಲ್ಲ. ಯಾಕೆಂದರೆ, ಜೀವವು ಪರಾಧೀನಕರ್ತೃವಾದರೂ, ವಿಧಿಗೆ ವಿಷಯವೇ ಸರಿ. ವಿಧಿಗೆ ವಿಷಯರಾಗದ ಜಡ, ಈಶ್ವರ ಮತ್ತು ಮುಕ್ತರಿಂದ ಭಿನ್ನವಾದ ಜೀವವು ವಿಧಿಜ್ಞಾನಕ್ಕೂ, ಅದರಿಂದ ಹುಟ್ಟುವ ಫಲ ಮತ್ತು ಅದರ ಸಾಧ

ನೆಗೆ ಬೇಕಾದ ಇಚ್ಛೆ, ಇವುಗಳಿಗೂ, ವಿಷಯನೆಂದು ಅನುಭವಸಿದ್ಧವಾತು. ಇನ್ನು, ಋಗ್ವೇದ (೧೧೩-೯) ಮಂತ್ರದಲ್ಲಿ ಜೀವವು ಪೂರ್ಣವಾಗಿ ಪರಮಾತ್ಮನಿಗೆ ಆಧೀನವೆಂದು ಹೇಳಿದ್ದರೂ, ಅದು ವಿಧಿಗೆ ವಿಷಯುವೆಂದೂ, ಫಲಕ್ಕೆ ಭೋಕ್ತೃ ಎಂದೂ, ಹೇಳಿದ್ದು ಸರಿ. ಈ ವಿಷಯಕ್ಕೆ ಗೀತಾ ಭಾಷ್ಯದಲ್ಲಿ "ಜೀವವು ಸ್ವತಂತ್ರ ಕರ್ತೃವಾಗದಿದ್ದರೂ, ವಿಧಿಯ ದ್ವಾರದಿಂದ ಪರಮಾತ್ಮನ ಅನುಗ್ರಹಕ್ಕನುಗುಣವಾಗಿ ಹುಟ್ಟಿದ ಇಚ್ಛೆ ಮೊದಲಾದವುಗಳಿಂದ ಕರ್ಮಮೂಲಕ ಪುರುಷಾರ್ಥವು ದೊರೆಯುವದರಿಂದ ಅದು ವಿಧಿಗೆ ವಿಷಯವು; ಆದ್ದರಿಂದ ವಿಧಿಗೆ ವೈಯರ್ಥ್ಯವಿಲ್ಲ" ಎಂದು ಹೇಳಿ ಇದೆ. ಅಥವಾ ಹಿಂದೆ ೧೪ನೆಯ ಶ್ಲೋಕದಲ್ಲಿ 'ದೈವ' ಪದದಿಂದ ಪರಮಾತ್ಮನು ಸಕಲಕರ್ಮಗಳಿಗೆ ಪ್ರೇರಕನೆಂದು ಹೇಳಲಾಗಿದೆ; ಅವನ ಪ್ರೇರಣೆಯ ಸ್ವರೂಪವು ಎಂಥದೆಂಬುದನ್ನು ಇದೇ ಶ್ಲೋಕದಿಂದ ಹೇಳಿದ್ದು. ಹೇಗಂದರೆ, ಕರ್ಮಗಳಲ್ಲಿ ಜೀವಗಳಿಗೆ ಮಾಡುವ ಪರಮಾತ್ಮನ ಪ್ರೇರಣೆಯು ಜ್ಞಾನ, ಜ್ಞೇಯ, ಪರಿಜ್ಞಾತಾ, ಇವು ಅವನ ಸ್ವರೂಪಗಳೇ, ಅಥವಾ ಅದೇ ಶ್ಲೋಕದಲ್ಲಿ ಕಾರ್ಯವಾಗಲು ಐದು ಕಾರಣಗಳು ಅವಶ್ಯವೆಂದು ಹೇಳಿದ್ದನ್ನೇ ಈ ಶ್ಲೋಕದಲ್ಲಿ ಸಂಕ್ಷೇಪವಾಗಿ ಹೇಳಿದ್ದು; ಹೇಗಂದರೆ, ಕರ್ಮ ಜರಗಲು ಸಾಧನ, ಕರ್ಮ, ಕರ್ತೃ, ಹೀಗೆ ಮೂರು ಕಾರಣಗಳು ಬೇಕು. ಇನ್ನು, ಹಿಂದೆ ೧೪ನೆಯ ಶ್ಲೋಕದಲ್ಲಿ ಕರ್ಮಕ್ಕೆ ಐದು ಕಾರಣಗಳುಂಟೆಂದು ಹೇಳಿದವುಗಳಲ್ಲಿ ಇಲ್ಲಿ ಹೇಳಿದ 'ಸಾಧನ' ಪದದಲ್ಲಿ ಅಧಿಷ್ಠಾನವೂ, 'ಕರ್ತೃ'ಪದದಲ್ಲಿ ದೈವವೂ, ಸೇರಿದ್ದರಿಂದ, ಸಂಕ್ಷೇಪದಿಂದ ಮೂರು ಕಾರಣಗಳೆಂದು ಹೇಳಿದಹಾಗಾಯಿತು.

ವಿಂ ಅಂ—ವಿಧಿಗೆ ವಿಷಯನಾಗಬೇಕಾದರೆ, ಸ್ವತಂತ್ರ ಕರ್ತೃತ್ವವು ಕಾರಣವಲ್ಲ; ಹಾಗೆ ತಿಳಿಯದಿದ್ದರೆ, ಪರಮಾತ್ಮನು ಕೂಡ ವಿಧಿವಿಷಯನೆಂದು ಹೇಳಬೇಕಾದೀತು. ವಿಧಿಯ ವಿಷಯವಾಗಲು, ಅದರ ಜ್ಞಾನ, ಕರ್ಮ ಫಲಕ್ಕಾಗಿ ಮಾಡುವ ಇಚ್ಛೆ, ಪ್ರಯತ್ನ, ಅಧಿಷ್ಠಾನ, ಈ ಮುಂತಾದವುಗಳ ಸಂಬಂಧವೇ ಕಾರಣ. ಇವೆಲ್ಲವು ಪರಮಾತ್ಮನಿಗೆ ಆಧೀನವಾಗಿದ್ದು, ಜೀವದಲ್ಲಿ ಉಂಟು. ಆದುದರಿಂದ ಅಸ್ವತಂತ್ರವಾದ ಜೀವವು ವಿಧಿಗೆ ವಿಷಯುವೆಂದು ಹೇಳಿದ್ದು ಯೋಗ್ಯವು.

೧೯. ಸಾತ್ವಿಕ ಜ್ಞಾನ, ಕರ್ಮ, ಮುಂದಾದವುಗಳು ಮುಕ್ತಿಗೆ ಕಾರಣವಾದ್ದರಿಂದ ಕರ್ಮಾನುಷ್ಠಾನಕ್ಕಾಗಿ ಸತ್ವಾದಿಗುಣಗಳಿಗೆ ಕಾರಣವಾದ ಜ್ಞಾನಾದಿಭೇದಗಳನ್ನು ಪ್ರತಿಪಾದಿಸಿದ್ದು :—

ज्ञानं कर्म च कर्ता च त्रिधैव गुणभेदतः ।
प्रोच्यते गुणसंख्याने यथावच्छृणु तान्यपि ॥ १९ ॥

ಅಂ—ಸತ್ವಾದಿಗುಣಗಳ ಭೇದದಿಂದ ಜ್ಞಾನ, ಕರ್ಮ, ಕರ್ತಾ, ಇವುಗಳಲ್ಲಿ ಪ್ರತಿಯೊಂದು ಮೂರು ವಿಧವಾಗಿವೆ. ವೈದಿಕಸಾಂಖ್ಯಶಾಸ್ತ್ರದಲ್ಲಿ ಹೇಳಿದ ಈ ಭೇದಗಳನ್ನು ನನ್ನಿಂದ ಯಥಾರ್ಥವಾಗಿ ಕೇಳು. ಹಿಂದಿನ ಶ್ಲೋಕದಲ್ಲಿ ಹೇಳಿದ ಜ್ಞಾನ, ಜ್ಞೇಯ, ಪರಿಜ್ಞಾತಾ ಇವುಗಳೇ ಈ ಶ್ಲೋಕದಲ್ಲಿ ಹೇಳಿದ ಜ್ಞಾನ, ಕರ್ಮ, ಕರ್ತಗಳೆಂದು ತಿಳಿಯಬೇಕು.

೨೦. ಜ್ಞಾನವು ಸತ್ವಾದಿಗುಣಗಳಿಂದ ಮೂರು ವಿಧವೆಂಬುದನ್ನು ಕುರಿತು ಮೂರು ಶ್ಲೋಕಗಳಿಂದ ಹೇಳಿದ್ದು :—

सर्वभूतेषु येनैकं भावमव्ययमीक्षते ।
अविभक्तं विभक्तेषु तज्ज्ञानं विद्धि सात्त्विकम् ॥ २० ॥

ಅಂ—ಪರಸ್ಪರ ಭಿನ್ನವಾಗಿಯೂ, ತಾರತಮ್ಯದಿಂದ ಯುಕ್ತವಾಗಿಯೂ, ಇರುವ ಸಕಲ ಜೀವ-ಜಡಗಳಿಗೆ ಆಧಾರನಾಗಿಯೂ, ಅವುಗಳಿಂದ ಭಿನ್ನನಾಗಿಯೂ, ನಿಯಾಮಕನಾಗಿಯೂ, ಇರುವ ಶ್ರೀವಿಷ್ಣುವು ಸರ್ವೋತ್ತಮನೆಂತಲೂ, (೩-೨-೧೧)ನೆಯ ಸೂತ್ರದಲ್ಲಿ ಹೇಳಿದಂತೆ ವಿವಿಧ ಅಧಿಷ್ಠಾನಗಳಲ್ಲಿ ವಾಸಮಾಡಿದ್ದರೂ, ಸ್ವಗತಭೇದರಹಿತನೆಂತಲೂ, ನಿರ್ದೋಷಿ ಎಂತಲೂ, ಸಕಲ ಸದ್ಗುಣವುಳ್ಳವನೆಂತಲೂ, ಅಧಿಷ್ಠಾನಮೂಲಕ ನಾಶರಹಿತನೆಂತಲೂ, ಪರಮಾತ್ಮನನ್ನು ವಿಷಯೀಕರಿಸುವ ಅಧಿಕಾರಿಯ ಜ್ಞಾನವು ಸಾತ್ವಿಕವೆಂದು ತಿಳಿ.

ವಿಂ ಅಂ—ಪರಮಾತ್ಮನು ಸ್ವಾಭಾವಿಕ ಮತ್ತು ನೈಮಿತ್ತಿಕ ನಾಶರಹಿತನೆಂದು ಹಿಂದೆ (೨-೨೭)ನೆಯ ಶ್ಲೋಕದಲ್ಲಿ ಹೇಳಲಾಗಿದೆ. ಪರಮಾತ್ಮನ ವಿಷಯಕ್ಕೆ ಯಥಾರ್ಥ ಜ್ಞಾನ-ಹುಟ್ಟಿಸುವ ಶಾಸ್ತ್ರವು ಕೂಡ ಸಾತ್ವಿಕವೆಂದು ಮುಂಡಕ (೧-೫)ನೆಯ ಮಂತ್ರದಲ್ಲಿ ಹೇಳಿ ಇದೆ. ಇಲ್ಲಿ ವಿವೇಕವೇನಂದರೆ, "ಭಿನ್ನವಾದ ಸಕಲ ಭೂತಗಳಲ್ಲಿ" ಎಂಬುದರಿಂದ "ಜೀವ-ಜಡಗಳಿಗೂ, ಜೀವಗಳಿಗೂ, ಜಡಗಳಿಗೂ" ಪರಸ್ಪರ ಭೇದವು, "ಭೂತಗಳಲ್ಲಿ ಇರುವನು" ಎಂದು ಹೇಳಿದ್ದರಿಂದ "ಜೀವೇಶ್ವರ ಭೇದವು, ಜಡೇಶ್ವರ ಭೇದವು," ಹೀಗೆ ಐದು ಭೇದಗಳು ಹೇಳಲ್ಪಟ್ಟವು. ಇದಲ್ಲದೆ, "ಭಿನ್ನವಾದ" ಎಂದು ಭೇದದ ಪ್ರಕಾರವನ್ನು ಹೇಳಿದ್ದರಿಂದ ಜೀವಜಡಗಳಿಗೆ ತಾರತಮ್ಯವು, 'ಮುಖ್ಯನೆಂದು ಹೇಳಿದ್ದರಿಂದ' ಜೀವಪರಮಾತ್ಮರಿಗೆ ತಾರತಮ್ಯ, ಹೇಳಿದಂತಾಯಿತು. ಈ ಮೇರೆಗೆ, ಪಂಚಭೇದ, ತಾರತಮ್ಯ ವಿಷಯಕ ಜ್ಞಾನವೇ ಸಾತ್ವಿಕವೆಂದು ತಿಳಿಯಬೇಕು.

೨೧.

पृथक्त्वेन तु यज्ज्ञानं नानाभावान्पृथग्विधान् ।
वेत्ति सर्वेषु भूतेषु तज्ज्ञानं विद्धि राजसम् ॥ २१ ॥

ಅಂ—ರಾಜಸ ಅಧಿಕಾರಿಗಳು ಸಕಲ ಚೇತನಾಚೇತನಗಳು ಪರಸ್ಪರ ಭಿನ್ನವಾಗಿಯೂ, ಪರಸ್ಪರ ತಾರತಮ್ಯವುಳ್ಳವುಗಳಾಗಿಯೂ, ಇರುವವೆಂದು ತಿಳಿಯುವರು, ಅಂದರೆ, ಪರಮಾತ್ಮನ ಹೊರ್ತು ಅನ್ಯ ವಿಷಯಕ ಜ್ಞಾನವು ಯಥಾರ್ಥವೇ ಸರಿ; ಆದರೆ, ಅವರಲ್ಲಿ ಪರಮಾತ್ಮನ ಸ್ವರೂಪ ವಿಷಯಕ್ಕೆ ಯಥಾರ್ಥಜ್ಞಾನವಿರದೆ, ಸಂದೇಹಜ್ಞಾನವಿರುವದು. ಈ ಅರ್ಥವು ತು ಶಬ್ದದಿಂದ ಸ್ಪಷ್ಟವಾಗುವದು. ಅವರ ಇಂತಹ ಜ್ಞಾನವು ಮತ್ತು ಹೀಗೆ ವಿಷಯೀಕರಿಸುವ ಅಧಿಕಾರಿಗಳು ರಾಜಸರೆಂತಲೂ, ಅವರ ಜ್ಞಾನವೂ ರಾಜಸವೆಂತಲೂ, ತಿಳಿ. ಸಾತ್ವಿಕರ ಜ್ಞಾನವು ಪರಮಾತ್ಮನ ವಿಷಯಕವೂ ಯಥಾರ್ಥವಾದುದರಿಂದ ಸಾತ್ವಿಕ-ರಾಜಸರಿಗೆ ಭೇದ ತಿಳಿದುಬರುವದು.

ವಿಂ ಅಂ—ಇಲ್ಲಿ ವಿವೇಕವೇನಂದರೆ, ಸಕಲ ಪದಾರ್ಥಗಳಲ್ಲಿ ಅಂತರ್ಗತನಾದ ಪರಮಾತ್ಮನಿಗೂ, ಪದಾರ್ಥಗಳಿಗೂ, ಭೇದಉಂಟೆಂಬ ಜ್ಞಾನವು ರಾಜಸವು, ತು ಶಬ್ದದಿಂದ ರಾಜಸರಿಗೆ ಪರಮಾತ್ಮ-ಭೂತಗಳಿಗೆ ಇರುವ ಭೇದಜ್ಞಾನವಷ್ಟೇ ಇರುವದೆಂದು ಸೂಚಿತವಾಗುವದು. ಇದರಿಂದ ಪರಮಾತ್ಮನು ಸ್ವತಂತ್ರನು; ಅವನಿಗೂ, ಅವನ ರೂಪ-ಅವಯವ-ಕ್ರಿಯೆಗಳಿಗೂ ಅಭೇದವು; ಇವೆರಡು ವಿಷಯಗಳಲ್ಲಿ ಸಂಶಯಾತ್ಮಕಜ್ಞಾನವು; ಅದರಂತೆ ಪರಮಾತ್ಮನಿಗೂ, ಜೀವಜಡಗಳಿಗೂ, ತಾರತಮ್ಯ ಉಂಟೆಂಬ ಜ್ಞಾನವು ರಾಜಸ.

೨೨.

यत्तु कृत्स्नवदेकस्मिन्कार्ये सक्तमहैतुकम् ।
अतत्त्वार्थवदल्पं च तत्तामसमुदाहृतम् ॥ २२ ॥

**ಅಂ**—ಇಲ್ಲಿ ಬದ್ಧನಾದ ಸಂಸಾರಿಯು ಮುಕ್ತನೆಂಬ ಮಿಥ್ಯಾಜ್ಞಾನದಿಂದ 'ಕಾರ್ಯ' ಶಬ್ದವು ಜೀವಪರವಾಗಿದೆ; ಮತ್ತು 'ಕೃತ್ಸ್ನ' ಶಬ್ದವು ಪರಮಾತ್ಮಪರವಾಗಿಯೂ, ಜಗತ್ಪರವಾಗಿಯೂ, ಇದೆ ಎಂದು ತಿಳಿಯಬೇಕು. ಇನ್ನು, ಶ್ಲೋಕಾರ್ಥವೇನಂದರೆ, (೧) ಒಂದೇ ಜೀವದಲ್ಲಿ ಪರಬ್ರಹ್ಮನೆಂಬ ನಿಶ್ಚಯಜ್ಞಾನವು ತಾಮಸವು. ಇದರಿಂದ ತಿಳಿಯತಕ್ಕದ್ದೇನಂದರೆ, ಬೃಹಂ (೩-೪-೧೦)ನೆಯ ಮಂತ್ರದಲ್ಲಿ ಹೇಳಿರುವಂತೆ ಪರಬ್ರಹ್ಮನು ತಾನು ಪರಬ್ರಹ್ಮನೆಂದು ಹೇಗೆ ತಿಳಿಯುವನೋ, ಹಾಗೆ ಜೀವವು ಪರಬ್ರಹ್ಮ ಎಂದು ತಿಳಿಯುವ ಜ್ಞಾನವೆಂಬರ್ಥ; ಅಂದರೆ, ಜೀವಕ್ಕೂ, ಪರಬ್ರಹ್ಮನಿಗೂ ಅಭೇದ ಉಂಟೆಂಬ ಜ್ಞಾನವು ತಾಮಸವೆಂಬರ್ಥ. (೨) ಒಂದೇ ಜೀವದಲ್ಲಿ ಜಗತ್ತೆಂಬ ನಿಶ್ಚಯವುಳ್ಳ ಜ್ಞಾನವು ತಾಮಸವು; ಅಂದರೆ, ಬೆಳ್ಳಿಯು ಬೆಳ್ಳಿ ಎಂಬ ಜ್ಞಾನ ಉಂಟಾಗುವಂತೆ, ಪ್ರಪಂಚದಲ್ಲಿ ಪ್ರಪಂಚವೆಂಬ ಜ್ಞಾನವು ಹುಟ್ಟುವದು, ಆದರೆ, ಹಾಗೆ ತಿಳಿಯದೆ 'ಸಿಂಪೆಯೇ ಬೆಳ್ಳಿ' ಎಂಬ ಮಿಥ್ಯಾಜ್ಞಾನ ಹುಟ್ಟುವಂತೆ, ಜೀವದಲ್ಲಿ ಜಗವೆಂಬ ಮಿಥ್ಯಾಜ್ಞಾನವು ಹುಟ್ಟುವದು. ಸಿಂಪೆಯಲ್ಲಿ ಬೆಳ್ಳಿಯು ಆರೋಪಿತವಾದಂತೆ, ಸಕಲ ಜಗತ್ತಿನಲ್ಲಿ ಜೀವವು ಆರೋಪಿತವಾಗಿದೆ ಎಂಬ ಜ್ಞಾನವು ಮಿಥ್ಯಾಜ್ಞಾನವಾದುದರಿಂದ ತಾಮಸವೆನಿಸುವದು. (ಇದು ವಿವರ್ತವಾದಿಗಳ ಸಿದ್ಧಾಂತ). (೩) ಆಕಾಶವು ಒಂದೇ ಇದ್ದರೂ, ಅನೇಕ ಉಪಾಧಿಗಳ ಸಂಬಂಧದಿಂದ ವಿವಿಧವಾಗಿ ತೋರುವಂತೆ, ಪರಬ್ರಹ್ಮನಿಂದ ಭಿನ್ನವಾಗದ ಜೀವವು ಹಲವು ಶರೀರಸಂಬಂಧಗಳಿಂದ ನಾನಾಬಗೆಯಾಗಿ ತೋರುವದು; ಅಂದರೆ, ಒಂದೇ ಜೀವವೇ ಜಗತ್ತೆಂದು ಕಲ್ಪಿತವಾಗಿದೆ. ಈ ಜ್ಞಾನವು ತಾಮಸವು (ಪರಿಣಾಮಿವಾದಿಗಳ ಸಿದ್ಧಾಂತವಿದು). (೪) ಯುಕ್ತಿಗೆ ವಿರುದ್ಧವಾಗಿ ಅಸತ್ಯವಿಷಯವುಳ್ಳ ಅಂದರೆ ಸದಸದ್ವಿಲಕ್ಷಣವೆಂಬ ಇಲ್ಲದ ಕಲ್ಪನೆಯಿಂದ ನಿಶ್ಚಯಿಸಿದ, ಅಜ್ಞಾನಪ್ರಚುರವಾದ ಮೂಲಕ ಅನರ್ಥಗೊಳಿಸುವ ಜ್ಞಾನವು ತಾಮಸವು. ಇಲ್ಲಿ 'ಪರಬ್ರಹ್ಮ' ಎಂದು 'ಜೀವ' ಎಂದು ಹೇಳದೆ, 'ಕೃತ್ಸ್ನ'ದಂತೆ ಎಂದು ಜಗತ್ತಿನ ಸಂಗ್ರಹಕ್ಕಾಗಿ ಹೇಳಿದೆ. ಅದರಿಂದ, ಪ್ರಾಕೃತಕಾರ್ಯರಹಿತನೂ, ಸ್ವತಂತ್ರನೂ, ಆದ ಪರಮಾತ್ಮನಿಗೂ, ಪರಾಧೀನನಾದ ಜೀವಕ್ಕೂ, ಇರುವ ಅಭೇದ ಜ್ಞಾನವು ಮಿಥ್ಯಾಜ್ಞಾನವಾಗಿ ತಾಮಸವೆನಿಸುವದು. 'ಕಾರ್ಯದಲ್ಲಿ' ಎಂದು ಹೇಳದೆ, 'ಒಂದೇ ಜೀವದಲ್ಲಿ' ಎಂದು ಹೇಳಿದ್ದರಿಂದ ಏಕಜೀವಮತವು ಸಂಗ್ರಹಿಸಲ್ಪಟ್ಟಿತು. ಇನ್ನು, ಮೊದಲಿನ ಅರ್ಧಖಂಡಿಯಿಂದ ಮುಂದಿನ ಅರ್ಧಖಂಡಿಯಲ್ಲಿ ಹೇಳಿದ ಅರ್ಥದಿಂದ ಪುನರುಕ್ತಿಯ ದೋಷಬರಲಿಲ್ಲವೇ ಎಂದು ಆಕ್ಷೇಪಿಸಿದರೆ, ಎರಡನೇ ಅರ್ಧಖಂಡಿಯಲ್ಲಿ ಹೇಳಿದ ಮೂರು ವಿಧದ ತಾಮಸಗಳಲ್ಲಿ ಪ್ರತಿಯೊಂದು ತಾಮಸಜ್ಞಾನವೆಂತಲೂ, ಮೊದಲಿನ ಅರ್ಧಖಂಡಿಯಲ್ಲಿ ಹೇಳಿದ ಮಿಥ್ಯಾಜ್ಞಾನವೆಂಬ ವಿಶೇಷಣದಿಂದ ಅದು ಹೆಚ್ಚಿನ ತಾಮಸಜ್ಞಾನವೆಂತಲೂ, ತೋರಿಸಲು ಹಾಗೆ ಹೇಳಲಾಗಿದೆ; ಅಥವಾ ಆರೂ ಪದಗಳನ್ನು ಒಂದೇ ವಿಭಕ್ತಿಯಲ್ಲಿಟ್ಟು ವಿಶೇಷ್ಯ-ವಿಶೇಷಣ ಸಂಬಂಧವನ್ನು ಹೇಳಬೇಕು.

೨೩. ಹಿಂದೆ ಪ್ರತಿಜ್ಞೆಮಾಡಿದಂತೆ, ಗುಣಗಳಿಂದಾದ ಕರ್ಮದಲ್ಲಿ ಸತ್ವಾದಿಭೇದಗಳಿಂದ ಮೂರು ವಿಧಗಳನ್ನು ಮುಂದಿನ ಮೂರು ಶ್ಲೋಕಗಳಿಂದ ಹೇಳಿದ್ದು:—

**नियतं संगरहितमरागद्वेषतः कृतम् ।**
**अफलप्रेप्सुना कर्म यत्तत्सात्विकमुच्यते ॥ २३ ॥**

**ಅಂ**—ನಿಯತವೆಂದರೆ, ಪರಮಾತ್ಮನು ಸರ್ವೋತ್ತಮನೆಂಬ ಜ್ಞಾನ ಮತ್ತು ಭಕ್ತಿಪೂರ್ವಕವಾಗಿಯೂ, ಅವನ ಆರಾಧನೆಗಾಗಿಯೂ, ತಮ್ಮ ವರ್ಣಾಶ್ರಮಗಳಿಗೆ ಉಚಿತವಾದ ಕರ್ಮಾಚರಣೆಯು. ಈ ವಿಷಯವಾಗಿ (೩-೩೦, ३-೧೧) ಶ್ಲೋಕಗಳಲ್ಲಿ ಹೇಳಿ ಇದೆ. ಇದಲ್ಲದೆ, ಯಾವುದನ್ನು

ಮಾಡುವದರಿಂದ ಫಲಪ್ರಾಪ್ತಿ, ಬಿಡುವದರಿಂದ ಪ್ರತಿಬಂಧ ಆಗುವದೋ, ಅದೇ ನಿಯತವು. ತನ್ನದೆಂಬ ಆಸಕ್ತಿ ಇಲ್ಲದ, ಕೀರ್ತಿಯುಂಟಾಗಲು ಅದರಲ್ಲಿ ಆಸಕ್ತಿ ಇಡದೆ ಮತ್ತು ಅಪಕೀರ್ತಿಯುಂಟಾದರೆ, ಅದನ್ನು ಅಪೇಕ್ಷಿಸದೆ, ಕರ್ಮದಲ್ಲಿ ಫಲಾಪೇಕ್ಷೆಯಿಲ್ಲದೆ, ಮಾಡುವದೇ ಸಾತ್ವಿಕಕರ್ಮವು.

೨೪.

यत्तु कामेप्सुना कर्म साहंकारेण वा पुनः ।
क्रियते बहुलायासं तद्राजसमुदाहृतम् ॥ २४ ॥

ಅಂ— ಫಲಾಪೇಕ್ಷೆಯಿಂದ, ಕರ್ತೃತ್ವಾಭಿಮಾನದಿಂದ, ಬಹು ಆಯಾಸದಿಂದ, ಮಾಡಿದ ಕರ್ಮವು ರಾಜಸವು. ಇಲ್ಲಿ ತು ಶಬ್ದವು ರಾಜಸಕರ್ಮವು ಸಾತ್ವಿಕಕರ್ಮಕ್ಕಿಂತ ನೀಚ ಎಂಬ ವಿಶೇಷಾರ್ಥವನ್ನು ಹೇಳುವದು.

೨೫.

अनुबंधं क्षयं हिंसामनपेक्ष्य च पौरुषम् ।
मोहादारभ्यते कर्म तत्तामसमुदाहृतम् ॥ २५ ॥

ಅಂ— ಬಂಧಿಸುವ ಒಂದು ಕರ್ಮವು ಅನ್ಯದನ್ನು ಹುಟ್ಟಿಸುವದೆಂದೂ, ನಾಶವನ್ನೂ, ಅನ್ಯರಿಗೆ ಪೀಡೆಯನ್ನೂ, ಮಾಡುವದೆಂದೂ, ಆಲೋಚಿಸದೆ, ಕರ್ಮಮಾಡುವಲ್ಲಿ ತನ್ನ ಸಾಮರ್ಥ್ಯವನ್ನು ಪರೀಕ್ಷಿಸದೆ, ತಾನೇ ಕರ್ತನೆಂಬ ಮಿಥ್ಯಾಜ್ಞಾನದಿಂದ ಮಾಡುವವನ ಕರ್ಮವು ತಾಮಸವು. ಇಲ್ಲಿ 'ಮಾಡುವವನೆಂದು' ಹೇಳದೆ, ಆರಂಭಿಸುವವನೆಂದು ಹೇಳಿದ್ದರಿಂದ, ಮೇಲೆ ಹೇಳಿದ ಮಿಥ್ಯಾಜ್ಞಾನ ಮೂಲಕ ಆರಂಭಿಸಿದ ಕರ್ಮವು ಮುಗಿಯುವದಿಲ್ಲೆಂದು ಸೂಚಿತವಾಗುವದು.

೨೬. ಹಿಂದೆ ಹೇಳಿದ ಮೇರೆಗೆ, ಗುಣಗಳಿಂದಾದ ಕರ್ತನಲ್ಲಿ ಸಾತ್ವಿಕಾದಿಭೇದದಿಂದ ಮೂರು ವಿಧಗಳನ್ನು ಮುಂದಿನ ಮೂರು ಶ್ಲೋಕಗಳಿಂದ ಹೇಳಿದ್ದು:—

मुक्तसंगोऽनहंवादी
धृत्युत्साहसमन्वितः ।
सिद्ध्यसिद्ध्योर्निर्विकारः
कर्ता सात्त्विक उच्यते ॥ २६ ॥

ಅಂ—ಫಲಾಸಕ್ತಿ ಇಲ್ಲದವನೂ, ಸರ್ವವೂ ಪರಮಾತ್ಮನಿಗೆ ಆಧೀನವಾಗಿದೆ ಎಂಬ ನಿಶ್ಚಯವುಳ್ಳವನಾದ್ದರಿಂದ ತಾನು ಕರ್ತನೆಂಬ ಅಭಿಮಾನವಿಲ್ಲದವನೂ, ಕರ್ಮಮಾಡುವಾಗ್ಗೆ ಪರಿಹರಿಸಲು ಅಶಕ್ಯವಾದ ದುಃಖಗಳನ್ನು ಸಹಿಸುವವನೂ, ಕರ್ಮವನ್ನು ಮುಗಿಸಲು ಆತುರನಾದವನೂ, ಕರ್ಮದಿಂದ ಫಲದೊರೆಯಲಿ, ದೊರೆಯದಿರಲಿ, ಅವುಗಳಿಂದ ಹರುಷ-ವಿಷಾದಪಡದವನೂ, ಸಾತ್ವಿಕಕರ್ತನೆನಿಸುವನು. ಇಲ್ಲಿ अनहं मानी ಎಂದು ಹೇಳದೆ अनहं वादी ಎಂದು ಹೇಳಿದ್ದರಿಂದ, अहं मम 'ನಾನು ನನ್ನದೆಂಬ' ಅಭಿಮಾನವನ್ನು ಬಿಡುವದು ಅಶಕ್ಯ, ಆದ್ದರಿಂದ ಅವುಗಳನ್ನು ತ್ಯಜಿಸಲೇಬೇಕೆಂಬ ಅರ್ಥವು ಸ್ಫುಟವಾಗುವದು.

रागी कर्मफलप्रेप्सुर्लुब्धो हिंसात्मकोऽशुचिः ।
हर्षशोकान्वितः कर्ता राजसः परिकीर्तितः ॥ २७ ॥

**ಅರ್ಥ**—ಕೀರ್ತಿ ಮುಂತಾದವುಗಳ ಅಭಿಲಾಷೆಯುಳ್ಳವನು, ಕರ್ಮಫಲ ದೊರೆಯಬೇಕೆಂದು ಬಯಸುವವನು, ಕರ್ಮಕ್ಕೆ ಬೇಕಾದ ದ್ರವ್ಯ ವೆಚ್ಚಮಾಡುವದರಲ್ಲಿ ಲೋಭಿ, ಹಿಂಸಕ, ಪರಮಾತ್ಮನಿಗೆ ಅರ್ಪಿಸುವ ದ್ರವ್ಯಾದಿಗಳಲ್ಲಿ ಶುಚಿಹೀನನು, ಬಾಹ್ಯಾಂತರಂಗಶುದ್ಧಿಹೀನನು, ಕರ್ಮವು ಸಿದ್ಧಿಸಲಿ, ಸಿದ್ಧಿಸದಿರಲಿ, ಅವುಗಳಿಂದ ಒದಗುವ ಹರುಷಶೋಕಗಳಿಂದ ಯುಕ್ತನು ರಾಜಸಕರ್ತನೆನಿಸುವನು.

೨೮.

अयुक्तः प्राकृतः स्तब्धः शठो नैष्कृतिकोऽलसः ।
विषादी दीर्घसूत्री च कर्ता तामस उच्यते ॥ २८ ॥

**ಅಂ**—ಪರಮಾತ್ಮನಿಗೆ ಅರ್ಪಿಸುವ ಬುದ್ಧಿಯಿಲ್ಲದವ, ಶಬ್ದತತ್ವದಲ್ಲಿ ಹೇಳಿದಂತೆ ಪ್ರಾಕೃತವೆಂದರೆ, ವಿದ್ಯೆಹೀನನು, ಅಥವಾ ಪಶುಸಮಾನನು, ಸ್ವಂತ ಅಭಿಮಾನ ಮೂಲಕ ನಮ್ರನಾಗದವ, ದೀರ್ಘದ್ವೇಷದಿಂದ ಕರ್ಮಮಾಡುವವ, ನೀಚಕರ್ಮಿ, ಯೋಗ್ಯಸಮಯ ಒದಗಲು, ಕರ್ಮದಲ್ಲಿ ಉದಾಸೀನನು, ಎಲ್ಲ ಕರ್ಮಗಳಲ್ಲಿ ಮನೋದೌರ್ಬಲ್ಯವುಳ್ಳವ, ಅಥವಾ ಕರ್ಮಕಾಲವು ಒದಗಲಾಗಿ ಮುಂದೆ ಮಾಡಬಹುದೆಂದು ಧೇನಿಸುವವ, ಅನ್ಯರಿಂದ ದೋಷ ಒದಗಿ ಬಹುಕಾಲ ಮಿಕ್ಕಿದ್ದರೂ, ಅದನ್ನೇ ಮನಸ್ಸಿನಲ್ಲಿ ಇಟ್ಟುಕೊಂಡಿರುವವ, ತಾಮಸಕರ್ತನು.

೨೯. ಈ ಮೇರೆಗೆ, ಗುಣಗಳಿಂದಾದ ಸತ್ವಾದಿಭೇದಗಳಿಂದ ಜ್ಞಾನ, ಕರ್ಮ, ಕರ್ತಾ, ಇವುಗಳಲ್ಲಿ ಮೂರು ವಿಧಗಳನ್ನು ಹೇಳಿ, ಈಗ ಬುದ್ಧಿ ಮತ್ತು ಧೈರ್ಯ, ಇವುಗಳಲ್ಲಿ ತ್ರಿಗುಣಮೂಲಕ ಮೂರು ವಿಧಗಳನ್ನು ಮುಂದಿನ ಏಳು ಶ್ಲೋಕಗಳಿಂದ ಹೇಳಿದ್ದು:—

बुद्धेर्भेदं धृतेश्चैव गुणतस्त्रिविधं शृणु ।
प्रोच्यमानमशेषेण पृथक्त्वेन धनंजय ॥ २९ ॥

**ಅಂ**—ಸತ್ವಾದಿ ಗುಣಭೇದದಿಂದ ಬುದ್ಧಿ ಮತ್ತು ಧೈರ್ಯ, ಇವುಗಳಲ್ಲಿ ಕೂಡ ಮೂರು ವಿಧಗಳುಂಟೆಂದು ನಾನು ಹೇಳುವದನ್ನೆಲ್ಲ ಕೇಳಿ, ಅದರಲ್ಲಿ ಶ್ರದ್ಧೆಯನ್ನಿಡು ಕಂಡಿಯಾ ಅರ್ಜುನಾ! ಇಲ್ಲಿ 'ಧನಂಜಯನೆಂದು' ಸಂಬೋಧಿಸಿದ್ದರಿಂದ, ದಿಗ್ವಿಜಯದಿಂದ ಮನುಷ್ಯಸಂಬಂಧವಾದ ದ್ರವ್ಯಧನಗಳಂತೆ ಅಂತರಂಗಶತ್ರುಗಳನ್ನೂ ಜಯಿಸಿದ್ದರಿಂದ ಪರಮಾತ್ಮನಲ್ಲಿ ಭಕ್ತಿ ಮೊದಲಾದವುಗಳೆಂಬ ಧನವನ್ನು ಸಂಪಾದಿಸಬೇಕೆಂದು ಸೂಚಿತವಾಗುವದು.

೩೦. ಕೆಳಗಿನ ಮೂರು ಶ್ಲೋಕಗಳಿಂದ ಬುದ್ಧಿಯಲ್ಲಿಯೂ ಮೂರು ಬಗೆಗಳನ್ನು ಹೇಳಿದ್ದು:—

प्रवृत्तिं च निवृत्तिं च कार्याकार्ये भयाभये ।
बंधं मोक्षं च या वेत्ति बुद्धिः सा पार्थ सात्त्विकी ॥ ३० ॥

**ಅಂ**—ಸಂಸಾರಕ್ಕೆ ಕಾರಣವಾದ ಪ್ರವೃತ್ತಿಮಾರ್ಗವನ್ನೂ, ಅದರಿಂದ ಬಿಡುಗಡೆಹೊಂದುವ ನಿವೃತ್ತಿಮಾರ್ಗವನ್ನೂ, ಮಾಡತಕ್ಕದ್ದನ್ನೂ, ಬಿಡತಕ್ಕದ್ದನ್ನೂ, ಅವುಗಳ ನಿಮಿತ್ತದಿಂದ ಭಯ,

ಅಭಯಗಳನ್ನೂ, ಬಂಧಮೋಕ್ಷಪ್ರಕಾರಗಳನ್ನೂ, ಯಾವ ಬುದ್ಧಿಯಿಂದ ಮನುಷ್ಯನು ತಿಳಿಯುವನೋ, ಅದು ಸಾತ್ವಿಕವು. ಇಲ್ಲಿ 'ಪಾರ್ಥ' ಎಂದು ಸಂಬೋಧಿಸಿದ ಮೂಲಕ ಪೃಥಾದೇವಿಯು ಮಹಾ ಸಾತ್ವಿಕಳಾದ್ದರಿಂದ ಅವಳ ಮಗನಾದ ಪಾರ್ಥನು ಕೂಡ ಸಾತ್ವಿಕಬುದ್ಧಿಯನ್ನೇ ಸಂಪಾದಿಸಲು ಯೋಗ್ಯನೆಂದು ಸೂಚಿತವಾಗುವದು.

೩೧.

यया धर्ममधर्मं च कार्यं चाकार्यमेव च ।
अयथावत्प्रजानाति बुद्धिः सा पार्थ राजसी ॥ ३१ ॥

ಅಂ—ಪಾರ್ಥಾ, ಧರ್ಮ, ಅಧರ್ಮ, ಕಾರ್ಯ, ಅಕಾರ್ಯಗಳನ್ನು ಯಥಾರ್ಥವಾಗಿ ತಿಳಿಯದೆ, ಅಂದರೆ, ಯಥಾರ್ಥ, ಅಯಥಾರ್ಥಗಳ ನಿಯಮಜ್ಞಾನವಿಲ್ಲದೆ, ತಿಳಿಯುವ ಬುದ್ಧಿಯೇ ರಾಜಸವು. ಇಲ್ಲಿ ಏತ ಕಾರದಿಂದ ರಾಜಸನಿಗೆ ಬಂಧಮೋಕ್ಷಗಳ ಯಥಾರ್ಥಜ್ಞಾನ ಕೂಡ ಇಲ್ಲೆಂದು ಸೂಚಿತವಾಗುವದು.

೩೨.

अधर्मं धर्ममिति या मन्यते तमसावृता ।
सर्वार्थान्विपरीतांश्च बुद्धिः सा पार्थ तामसी ॥ ३२ ॥

ಅಂ—ಅಧರ್ಮವೇ ಧರ್ಮವೆಂದು ತಿಳಿಯುವದಲ್ಲದೆ ಅಜ್ಞಾನದಿಂದ ಮುಸುಕಿದ್ದರಿಂದ ವಿಪರೀತವಾಗಿ ತಿಳಿಯುವ ಅಂದರೆ, ಸಕಲ ಪದಾರ್ಥಗಳನ್ನು ಅಸತ್ಯ, ಅನೀಶ್ವರ, ಸ್ವತಂತ್ರ, ಕ್ಷಣಿಕ, ಎಂಬೀ ದೃಷ್ಟಿಯಿಂದ ನೋಡುವವನ ಬುದ್ಧಿಯೇ ತಾಮಸವು.

**ವಿಂ. ಅಂ**—ಇಲ್ಲಿ ವಿವೇಕವೇನಂದರೆ, ಸರ್ವ ಪದಾರ್ಥಗಳನ್ನು ವಿಪರೀತವಾಗಿ ನೋಡುವವನೆಂದು ಹೇಳುವದರಿಂದ ಮುಗಿಸಿದ್ದರೂ, ಮೊದಲಿನ ಅರ್ಧಖಚೆಯಲ್ಲಿ 'ಅಧರ್ಮವನ್ನು ಧರ್ಮವೆಂದು ತಿಳಿಯುವ' ಈ ಅಂಶದಿಂದ ಪುನರುಕ್ತಿಯ ದೋಷವಿಲ್ಲವೇ ? ಎಂದು ಕೇಳಿದರೆ, ಧರ್ಮಾಧರ್ಮಗಳ ಯಥಾರ್ಥಜ್ಞಾನವು ಅವಶ್ಯವೆಂದೂ, ವಿಪರೀತಜ್ಞಾನವು ಮಹಾ ಅನರ್ಥಕ್ಕೆ ಕಾರಣವಾದ್ದರಿಂದ ಅದನ್ನು ದೂರದಲ್ಲಿಯೇ ತ್ಯಜಿಸಬೇಕೆಂದೂ, ಸೂಚಿಸುವದಕ್ಕಾಗಿ ಹಾಗೆ ಹೇಳಿ ಇದೆ, ಹಾಗಾದರೆ **ತಾಮಸೀ** ಎಂಬುದರಿಂದ ತಮೋಮೂಲಕವೆಂದು ಸಿದ್ಧವಾಗುವದರಿಂದ 'ತಾಮಸದಿಂದ ಮುಸುಕಿದ' ಎಂದು ಮತ್ತೆ ಹೇಳುವ ಉದ್ದೇಶವೇನೆಂದು ಕೇಳಿದರೆ, ಅಂಧಕಾರವು ದೃಷ್ಟಿಗೆ ಪ್ರತಿಬಂಧಕವಾಗುವಂತೆ ತಮೋಗುಣವು ಬುದ್ಧಿಗೆ ಅಡ್ಡಿಯಾಗುವದರಿಂದ, ಆ ಗುಣವು ಅತಿಹೇಯವೆಂದು ತೋರಿಸುವದಕ್ಕಾಗಿ ಹಾಗೆ ಹೇಳಲಾಗಿದೆ. ಇನ್ನು ರಾಜಸ–ತಾಮಸ ಬುದ್ಧಿಗಳಿಗೆ ಭೇದವೇನೆಂದು ಕೇಳಿದರೆ, ರಾಜಸ ಬುದ್ಧಿಯಲ್ಲಿಯು ಯಥಾರ್ಥಜ್ಞಾನವು ಪೂರ್ಣವಾಗಿಲ್ಲ; ಆದರೆ, ತಾಮಸಬುದ್ಧಿಯಲ್ಲಿ ವಿಪರೀತಜ್ಞಾನ ಉಂಟು. ಅದರಂತೆಯೇ, ಮೊದಲನೇದರಲ್ಲಿ ಸಂಶಯ, ಎರಡನೇದರಲ್ಲಿ ವಿಪರೀತಜ್ಞಾನ, ಹೀಗೆ ಭೇದ ಉಂಟು. ರಾಜಸಬುದ್ಧಿಯಲ್ಲಿ ಶಂಖವು ಹಳದಿ ಬಣ್ಣದ್ದೆಂಬ ಭ್ರಾಂತಿಯಾಗುವಂತೆ, ಪ್ರಕಾರದಲ್ಲಿ ಅಯಥಾರ್ಥಜ್ಞಾನ ಉಂಟು, ಆದರೆ, ತಾಮಸಬುದ್ಧಿಯಲ್ಲಿ ಸಿಂಪೆಯು ಬೆಳ್ಳಿಯೆಂಬುವ ಭ್ರಾಂತಿಯಂತೆ, ಪ್ರಕಾರದಲ್ಲಿ ವಿಪರೀತಜ್ಞಾನವು. ಪ್ರಕೃತ ಗ್ರಂಥದಲ್ಲಿ ಸಾತ್ವಿಕ, ರಾಜಸ, ತಾಮಸ, ಬುದ್ಧಿಗಳ ವಿಷಯಕ್ಕೆ ದೃಷ್ಟಾಂತವೇನೆಂದು ಕೇಳಿದರೆ, (೧–೩೬, ೧–೪೪) ಶ್ಲೋಕಗಳಲ್ಲಿ 'ನಮಗೆ ಪಾಪ ತಗಲದೇ ಇರದು' ಎಂದು ನುಡಿದ ಬುದ್ಧಿಯು ತಾಮಸವು; (೨–೫, ೬) ಶ್ಲೋಕಗಳಲ್ಲಿ 'ಬಾಂಧ

ವರ ಸಂಹಾರಕ್ಕಿಂತ ಭಿಕ್ಷಾಟನೆಯಿಂದ ಉಪಜೀವನವೇ ಲೇಸು' 'ಯುದ್ಧದಿಂದ ನಮಗೆ ಶ್ರೇಯಸ್ಸುಂಟಾಗುವದೋ, ಇಲ್ಲವೋ, ತಿಳಿಯದು' ಎಂದು ಹೇಳಿದ ಬುದ್ಧಿಯು ರಾಜಸವು. (೩–೩೫, ೧೮–೪೭) ಶ್ಲೋಕಗಳಲ್ಲಿ 'ಕ್ಷತ್ರಿಯರಿಗೆ ಯುದ್ಧದ ಹೊರ್ತು ಅನ್ಯಧರ್ಮವು ಶ್ರೇಯಸ್ಕರವಲ್ಲೆಂದು' ಹೇಳಿದ ಬುದ್ಧಿಯು ಸಾತ್ವಿಕವು.

೩೩. ಇನ್ನು, ಧೈರ್ಯದಲ್ಲಿ ವಿಧಗಳನ್ನು ಮುಂದಿನ ಮೂರು ಶ್ಲೋಕಗಳಿಂದ ಹೇಳಿದ್ದು:—

धृत्या यया धारयते
मनःप्राणेंद्रियक्रियाः ।
योगेनाव्यभिचारिण्या
धृतिः सा पार्थ सात्त्विकी ॥ ३३ ॥

ಅಂ— ಯೋಗ್ಯವಿಷಯದಿಂದಲೂ, ಭಗವದ್ಭಕ್ತಿಯಿಂದಲೂ, ಯುಕ್ತವಾದ ಧೈರ್ಯವು ಮನಸು, ಪ್ರಾಣ, ಇಂದ್ರಿಯ, ಇವುಗಳ ವ್ಯಾಪಾರಗಳನ್ನು ಜರಗಿಸುವದು; ಇದೇ ಸಾತ್ವಿಕ ಧೈರ್ಯವು.

೩೪.

यया तु धर्मकामार्थान्धृत्या धारयतेऽर्जुन ।
प्रसंगेन फलाकांक्षी धृतिः सा पार्थ राजसी ॥ ३४ ॥

ಅಂ—ಧರ್ಮ, ಕಾಮ, ಅರ್ಥಗಳನ್ನು ಬಯಸುವ ಕರ್ಮದಲ್ಲಿ ಅತ್ಯಾಸಕ್ತಿಯಿಂದ ಫಲಾಪೇಕ್ಷೆಯುಳ್ಳ ಧೈರ್ಯವು ರಾಜಸವು.

೩೫.

यया स्वप्नं भयं शोकं विषादं मदमेव च ।
न विमुंचति दुर्मेधा धृतिः सा पार्थ तामसी ॥ ३५ ॥

ಅಂ—ಸ್ವಪ್ನವೆಂದರೆ ಅತಿನಿದ್ರೆ, ಭಯ, ಶೋಕ, ಮನೋದೌರ್ಬಲ್ಯ, ಅಹಂಕಾರ, ಈ ಮುಂತಾದವುಗಳು ಪರಮಾತ್ಮನ ದ್ವೇಷಕ್ಕೆ ಕಾರಣಗಳಾದುದರಿಂದ ಅವುಗಳನ್ನು ಬಿಡದ ದುಷ್ಟಪುರುಷನ ಧೈರ್ಯವೇ ತಾಮಸವು.

೩೬–೩೭. ತ್ರಿಗುಣಗಳಿಂದ ಸತ್ವಾದಿಭೇದಗಳಿಗನುಸರಿಸಿ ಸುಖದಲ್ಲಿ ಮೂರು ವಿಧಗಳನ್ನು ಹೇಳಿದ್ದು:—

सुखं त्विदानीं त्रिविधं शृणु मे भरतर्षभ ।
अभ्यासाद्रमते यत्र दुःखांतं च निगच्छति ॥ ३६ ॥

यत्तदग्रे विषमिव परिणामेऽमृतोपमम् ।
तत्सुखं सात्त्विकं प्रोक्तमात्मबुद्धिप्रसादजम् ॥ ३७ ॥

ಅಂ—ಭರತಕುಲಭೂಷಣನೇ, ಸುಖದಲ್ಲಿರುವ ಮೂರು ವಿಧಗಳನ್ನು ಇನ್ನು ಕೇಳು. ಅಭ್ಯಾಸದಿಂದ ಮನಸು ತಿರುತಿರುಗಿ ಬಹುಕಾಲದವರೆಗೆ ಯಾವ ಸುಖದಲ್ಲಿ ರಮಿಸುವದೋ, ಯಾವುದರಿಂದ ಸಂಪೂರ್ಣವಾಗಿ ದುಃಖವು ನಾಶಹೊಂದುವದೋ, ಯಾವುದು ಪ್ರಾರಂಭಕ್ಕೆ ಪ್ರಯಾಸಸಾಧ್ಯವಿರುವ ಮೂಲಕ ವಿಷದಂತೆ ತೋರಿ, ಪರಿಣಾಮದಲ್ಲಿ ಅಮೃತಸಮವೆನಿಸುವದೋ, ಯಾವುದಕ್ಕೆ ಭಗವದನುಗ್ರಹವೇ ಸೆಲೆಯೋ, (ಅಥವಾ ಬುದ್ಧಿಪ್ರಸಾದ ಅಂದರೆ ವಿಷಯಗಳಲ್ಲಿ ತಾನಾಗಿ ಪ್ರವೃತ್ತಿಯಾಗದಿರೋಣ) ಅಂಥ ಸುಖವೇ ಸಾತ್ವಿಕವು.

ವಿಂ ಅಂ—ಸಾತ್ವಿಕಸುಖವು ಅತಿದುರ್ಲಭವು; ಹೇಗಂದರೆ, ಇಂತಹ ಸುಖಕ್ಕೆ ಸಾಧನವಾದ ಸದಸದ್ವಿವೇಕವು ಮೊದಲು ದುರ್ಲಭವು. ಅದರಿಂದ ಹುಟ್ಟುವ ಮೋಕ್ಷೇಚ್ಛೆಯು ಶಮದಮಾದಿ ಸಂಪತ್ತಿ, ಸನ್ಯಾಸ, ಶ್ರದ್ಧೆಯೇ ಕಾರಣವಾಗಿಯುಳ್ಳ ಶ್ರವಣ, ಮುಕ್ತಿಗೆ ಸಾಧನವಾದ ಶ್ರವಣದಿಂದ ಹುಟ್ಟಿದ ಜ್ಞಾನ, ಜ್ಞಾನದ ಪಕ್ವಫಲವಾದ ಸಮಾಧಿಯೋಗ ಇವೆಲ್ಲ ಒಂದರಕಿಂತಲೂ ಒಂದು ದುರ್ಲಭವಾದವುಗಳೇ ಎಂದು ತಿಳಿಯಬೇಕು. ಇವೆರಡು ಶ್ಲೋಕಗಳಲ್ಲಿ ಮೊದಲನೇದರ ಅರ್ಧಚರಣೆಯಿಂದ ಸುಖದ ಸಾಮಾನ್ಯ ಲಕ್ಷಣ, ಎರಡನೇ ಶ್ಲೋಕದಲ್ಲಿ ಸಾತ್ವಿಕಸುಖ, ಇವೆರಡನ್ನು ವರ್ಣಿಸಿರುವರೆಂದು ತಿಳಿಯಬೇಕು.

೩೮.

विषयेंद्रिसंयोगाद्यत्तदग्रेऽमृतोपमम् ।
परिणामे विषमिव तत्सुखं राजसं स्मृतम् ॥ ३८ ॥

ಅಂ—ಶಬ್ದಾದಿ ವಿಷಯಗಳಿಗೂ, ಶ್ರೋತ್ರಾದಿ ಇಂದ್ರಿಯಗಳಿಗೂ, ಆದ ಸಂಯೋಗದಿಂದ ಹುಟ್ಟಿದ ವಿಷಯಾನುಭವಜನ್ಯ ಪ್ರಸಿದ್ಧಸುಖವು ಪ್ರಾರಂಭದಲ್ಲಿ ಅಮೃತದಂತೆಯೂ, ಪರಿಣಾಮದಲ್ಲಿ ವಿಷದಂತೆಯೂ, ಇರುವದು. ಇದೇ ರಾಜಸ ಸುಖವು.

೩೯.

यदग्रे चानुबंधे च सुखं मोहनमात्मनः ।
निद्रालस्यप्रमादोत्थं तत्तामसमुदाहृतम् ॥ ३९ ॥

ಅಂ— ಪ್ರಾರಂಭದಲ್ಲಿಯೂ, ಪರಿಣಾಮದಲ್ಲಿಯೂ, ಮೋಹಕವಾಗಿದ್ದು, ಶರೀರಮಾಂದ್ಯ, ಅಧರ್ಮಬುದ್ಧಿ, ನಿದ್ರೆ, ಇವುಗಳಿಂದ ಹುಟ್ಟುವ ಸುಖವೇ ತಾಮಸವು.

ವಿಂ ಅಂ—ಮೋಹಕರವಾದುದಕ್ಕೆ ಸುಖವೆಂದು ಹೇಳುವದೇಕೆಂದು ಕೇಳಿದರೆ, ಆಯಾಸದ ವಿಶ್ರಾಂತಿಗೆ ಕಾರಣವಾದುದರಿಂದ ನಿದ್ರೆಯು ಸುಖಕ್ಕೆ ಕಾರಣವಾಗಿದೆ; ಅಂತಹ ವಿಶ್ರಾಂತಿಗೆ ವಿರುದ್ಧವಾದವುಗಳಲ್ಲಿ ದ್ವೇಷ ಕಂಡಿದೆ. ದೇಹೇಂದ್ರಿಯಗಳಿಗೆ ಶ್ರಮಪರಿಹಾರಕ್ಕಾಗಿ ಇಂದ್ರಿಯ ವ್ಯಾಪಾರ ಮಾಂದ್ಯರೂಪ ಆಲಸ್ಯವು ಸುಖಕ್ಕೆ ಕಾರಣವಾಗಿದೆ. ಅದೇಮೇರೆಗೆ, ಬುದ್ಧಿಗೆ ಏಕಾಗ್ರತೆಯಿಂದ ಒದಗಿದ ಪ್ರಯಾಸದ ನಿವೃತ್ತಿಗಾಗಿ ಪ್ರಮಾದವು ಕಾರಣವಾದ್ದರಿಂದ ಅದು ಸುಖಕ್ಕೆ ಕಾರಣವೆಂಮ ಹೇಳಿ ಇದೆ. ಹಾಗಾದರೆ, ಇಂತಹ ಸುಖವು ತಾಮಸವೆಂದು ಹೇಳುವದೇಕೆಂದರೆ, ತಾಮಸಸುಖವು ಸುಖವರ್ಗದಲ್ಲಿ ಸೇರಿದರೂ, ಉದ್ದಿಷ್ಟ ಕಾರ್ಯವು ನಿರ್ವಿಘ್ನತೆಯಿಂದ ಸಾಗುವದಕ್ಕೆ ವಿರೋಧಿಯಾದ್ದರಿಂದ ತಾಮಸವೇ ಸೈ. ಸಾತ್ವಿಕಸುಖವು ಮುಪ್ಪು, ಮರಣ, ಮುಂತಾದವುಗಳನ್ನು ನಾಶಗೊಳಿಸುವದರಿಂದ ಭೋಗಕ್ಕೆ ಯೋಗ್ಯವಲ್ಲದೆ ಬಿಡಲು ಅಶಕ್ಯವಾಗಿಯೂ, ಅಮೃತಕ್ಕೆ ಸದೃಶವಾಗಿಯೂ, ಇರುವದು;

ಆದರೆ, ರಾಜಸ ಸುಖವು ಜರಾ, ವ್ಯಾಧಿ, ಮರಣಗಳಿಗೆ ಕಾರಣವಾದ್ದರಿಂದ ವಿಷಸದೃಶವು. ಮುಂಡಕ (೬–೨) ನೆಯ ಮಂತ್ರದಲ್ಲಿ ಹೇಳಿದಂತೆ ರಾಜಸಸುಖವು ವಿವಿಧ ಯೋನಿಗಳಲ್ಲಿ ಒಗೆದು ತಿರುತಿರುಗಿ ಮೃತ್ಯುವನ್ನು ತರುವದು. ಸಾತ್ವಿಕಸುಖದಂತೆ, ತಾಮಸಸುಖವು ಅಮೃತಸದೃಶವಾಗಿ ಅಥವಾ ರಾಜಸ ಸುಖದಂತೆ, ವಿಷಕ್ಕೆ ಸದೃಶವಾಗಿರದೆ ಮೋಹಕವೆಂದರೆ. ಕಾರ್ಯವು ವಿಘ್ನವಿಲ್ಲದೆ ಜರಗುವದಕ್ಕೆ ವಿರೋಧಿಯಾಗಿದೆ. ಹಾಗಾದರೆ, ವಿಷಕ್ಕೆ ಸಮವಾದ ರಾಜಸಸುಖವು ತಾಮಸ ಸುಖಕ್ಕಿಂತ ಕೀಳ ವೆಂದು ಹೇಳಿದಂತಾಯಿತಲ್ಲವೇ, ಎಂದು ಆಕ್ಷೇಪಿಸಿದರೆ, ಹೌದು, ಆದರೂ, ರಾಜಸಸುಖವು ಪ್ರಾರಂಭ ದಲ್ಲಿ ಅಮೃತಕ್ಕೆ ಸರಿಯಾದ್ದರಿಂದ ತಾಮಸ ಸುಖಕ್ಕಿಂತ ಹೆಚ್ಚಿನದು. ಇನ್ನು, ಸಾತ್ವಿಕಸುಖವುಳ್ಳವನು ಮೋಕ್ಷಕ್ಕೆ ಯೋಗ್ಯನಾದುದರಿಂದ ಪ್ರಸಿದ್ಧ ಅಮೃತಕ್ಕಿಂತ ಸಾತ್ವಿಕಸುಖವು ಮೇಲು. ಒಮ್ಮೆ ಸೇವಿಸಿ ದರೆ, ಮರಣದುಃಖಕ್ಕೆ ಕಾರಣವಾಗುವ ವಿಷಕ್ಕಿಂತ ತಿರುತಿರುಗಿ ಬರುವ ಮರಣದುಃಖಕ್ಕೆ ಕಾರಣ ವಾಗುವ ರಾಜಸಸುಖವು ಶ್ರೇಷ್ಠವು; ಹೀಗಿದ್ದರೂ, ಅದಕ್ಕೆ ಅಮೃತ ಮತ್ತು ವಿಷ ಇವುಗಳ ಅಲ್ಪ ಸಾದೃಶ್ಯವನ್ನು ಹೇಳಿ ಇದೆ. ಹಾಗಾದರೆ, ವಿಷಯೇಂದ್ರಿಯಗಳ ಸಂಯೋಗದಿಂದ ಹುಟ್ಟಿದ ಸುಖವು ರಾಜಸವಾದುದರಿಂದ ಅದು ನಿಂದ್ಯವೆಂದು ಹೇಳುವದಾದರೆ, ಗೃಹಸ್ಥಾಶ್ರಮಸ್ವೀಕಾರವೇ ಇಲ್ಲದಂತಾಗು ವದು, ಮೇಲಾಗಿ (೨–೬೪) ನೆಯ ಶ್ಲೋಕದಲ್ಲಿ ಉಕ್ತವಾದಂತೆ, ಅದರಿಂದ ಮನಸಿನ ಪ್ರಸಾದಕ್ಕೆ ಕಾರಣವಾಗುವ ಮತ್ತು ನಿಷಿದ್ಧವಲ್ಲದ ವಿಷಯದಿಂದಾಗುವ ಸುಖಾನುಭವವು ಅವಶ್ಯವೆಂದು ಹೇಳಿ ದ್ದಕ್ಕೆ ವಿರೋಧ ಬರಲಿಲ್ಲೇ? ಎಂದು ಕೇಳಿದರೆ, ವಿಷಕ್ಕೆ ಸದೃಶವೆಂದು ಹೇಳಿದ್ದರಿಂದ ವಿಷದಂತೆ ಅನರ್ಥಗೊಳಿಸುವ ವಿಷಯಸುಖವಷ್ಟೇ ನಿಂದ್ಯವೇ ಹೊರತು ಸಾಮಾನ್ಯ ವಿಷಯಸುಖವಲ್ಲ. ಹಾಗಾ ದರೆ, ಹಿಂದೆ (೬–೧೬) ಈ ಶ್ಲೋಕದಲ್ಲಿ ಹೇಳಿದಂತೆ, ನಿದ್ರೆಗೂ, (೬–೧೭) ನೇ ಶ್ಲೋಕದಲ್ಲಿ ಹೇಳಿದಂತೆ ಆಲಸ್ಯಕ್ಕೂ, ಒಳಗಾಗಬಹುದೆಂದು ತೋರುವದು. ಇಲ್ಲಿ, ಅವುಗಳಿಂದ ಹುಟ್ಟಿದ ಸುಖವು ತಾಮಸ ವೆಂದು ಹೇಳಿದ್ದರಿಂದ ಅದು ನಿಂದ್ಯವಾಯಿತು; ಅಂದಬಳಿಕ, ನಿದ್ದೆ–ಆಲಸ್ಯಗಳಿಗೆ ಒಳಗಾಗಕೂಡದೆಂದು ಹೇಳಿದಂತಾಯಿತು, ಇವೆರಡಕ್ಕೂ ಪರಸ್ಪರ ವಿರೋಧಬರಲಿಲ್ಲವೇ? ಎಂದು ಪ್ರಶ್ನಮಾಡಿದರೆ, ನಿದ್ದೆ, ಆಲಸ್ಯಗಳಿಗೆ ಮೋಹಕವೆಂಬ ವಿಶೇಷಣವನ್ನು ಹೇಳಿದ್ದರಿಂದ ಅಂತಹ ನಿದ್ದೆ–ಆಲಸ್ಯಗಳು ನಿಂದ್ಯವೆಂಬ ಅಭಿಪ್ರಾಯವು ಉಂಟು; ಅದರಿಂದ ವಿರೋಧವಿಲ್ಲ. ಅದೇಮೇರೆಗೆ, ಹಿಂದೆ (೧೪–೮, ೧೮–೩೫) ಶ್ಲೋಕಗಳಲ್ಲಿ ಹೇಳಿದಂತೆ, ಅತಿನಿದ್ರೆ, ಅತಿಆಲಸ್ಯಗಳೇ ನಿಂದ್ಯವೆಂದು ತಿಳಿಯತಕ್ಕದ್ದು.

೪೦. ಸಕಲ ಜೀವರಾಶಿಗಳು ಸತ್ವಾದಿಗುಣಬದ್ಧವಾದುದರಿಂದ ಅವುಗಳಲ್ಲಿ ಮೂರು ವಿಧ ಗಳನ್ನು ಹೇಳಿದ್ದು:—

**न तदस्ति पृथिव्यां वा दिवि देवेषु वा पुनः ।**
**सत्त्वं प्रकृतिजैर्मुक्तं यदेभिः स्यात्त्रिभिर्गुणैः ॥ ४० ॥**

**ಅ०**— ಪ್ರಕೃತಿಯಿಂದ ಹುಟ್ಟಿದ ಸತ್ವಾದಿಗುಣಗಳಿಂದ ಜೀವರಾಶಿಯು ಬದ್ಧವಾಗಿದೆ; ಆದರೆ, ಅಂತಹ ಜೀವರಾಶಿಗಳು ಪೃಥ್ವಿ, ಸ್ವರ್ಗ, ದೇವ, ಈ ಲೋಕಗಳಲ್ಲಿ ಇರುವ ಜೀವರಾಶಿಗಳಿಗೆ ಇಂಥ ಕಟ್ಟು ತಪ್ಪಿಲ್ಲ. ಈ ಬಂಧನದಿಂದ ಮುಕ್ತರಾದವರು ಆ ಜೀವರಾಶಿಗಳಿಂದ ಭಿನ್ನರೆಂದು ಹೇಳಿದಂತಾ ಯಿತು. ಇಲ್ಲಿ ವಿವೇಕವೇನಂದರೆ, ಸಾತ್ವಿಕ–ರಾಜಸ–ತಾಮಸ ಭೇದಗಳಿಂದ ಜೀವರಾಶಿಗಳು ಮೂರು ವಿಧ. ಸಾತ್ವಿಕಾದಿಗಳಲ್ಲಿ ಕೂಡ ಪ್ರತಿಯೊಂದರಲ್ಲಿ ಮೂರು ವಿಧ. ಇದರ ವಿವರಣೆಯು ಹೇಗಂದರೆ, ಪಿತೃ, ಗಂಧರ್ವರೇ ಮೊದಲಾದವರು ಸಾತ್ವಿಕ ತಾಮಸರು; ಋಷಿಗಳು ಸಾತ್ವಿಕ–ರಾಜಸರು; ದೇವತೆ ಗಳು ಸಾತ್ವಿಕ–ಸಾತ್ವಿಕರು, ಸಾತ್ವಿಕ–ಸಾತ್ವಿಕರಲ್ಲಿ ಕೂಡ ಬೃಹಸ್ಪತಿ ಮುಂತಾದವರು ಸಾತ್ವಿಕ– ಸಾತ್ವಿಕ–ತಾಮಸರು; ಇಂದ್ರನು ಸಾತ್ವಿಕ–ಸಾತ್ವಿಕ–ರಾಜಸನು, ಚತುರ್ಮುಖನ ಮೊದಲ್ಗೊಂಡು

ರುದ್ರನವರೆಗಿದ್ದ ದೇವತೆಗಳು ಸಾತ್ವಿಕ–ಸಾತ್ವಿಕ–ಸಾತ್ವಿಕರು. ಅವರಲ್ಲಿ ಕೂಡ ರುದ್ರನು ಸಾತ್ವಿಕ–ಸಾತ್ವಿಕ–ಸಾತ್ವಿಕ–ತಾಮಸನು; ಸರಸ್ವತಿ–ಭಾರತೀ ದೇವಿಯರು ಸಾತ್ವಿಕ–ಸಾತ್ವಿಕ–ಸಾತ್ವಿಕ–ರಾಜಸರು; ಚತುರ್ಮುಖ–ಮುಖ್ಯಪ್ರಾಣರು ಸಾತ್ವಿಕ–ಸಾತ್ವಿಕ–ಸಾತ್ವಿಕ–ಸಾತ್ವಿಕರು. ಇನ್ನು, ಮಧ್ಯಮೋತ್ತಮರಾದವರಲ್ಲಿ ಕೂಡ ಪ್ರತಿಯೊಂದರಲ್ಲಿ ಮೂರು ವಿಧ. ಅವರಲ್ಲಿ ಬ್ರಾಹ್ಮಣ ಮೊದಲ್ಗೊಂಡು ಪುಲಕಸನವರೆಗಿದ್ದ ಭಾಗವತರು ರಾಜಸ–ಸಾತ್ವಿಕರು, ರಾಜಸ–ಸಾತ್ವಿಕರಲ್ಲಿ ಕೂಡ ಬ್ರಾಹ್ಮಣರು ರಾಜಸ–ಸಾತ್ವಿಕ–ಸಾತ್ವಿಕರು; ಆದರೆ, ಕ್ಷತ್ರಿಯರು ಅಲ್ಪ ರಜೋಗುಣವುಳ್ಳವರಾದ್ದರಿಂದ ರಾಜಸ–ರಾಜಸ–ಸಾತ್ವಿಕರು; ವೈಶ್ಯರಲ್ಲಿ ಸತ್ವರಜೋಗುಣಗಳು ಸಮಾನವಾಗಿದ್ದುದರಿಂದ ಅವರು ರಾಜಸ–ರಾಜಸ–ಸಾತ್ವಿಕರು, ಶೂದ್ರರಲ್ಲಿ ತಮೋಗುಣವು ಅಲ್ಪ, ರಜೋಗುಣವು ಹೆಚ್ಚಾಗಿಯೂ ಇರುವದರಿಂದ ಅವರು ತಾಮಸ–ರಾಜಸ–ಸಾತ್ವಿಕರು. ಇನ್ನು, ರಾಜಸ–ಸಾತ್ವಿಕ–ಸಾತ್ವಿಕ ಬ್ರಾಹ್ಮಣರಲ್ಲಿ ಕೂಡ ಶುದ್ಧ ಸತ್ವಸ್ವರೂಪವುಳ್ಳವರು ಪರಮಹಂಸರು; ಅವರು ಶಿಖಾ, ಯಜ್ಞೋಪವೀತ ಇಲ್ಲದವರು; ಆದರೂ, ಅವರು ಒಂದೇ ದಂಡಧಾರಿಗಳು. ಅಲ್ಪ ರಜೋಗುಣವುಳ್ಳ ಸತ್ವಸ್ವರೂಪದವರು ಹಂಸರು. ಅವರಿಗೆ ಯಜ್ಞೋಪವೀತ, ಒಂದು ದಂಡ, ಇಷ್ಟಿದ್ದು, ಶಿಖಾಹೀನರು. ಅವರಿಗಿಂತ ಹೆಚ್ಚು ರಜಸುಳ್ಳ ಸತ್ವಸ್ವರೂಪದವರು ಬಹೂದಕರು. ಇವರಿಗೆ ಶಿಖಾ, ಯಜ್ಞೋಪವೀತ, ತ್ರಿದಂಡಗಳಿದ್ದು, ಅವರ ಸಂಚಾರ ರಾತ್ರಿಯಲ್ಲಿಯೇ. ಅವರಿಗಿಂತ ಹೆಚ್ಚು ರಜಸುಳ್ಳ ಸತ್ವಸ್ವರೂಪದವರು ಕುಟೀಚರು. ಇವರು ಬಹೂದಕರಂತೆ ಇದ್ದು, ಸಾಯುವವರೆಗೆ ಮಗನು ಕೊಟ್ಟ ಅನ್ನವನ್ನು ಭಕ್ಷಿಸಿ ಉಪಜೀವಿಸುವರು. ತಾಮಸರಲ್ಲಿ ಕೂಡ ಸಾತ್ವಿಕಾದಿ ಭೇದದಿಂದ ಮೂರು ವಿಧಗಳುಂಟು, ಹೇಗಂದರೆ, ನರಾಧಮರು ಸಾತ್ವಿಕ–ತಾಮಸರು; ದೈತ್ಯರ ಸೇವಕರು ರಾಜಸ-ತಾಮಸರು; ಮಹಾದೈತ್ಯರು ತಾಮಸ–ತಾಮಸರು.

೪೧. ಬ್ರಾಹ್ಮಣಾದಿಕುಲಗಳ ಅಧಿಕಾರಿಗಳ ಗುಣಗಳಿಂದ ಮಾಡಲ್ಪಡುವ ಕರ್ಮಗಳು ಕೂಡ ಭಿನ್ನವೆಂಬಲ್ಲಿ ಹೇಳಿದ್ದು —

**ब्राह्मणक्षत्रियविशां शूद्राणां च परंतप ।**
**कर्माणि प्रविभक्तानि स्वभावप्रभवैर्गुणैः ॥ ४१ ॥**

**ಅಂ**— ಶತ್ರುಸಂಹಾರಕ ಅರ್ಜುನನೇ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಅಧಿಕಾರಿಗಳ ಸ್ವಭಾವಕ್ಕನುಸರಿಸಿದ ಸತ್ವಾದಿಗುಣಗಳಿಂದ ಮಾಡಲ್ಪಟ್ಟ ಕರ್ಮಗಳು ಭಿನ್ನಭಿನ್ನವಾಗಿವೆ ಎಂದು ನಾನು ಹೇಳುವದನ್ನು ಕೇಳು.

**ವಿಂ ಅಂ**— ಇಲ್ಲಿ ಕ್ಷತ್ರಿಯ ಮುಂತಾದ ಮೂರು ವಿಧದ ಕುಲಗಳಂತೆ ಬ್ರಾಹ್ಮಣಕುಲವಲ್ಲೆಂದು ತಿಳಿಸುವದಕ್ಕಾಗಿ ಶೂದ್ರರನ್ನು ಬೇರೆ ಹೇಳಲಾಗಿದೆ. ಈ ವಿಷಯಕ್ಕೆ ತೈಂ ಆರಣ್ಯಕದ (೩–೨–೧೫) ನೆಯ ಮಂತ್ರದಲ್ಲಿ ಹೇಳಿದ ಆಯಾ ಕುಲಗಳ ಉತ್ಪತ್ತಿಯ ಮೇಲಿಂದ ಕಂಡುಬರುವದು. ಇನ್ನು, ಶಾಸ್ತ್ರಗಳು ಕರ್ಮಗಳನ್ನು ವಿಧಿಸಿದಾಗ್ಯೂ, ಅವು ಗುಣಗಳಿಗನುಸರಿಸಿ ವಿಧಿಸುವದರಿಂದ ಕರ್ಮಗಳು ಭಿನ್ನವೆಂದು ಹೇಳಲಾಗಿವೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ದ್ವಿಜತ್ವಕ್ಕೆ ಸಮಾನರು, ಆದರೆ ವೇದಗಳಿಗೆ ಅಧಿಕಾರಿಗಳಾಗದ್ದರಿಂದ ಶೂದ್ರರು ಬೇರೆ ಎಂದು ಹೇಳಿರುವರು. ಬ್ರಾಹ್ಮಣರಲ್ಲಿ ಸತ್ವವು ಹೆಚ್ಚು; ಕ್ಷತ್ರಿಯರಲ್ಲಿ ಸತ್ವಸಹಿತ ರಜೋಗುಣವು ಹೆಚ್ಚು, ವೈಶ್ಯರಲ್ಲಿ ತಮೋಗುಣಸಹಿತ ರಜೋಗುಣ ಅಧಿಕ, ಶೂದ್ರರಲ್ಲಿ ರಜೋಗುಣಸಹಿತ ತಮೋಗುಣ ಅಧಿಕ; ಹೀಗೆಂದು ಸ್ಮೃತಿಗಳಲ್ಲಿ ಹೇಳಲ್ಪಟ್ಟಿದೆ.

೪೨. ಬ್ರಾಹ್ಮಣಾದಿ ನಾಲ್ಕು ವರ್ಣದವರು ಆಚರಿಸುವ ಕರ್ಮಗಳನ್ನು ಮುಂದಿನ ಮೂರು ಶ್ಲೋಕಗಳಿಂದ ಹೇಳಿದ್ದು:—

शमो दमस्तपः शौचं क्षांतिरार्जवमेव च ।
ज्ञानं विज्ञानमास्तिक्यं ब्रह्मकर्म स्वभावजम् ॥ ४२ ॥

ಅಂ—ಪರಮಾತ್ಮನಲ್ಲಿ, ಭಕ್ತಿ, ಇಂದ್ರಿಯನಿಗ್ರಹ, ಬ್ರಹ್ಮಚರ್ಯ, ಬಾಹ್ಯಾಂತರಂಗಶುದ್ಧಿ, ಸಿಟ್ಟುಬರದಿರೋಣ, ಶಾರೀರಿಕ-ವಾಚಿಕ-ಮಾನಸಿಕ ಕಾರ್ಯಗಳಲ್ಲಿ ಒಂದೇ ವಿಧವಾಗಿರೋಣ, ಸಾಮಾನ್ಯಜ್ಞಾನ, ವಿಶೇಷಜ್ಞಾನ, ಅಂದರೆ ಪರಾಪರ ತತ್ತ್ವಗಳ ಯಥಾರ್ಥಜ್ಞಾನ, ಧರ್ಮಾದಿಗಳಿಂದ ಪ್ರಯೋಜನವೆಂಬ ಭಾವನೆ, ಇವೆಲ್ಲ ಸ್ವಾಭಾವಿಕವಾಗಿ ಹುಟ್ಟಿದ ಬ್ರಾಹ್ಮಣಕರ್ಮಗಳೆಂದು ತಿಳಿಯಬೇಕು. ಬ್ರಹ್ಮಚರ್ಯ ಅಂದರೆ ಕೃಚ್ಛ್ರಚಾಂದ್ರಾಯಣಾದಿ ವ್ರತಗಳ ಅನುಷ್ಠಾನದಿಂದ ದೇಹಶೋಷಣವು. ಈ ಶಮಾದಿಗಳು ಅನ್ಯಕುಲಗಳಲ್ಲಿ ಸಂಭವಿಸಿದರೂ, ಅವು ಬ್ರಾಹ್ಮಣರಲ್ಲಿಯೇ ಹೆಚ್ಚಾಗಿಯೂ, ಬೆಲ್ಲದಂತೆ ಮಧುರವಾಗಿಯೂ, ಸ್ವಾಭಾವಿಕವಿರುವದರಿಂದ ಬ್ರಾಹ್ಮಣಕರ್ಮಗಳೆಂದು ಹೇಳಿ ಇದೆ. ಅನ್ಯರಲ್ಲಿ ಇಂತಹ ಕರ್ಮಗಳು ಪ್ರಯತ್ನಸಾಧ್ಯವಾಗಿವೆ.

೪೩.

शौर्यं तेजो धृतिर्दाक्ष्यं युद्धे चाप्यपलायनम् ।
दानमीश्वरभावश्च क्षात्रं कर्म स्वभावजम् ॥ ४३ ॥

ಅಂ—ಅಂಜದಿರೋಣ, ದೇಹದ ವಿಶೇಷಕಾಂತಿ ಅಥವಾ ಅನ್ಯರಿಗೆ ಸಹನವಾಗದ ಪ್ರಭಾವ, ಧೈರ್ಯ, ಪ್ರಾರಂಭಿಸಿದ ಕರ್ಮಜರಗಿಸುವ ಸಾಮರ್ಥ್ಯ, ದೈವಯೋಗದಿಂದ ಯುದ್ಧವು ಪ್ರಾಪ್ತವಾಗಲು ಭೀತಿಮೂಲಕ ಪರಾಙ್ಮುಖವಾಗದಿರೋಣ, ಆಕಳು, ಭೂಮಿ, ಎಳ್ಳು, ಬಂಗಾರ ಮುಂತಾದವುಗಳನ್ನು ಯೋಗ್ಯಪಾತ್ರದಲ್ಲಿ ಮಾಡಿದ ದಾನವು, ತನ್ನಿಂದ ಆಳಲ್ಪಡುವ ಪ್ರಜೆಗಳ ಯೋಗಕ್ಷೇಮವನ್ನು ನಡಿಸುವ ಅಥವಾ ಶಾಸನಸಾಮರ್ಥ್ಯ, ಇವೆಲ್ಲ ಕರ್ಮಗಳು ಸ್ವಾಭಾವಿಕವಾಗಿ ಕ್ಷತ್ರಿಯರ ಕರ್ಮಗಳು. ಈ ವಿಷಯಕ್ಕೆ ವ್ಯಾಸಸ್ಮೃತಿಯು ವಚನ ಪ್ರಮಾಣ. ಇಲ್ಲಿ ಅಪಿ ಶಬ್ದವು ಮೋಹಮೂಲಕ ಅನರ್ಥ, ಭೀತಿಯಿಂದ ಮರಣ ಸಂಭವಿಸಿದರೂ, ಯುದ್ಧಕ್ಕೆ ಪರಾಙ್ಮುಖರಾಗಕೂಡದೆಂಬ ಅರ್ಥವನ್ನು ಸೂಚಿಸುವದು. ಈ ವಿಷಯಕ್ಕೆ ಹಿಂದೆ ( ೨-೩೧,೨-೩೮,೩-೩೫ ) ನೆಯ ಶ್ಲೋಕಗಳಲ್ಲಿ ಹೇಳಿ ಇದೆ ಚಕ್ರವರ್ತಿಗಳಲ್ಲಿ ಶಮಾದಿಗುಣಗಳು ಬ್ರಾಹ್ಮಣರಿಗಿಂತ ಹೆಚ್ಚಾಗಿದ್ದರೂ, ಇಲ್ಲಿ ಅವರ ವಿವಕ್ಷೆ ಇರದೆ, ಅನ್ಯರ ವಿವಕ್ಷೆಯುಂಟೆಂದು ತಿಳಿಯಬೇಕು.

೪೪.

कृषिगोरक्ष्यवाणिज्यं वैश्यकर्म स्वभावजम् ।
परिचर्यात्मकं कर्म शूद्रस्यापि स्वभावजम् ॥ ४४ ॥

ಅಂ—ಒಕ್ಕಲತನ, ಗೋರಕ್ಷಣೆ, ವ್ಯಾಪಾರ, ಉಪಲಕ್ಷಣದಿಂದ 'ಕುಸೀದ' ಎಂದರೆ ಬಡ್ಡಿಯ ವ್ಯವಹಾರ, ಇವೆಲ್ಲ ವೈಶ್ಯರ ಸ್ವಾಭಾವಿಕ ಕರ್ಮಗಳಾಗಿವೆ. ಇಲ್ಲಿ ಕೂಡ ಶಮಾದಿಗಳು ಕ್ಷತ್ರಿಯರಿಗಿಂತ ಕಡಿಮೆಪ್ರಮಾಣದಲ್ಲಿರುವವು. ಬ್ರಾಹ್ಮಣಾದಿ ಮೂರು ಕುಲಗಳ ಸೇವೆಯು ಶೂದ್ರರ ಸ್ವಾಭಾವಿಕ ಕರ್ಮವಾಗಿದೆ. ಅವರಲ್ಲಿಯೂ ಶಮಾದಿಗುಣಗಳು ವೈಶ್ಯರಿಗಿಂತ ಕಡಿಮೆ ಎಂದೇ ತಿಳಿಯಬೇಕು.

ಶೂದ್ರರು ಅಭಿಮಾನ ಬಿಟ್ಟು ಮೇಲ್ಕಾಣಿಸಿದ ಮೂರು ಕುಲಗಳ ಸೇವೆ ಮಾಡತಕ್ಕದ್ದು. ಈ ಬಗ್ಗೆ ಹಿಂದೆ ( ೧೬-೩ ) ನೆಯ ಶ್ಲೋಕದಲ್ಲಿ ಹೇಳಿ ಇದೆ.

೪೫. ಬ್ರಾಹ್ಮಣಾದಿಗಳು ತಮತಮಗೆ ವಿಧಿಸಿದ ಕರ್ಮಮಾಡುವದರಿಂದ ಅವರಿಗೆ ಫಲವೇನೆಂಬಲ್ಲಿ ಹೇಳಿದ್ದು:—

**स्वे स्वे कर्मण्यभिरतः संसिद्धिं लभते नरः ।**
**स्वकर्मनिरतः सिद्धिं यथा विंदति तच्छृणु ॥ ४५ ॥**

**ಅಂ—**ಹಿಂದೆ ಹೇಳಿದ ಬ್ರಾಹ್ಮಣ ಮುಂತಾದ ವರ್ಣದವರು ತಮ್ಮತಮ್ಮ ವರ್ಣಗಳಿಗೆ ವಿಧಿಸಿದ ಕರ್ಮಗಳಲ್ಲಿ ತತ್ಪರರಾಗಿ ಅಂದರೆ, ತಾವು ಮಾಡಿದ ಕರ್ಮಗಳಿಂದ ಪರಮಾತ್ಮನ ಆರಾಧನೆ ಮಾಡುವರು. ಅದರಿಂದ ಅವರು ಜ್ಞಾನದ್ವಾರಾ ಮುಕ್ತಿ ಹೊಂದುವರು. ಅವರಿಗೆ ಮುಕ್ತಿಯು ಹೇಗೆ ದೊರೆಯುವದೆಂಬುದನ್ನು ಕುರಿತು ಕೇಳು ಇಲ್ಲಿ 'ಮನುಷ್ಯನೆಂದು' ಹೇಳಿದ್ದರಿಂದ ವರ್ಣಾಶ್ರಮಗಳಿಗೆ ಉಚಿತವಾದ ಕರ್ಮ ಮಾಡುವವನೇ ಮನುಷ್ಯನು, ಅನ್ಯರು ಪಶುಗಳೆಂಬ ಅರ್ಥವು ಸೂಚಿತವಾಗುವದು. ಅಥವಾ ವರ್ಣಾಶ್ರಮಗಳಿಗೆ ವಿಹಿತವಾಗಿ ಮಾಡಿದ ಕರ್ಮವೇ ಮೋಕ್ಷಫಲಕ್ಕೆ ಸಾಧನವು; ಹೊರತು ಬ್ರಾಹ್ಮಣಾದಿ ಕುಲಗಳಲ್ಲೆಂಬ ಅರ್ಥವು ಸೂಚಿತವಾಗುವದು, ಅಥವಾ ಕರ್ಮದಲ್ಲಿ ವರ್ಣಾಶ್ರಮಗಳ ಅಪೇಕ್ಷೆಯು ಮನುಷ್ಯರಿಗೆ ಉಂಟು, ಹೊರತು ದೇವತೆಗಳಿಗಲ್ಲ! ಏಕೆಂದರೆ, ಅವರಿಗೆ ವರ್ಣಾಶ್ರಮಗಳಿಲ್ಲ; ಆದರೆ, ಅವರಿಗೆ ಪರಮಾತ್ಮನ ಆರಾಧನವೆಂಬ ಕರ್ಮದಲ್ಲಿಯೇ ಅಧಿಕಾರ ಉಂಟು ಎಂಬೀ ಅರ್ಥವನ್ನು ಸೂಚಿಸುವದು. ಆದರಪೂರ್ವಕ ಕರ್ಮಮಾಡಲು ಫಲವಿಲ್ಲ; ಆದರವಿಲ್ಲದ ಕರ್ಮವು ನಿಷ್ಫಲವು. ಈ ಅರ್ಥವನ್ನು ಸೂಚಿಸಲು **नियतं कर्म कुर्वाण** ಎಂದು ಹೇಳದೆ **अभिरत** ಎಂದು ಹೇಳಿ ಇದೆ.

೪೬

**यतः प्रवृत्तिर्भूतानां येन सर्वमिदं ततम् ।**
**स्वकर्मणा तमभ्यर्च्य सिद्धिं विंदति मानवः ॥ ४६ ॥**

**ಅಂ—**ಯಾವ ಪರಮಾತ್ಮನಿಂದ ಪ್ರಾಣಿಗಳ ಸಕಲ ವ್ಯಾಪಾರಗಳು ಜರಗುವವೋ, ಯಾವನು ಈ ಸಕಲ ಚರಾಚರಾತ್ಮಕ ಪ್ರಪಂಚವನ್ನು ವ್ಯಾಪಿಸಿರುವನೋ, ಅಂತಹ ಪರಮಾತ್ಮನನ್ನು ಶಮಾದಿಗಳಿಂದ ಯುಕ್ತರಾಗಿ ತಾವು ಮಾಡುವ ಕರ್ಮಗಳಿಂದ ಆರಾಧಿಸಿದರೆ ಬ್ರಾಹ್ಮಣಾದಿಗಳು ಜ್ಞಾನದ್ವಾರಾ ಮೋಕ್ಷಹೊಂದುವರು.

**ವಿಂ ಅಂ**—ತನ್ನ ವರ್ಣಾಶ್ರಮಗಳಿಗೆ ವಿಹಿತವಾದ ಕರ್ಮಗಳಿಂದ (೫-೨೯,೯-೨೪) ಶ್ಲೋಕಗಳಲ್ಲಿ ಹೇಳಿದಂತೆ, ಆರಾಧನೆಗೆ ಯೋಗ್ಯನಾದ ಪರಮಾತ್ಮನನ್ನು ಭಕ್ತಿ, ಶ್ರದ್ಧೆಗಳಿಂದ ಆರಾಧಿಸಿದರೆ, ಪ್ರಾಣಿಯು ಅವನ ಅನುಗ್ರಹದಿಂದ ಅಂತಃಕರಣಶುದ್ಧಿಯನ್ನು ಸಂಪಾದಿಸಿ ಜ್ಞಾನಿಯಾಗಿ, ಮೋಕ್ಷವನ್ನು ಹೊಂದುವನು. ಇದರಿಂದ ಜಡಕರ್ಮವು ಮೋಕ್ಷಕೊಡಲಾರದು; ಆದರೆ, ಆರಾಧಿಸಿದ ಕರ್ಮಗಳಿಂದ ಸಂತುಷ್ಟನಾದ ಮತ್ತು ಆಯಾ ಕರ್ಮಗಳಿಗೆ ಅನುಸರಿಸಿ ಫಲಕೊಡಲು ಸಮರ್ಥನಾದ ಪರಮಾತ್ಮನು ಅಧಿಕಾರಿಯ ಬಗ್ಗೆ ಕನಿಕರಪಟ್ಟು ಫಲಕೊಡುವನು. ಎಲ್ಲವನ್ನು ವ್ಯಾಪಿಸಿದ ಮತ್ತು ಎಲ್ಲಕ್ಕೂ ಪ್ರವರ್ತಕನಾದ ಪರಮಾತ್ಮನು ನಾನೇ ಎಂಬಲ್ಲಿ ( ೭-೬,೯-೪,೯-೧೦,೧೦-೮,೧೦-೫, ೧೫-೧೫ ) ಈ ಮುಂತಾದ ಶ್ಲೋಕಗಳಲ್ಲಿ ವಿವರಣೆಯುಂಟು. ತಾನು ಮಾಡುವ ಕರ್ಮವು ಪರ

ಮಾತ್ಮನ ಆರಾಧನೆಗಾಗಿಯೇ ಉಂಟೆಂದು ತಿಳಿದು, ( ೪–೨೪ ) ನೆಯ ಶ್ಲೋಕದಲ್ಲಿ ಹೇಳಿದಂತೆ, ಮಾಡಿದ ಕರ್ಮದಿಂದ ಪರಮಾತ್ಮನ ಅನುಗ್ರಹದ್ವಾರಾ ಧಾನ್ಯವೂ, ಜ್ಞಾನವೂ, ಮೋಕ್ಷವೂ, ದೊರೆಯುವವು. ಈ ವಿಷಯಕ್ಕೆ ( ೨–೫೧,೩–೧೯,೮–೭,೯–೩೪ ) ಶ್ಲೋಕಗಳಲ್ಲಿ ವಿವರಣೆ ಇದೆ; ಆದುದರಿಂದ ( ೩–೨೧ ) ನೆಯ ಶ್ಲೋಕದಲ್ಲಿ ಹೇಳಿದಂತೆ, ಯಥಾರ್ಥಜ್ಞಾನದಿಂದ ಪರಮಾತ್ಮನ ಆರಾಧನೆಗಾಗಿ ಮಾಡಿದ ಕರ್ಮವು ಜ್ಞಾನದ್ವಾರಾ ಮೋಕ್ಷಕ್ಕೆ ಸಾಧನವಾಗುವದೆಂದು ತಿಳಿಯಬೇಕು.

೪೭. ತಮ್ಮ ವರ್ಣಾಶ್ರಮಾದಿಗಳಿಗೆ ವಿಧಿಸಿದ ಕರ್ಮಾಚರಣೆಯೇ ಅವಶ್ಯವೆಂದು ಹೇಳಿದ್ದು; ಅಥವಾ ಕೃಷ್ಣಾ, ಪರಮಾತ್ಮನು ಸಕಲ ಕರ್ಮಗಳಿಂದ ಆರಾಧಿಸಲ್ಪಡಲು ಯೋಗ್ಯನು. ಅದರಿಂದ ಅವನು ಸಂತುಷ್ಟನಾಗಿ ಫಲಕೊಡುವನೆಂದು ಹೇಳಿರುವಿ. ಇದರಿಂದ, ಪರಮಾತ್ಮನ ಆರಾಧನೆಗಾಗಿ ಕರ್ಮಮಾಡಲೇಬೇಕೆಂದು ಹೇಳಿದಂತಾಯಿತು. ನಾನೂ ಹಾಗೆ ಮಾಡುವೆನೇನೋ ಸರಿ. ಆದರೂ, ನನಗೆ ಯುದ್ಧವು ಅನಿಷ್ಟವೇ ಸರಿ. ಆದ್ದರಿಂದ ಭಕ್ತಿಶ್ರದ್ಧೆಗಳಿಂದ ಪರಮಾತ್ಮನನ್ನು ಅನ್ಯಕರ್ಮಗಳಿಂದ ಆರಾಧಿಸುವೆನು, ಹೊರ್ತು ಯುದ್ಧವು ಬೇಡ ಕಂಡಿಯಾ, ಎಂದು ಆಕ್ಷೇಪಿಸಿದ್ದಕ್ಕೆ ಪರಮಾತ್ಮನು ಉತ್ತರಕೊಟ್ಟಿದ್ದು:—

श्रेयान्स्वधर्मो विगुणः परधर्मात्स्वनुष्ठितात् ।
स्वभावनियतं कर्म कुर्वन्नाप्नोति किल्बिषम् ॥ ४७ ॥

**ಅಂ**—ತಮ್ಮತಮ್ಮ ವರ್ಣಾಶ್ರಮಗಳಿಗೆ ವಿಧಿಸಲ್ಪಟ್ಟ ಕರ್ಮಾಚರಣೆಯು ಅಂಗಹೀನವಾದರೂ ಸರಿಯಾಗಿ ಆಚರಿಸಿದ ಪರಧರ್ಮಕ್ಕಿಂತ ಹೆಚ್ಚಿನ ಪುರುಷಾರ್ಥಕ್ಕೆ ಸಾಧನವಾಗಿದೆ. ಅದರಿಂದ ಅಂಗಹೀನತೆಯಿಂದ ಹುಟ್ಟುವ ದೋಷವು ತಗಲುವದಿಲ್ಲ. ಆದುದರಿಂದ ಅಂಗಹೀನತೆಯ ಸಂದೇಹದಿಂದ ಸ್ವಂತ ಧರ್ಮವನ್ನು ಬಿಡತಕ್ಕದ್ದಲ್ಲ.

**ವಿಂ ಅಂ**—ವರ್ಣಾಶ್ರಮಗಳಿಗೆ ವಿಧಿಸಲ್ಪಟ್ಟ ಕರ್ಮಾಚರಣೆಯೇ ಶ್ರೇಷ್ಠವೆಂಬಲ್ಲಿ (೩–೩೫) ನೆಯ ಶ್ಲೋಕದಲ್ಲಿ ವಿವರಣೆಯುಂಟು. ಅರ್ಜುನಾ, ನೀನು ಕ್ಷತ್ರಿಯನಾದ್ದರಿಂದ ಯುದ್ಧಕರ್ಮವೇ ನಿನಗೆ ಲೇಸು. ಅದರಿಂದಲೇ ನಿನಗೆ ಶ್ರೇಯಸ್ಸು; ಈ ವಿಷಯಕ್ಕೆ ಹಿಂದೆ (೨–೩೧) ನೆಯ ಶ್ಲೋಕದಲ್ಲಿ ಹೇಳಲಾಗಿದೆ. ಮಾಡುವ ವಿಹಿತಕರ್ಮವು ಅವರ್ಜನೀಯ ಹಿಂಸಾದಿ ದೋಷಗಳಿಂದ ದೂಷಿತವಾಗಿದ್ದರೂ ಬಾಧಕವಾಗದು. ವಿಷಕ್ರಿಮಿಗಳಿಗೆ ವಿಷವು ಬಾಧಕವಾಗದಂತೆ ವಿಧಿಸಿದ ಕರ್ಮವು ದುಷ್ಟವಾದರೂ ಬಾಧಕವಲ್ಲ. ಯಜ್ಞದ ಅಂಗವಾದ ಪಶುಹಿಂಸೆಯು ಹೇಗೆ ದೋಷವಲ್ಲವೋ ಹಾಗೆ ಯುದ್ಧಾಖ್ಯಕರ್ಮವು ಹಿಂಸೆಯಿಂದ ದೂಷಿತವಾಗಿದ್ದರೂ ದೋಷವೆನಿಸದು. ವಿಧಿಯಿಂದ ಪ್ರಾಪ್ತವಾದುದರಲ್ಲಿ ದೋಷವೆಣಿಸಲಾಗದು. ಈ ಬಗ್ಗೆ ( ೩–೧–೨೭ ) ನೆಯ ಸೂತ್ರದಲ್ಲಿ ಹೇಳಿ ಇದೆ. ಪರಾಧೀನನಾದ ಸೇವಕನು ತನ್ನ ಸ್ವಾಮಿಯ ಆಜ್ಞೆಗನುಸರಿಸಿ ದಂಡಿಸುವದರಿಂದ ಕೆಟ್ಟ ಫಲಹೊಂದದೆ ಸ್ವಾಮಿಯ ಅನುಗ್ರಹದಿಂದ ಉತ್ಕರ್ಷವನ್ನೇ ಹೊಂದುವನೆಂಬುದು ಲೋಕದಲ್ಲಿ ಕಂಡ ಮಾತು. ಆದ್ದರಿಂದ, ಅರ್ಜುನಾ, ನಿನ್ನ ಧರ್ಮಕ್ಕೆ ಯುದ್ಧವು ವಿಧಿಸಲ್ಪಟ್ಟಿದ್ದು, ಹಿಂಸೆಮೂಲಕ ದುಷ್ಟವೆನಿಸಿದರೂ, ಅದನ್ನು ನೀನು ಆಚರಿಸಲೇಬೇಕು.

೪೮. ಎಲ್ಲ ಕರ್ಮಗಳಲ್ಲಿ ಯಾವುದಾದರೊಂದು ದೋಷವು ಇದ್ದೇ ಇರುವದು ತಪ್ಪಿದ್ದಲ್ಲ. ಆದ್ದರಿಂದ ವಿಹಿತಕರ್ಮವು ದೋಷವುಳ್ಳದ್ದಾದರೂ ಅದನ್ನು ಮಾಡಬೇಕೆಂಬುವಲ್ಲಿ ಹೇಳಿದ್ದು —

सहजं कर्म कौंतेय सदोषमपि न त्यजेत् ।
सर्वारंभा हि दोषेण धूमेनाग्निरिवावृताः ॥ ४८ ॥

**ಅಂ**—ಅಗ್ನಿಯು ಹೊಗೆಯಿಂದ ಮುಸುಕಲ್ಪಟ್ಟಂತೆ ಸಕಲಕರ್ಮಗಳು ದೋಷದಿಂದ ಮುಚ್ಚಲ್ಪಟ್ಟಿರುವವು. ಹಾಗೆಯೇ ವರ್ಣಾಶ್ರಮಗಳಿಗೆ ವಿಹಿತವಾದ ಕರ್ಮವು ಕೂಡ ದೂಷಿತವಾಗಿದ್ದರೂ ಅದನ್ನು ಬಿಡಲಾಗದು.

**೪೮ ಅಂ**—ಅರ್ಜುನಾ, ದೋಷವಿಲ್ಲದ ಕರ್ಮವನ್ನು ಭಗವದಾರಾಧನೆಗಾಗಿ ಮಾಡಬಹುದು, ಆದರೆ, ಹಿಂಸೆ ಮೊದಲಾದ ದೋಷಯುಕ್ತ ಯುದ್ಧದಂಥ ಕರ್ಮವನ್ನು ಬಿಡುವದೇ ಲೇಸೆಂದು ನೀನು ಹೇಳುವದು ಸರಿಯುಲ್ಲ ಕಂಡಿಯಾ ! ಏಕೆಂದರೆ ಸಕಲಕರ್ಮಗಳು ಹಿಂಸೆಯಾಗಲಿ, ಅನ್ಯ ಯಾವುದೇ ದೋಷದಿಂದಾಗಲಿ, ಹೊಗೆಯಿಂದ ಅಗ್ನಿಯು ಮುಸುಕಲ್ಪಟ್ಟಂತೆ ದೂಷಿತವಿರುವವೇ ಸೈ. ನಿರ್ದೋಷವಾದ ಸ್ವಂತ ಕರ್ಮವು ಅಥವಾ ಅನ್ಯರ ಕರ್ಮವು ಲೋಕದಲ್ಲಿದ್ದರೆ, ದುಷ್ಟ ಕರ್ಮವನ್ನು ಬಿಟ್ಟು ಅದನ್ನು ಕೈಕೊಳ್ಳಬಹುದು. ಹಾಗಾದರೆ, ಸ್ವಂತ ಮತ್ತು ಅನ್ಯ ಕರ್ಮಗಳೆರಡೂ ನಿರ್ದೋಷಿಯಾದ್ದರಿಂದ ಅನ್ಯರ ಕರ್ಮವನ್ನೇಕೆ ಮಾಡಬಾರದೆಂದು ಕೇಳಿದರೆ, ಅನ್ಯ ವರ್ಣಾಶ್ರಮಗಳಿಗೆ ವಿಧಿಸಿದ ಕರ್ಮವನ್ನು ಮಾಡುವಲ್ಲಿ ನಾಲ್ಕು ದೋಷಗಳುಂಟು; (೧) ಸ್ವಾಭಾವಿಕ ದೋಷ, (೨) ಸ್ವಧರ್ಮತ್ಯಾಗದಿಂದ ಬರುವ ದೋಷ, (೩) ವಿಹಿತವಾಗದ ಕರ್ಮಾಚರಣೆ, (೪) ಪರಮಾತ್ಮನ ಆಜ್ಞೆಯ ಉಲ್ಲಂಘನೆ. ಸ್ವಂತ ಕರ್ಮಗಳಲ್ಲಿ ಕೂಡ ಯಾವುದು ವಿಹಿತವೋ, ಅದನ್ನು ಮಾಡಲೇಬೇಕು. ಅಂತಹ ಕರ್ಮವು ‘ ಯುದ್ಧವೇ ನಿನಗೆ ಯೋಗ್ಯ’ ಎಂದು ಈ ವಿಷಯಕ್ಕೆ (೨—೩೧)ನೆಯ ಶ್ಲೋಕದಲ್ಲಿ ಹೇಳಲಾಗಿದೆ. ತನ್ನ ಮನೆಯು ಜೀರ್ಣವಾದುದ್ದನ್ನು ಕಂಡು, ಅನ್ಯರ ಜೀರ್ಣವಾದ ಮನೆಯನ್ನು ಸೇರುವದು ಯೋಗ್ಯವಲ್ಲೆಂಬುದು ತಿಳಿದುಬಂದ ಮಾತು ಎರಡೂ ಮನೆಗಳು ಸಮವಾದುದರಿಂದ ಸ್ವಂತ ಮನೆಯೇ ಶ್ರೇಷ್ಠವು. ಹಾಗಾದರೆ, ಎಲ್ಲ ಕರ್ಮಗಳು ದೂಷಿತವಾದುದರಿಂದ ಕರ್ಮಬಿಡುವದೇ ವಿಹಿತವಲ್ಲವೇ ? ಎಂದು ಕೇಳಿದರೆ, ಲೋಕದಲ್ಲಿ ಮಂಗಲಕಾರ್ಯಗಳಾದ ಲಗ್ನ ಮುಂತಾದವುಗಳಲ್ಲಿ ಮಾಡುವ ಹೋಮಾದಿ ಕರ್ಮಗಳಲ್ಲಿ ಹೊಗೆಯಿಂದ ಕಂಬನಿಗಳು ಉದುರುವವೆಂದು ಲೌಕಿಕ–ವೈದಿಕ ಕರ್ಮಗಳನಿರ್ವಾಹಕ್ಕಾಗಿ ವಿಧಿಸಿದ ಅಗ್ನಿಕಾರ್ಯಗಳನ್ನು ಬಿಡಬಹುದೇ ? ಇಲ್ಲ. ಅಂದರೆ, ಅವುಗಳಲ್ಲಿ ದೋಷವನ್ನೆಣಿಸದೆ, ಗುಣವನ್ನಷ್ಟೇ ಸ್ವೀಕರಿಸಿ, ಅವುಗಳನ್ನು ಮಾಡತಕ್ಕದ್ದೇ ಸರಿ. ಅದರಂತೆಯೇ, ಕರ್ಮವು ದುಷ್ಟವೆಂದು ಅದನ್ನು ತ್ಯಜಿಸಲು ಶಕ್ಯವಲ್ಲ. ಅದರಲ್ಲಿಯ ಗುಣವನ್ನು ಸ್ವೀಕರಿಸಿ, ಮಾಡತಕ್ಕದ್ದೇ ಸರಿ. ಮೇಲಾಗಿ, ‘ ಪ್ರಾಣಿಯು ಕರ್ಮಮಾಡದೆ ಇರಲಾರನು’ ಎಂದು ಹಿಂದೆ (೩—೫,೩—೮,೧೮—೧೧)ನೆಯ ಶ್ಲೋಕಗಳಲ್ಲಿ ಹೇಳಿ ಇದೆ. ಅರ್ಜುನಾ, ನೀನು ಕ್ಷತ್ರಿಯನು, ಆದ್ದರಿಂದ ವರ್ಣಾಶ್ರಮಕ್ಕೆ ಉಚಿತವಾದ ಯುದ್ಧಕರ್ಮವನ್ನು ನಿಃಶಂಕೆಯಿಂದ ಆಚರಿಸಲೇಬೇಕು. ನೀನು ಕುಂತಿಯ ಮಗನಲ್ಲವೇ ? ಅವಳು ಕೂಡ ಮಹನೀಯರು ಉಪದೇಶಿಸಿದ ಕರ್ಮದಲ್ಲಿ ಸಂದೇಹವಿಲ್ಲದೆ ಆಚರಿಸುವದು ಯೋಗ್ಯವೆಂದು ಭಾವಿಸಿ, ದುರ್ವಾಸಋಷಿಗಳು ಉಪದೇಶಿಸಿದ ಮಂತ್ರದಿಂದ ಇಂದ್ರನ ಆವ್ಹಾನೆಗೆ ಪ್ರವೃತ್ತಳಾದಳು. ಅವಳನ್ನು ಸ್ಮರಿಸಿ ನೀನು ಕೂಡ ಹಾಗೇ ಆಚರಿಸಬೇಕು ಕಂಡಿಯಾ !

೪೯—೫೦. ಹಿಂದೆ (೪೬)ನೆಯ ಶ್ಲೋಕದಲ್ಲಿ ‘ ಪರಮಾತ್ಮನಲ್ಲಿ ಭಕ್ತಿ, ಇಂದ್ರಿಯನಿಗ್ರಹ, ಮುಂತಾದವುಗಳಿಂದ ಅವನನ್ನು ಆರಾಧಿಸುವ ಮತ್ತು ಬ್ರಾಹ್ಮಣಾದಿ ಕುಲಗಳಲ್ಲಿ ಹುಟ್ಟಿದ ಅಧಿಕಾರಿಯು ಮೋಕ್ಷಹೊಂದುವನೆಂದು ’ ಹೇಳಿ ಇದೆ ಅದಕ್ಕೆ ಅವಶ್ಯವಾದ ಅನ್ಯ ಧರ್ಮಗಳನ್ನು ಹೇಳಿದ್ದು; ಅಥವಾ ಹಿಂದೆ (೪೫)ನೆಯ ಶ್ಲೋಕದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರಿಗೆ ವಿಹಿತ ಕರ್ಮಗಳನ್ನು ಹೇಳಿ, ಅಲ್ಲಿ ಬರುವ ಸಂದೇಹದ ನಿರಸನೆಗಾಗಿ ಕರ್ಮವು ದೋಷವುಳ್ಳದ್ದಾದರೂ, ಅದರಿಂದ ಅನಿಷ್ಟವು ಒದಗಿದರೂ, ಸ್ವಂತ ವರ್ಣಾಶ್ರಮಗಳಿಗೆ ವಿಹಿತವಾದ ಕರ್ಮಗಳನ್ನೇ ಆಚರಿಸಬೇಕೆಂದು ಹೇಳಿ ಇದೆ. ಮೇಲಾಗಿ, (೪೬)ನೆಯ ಶ್ಲೋಕದಲ್ಲಿ ಅಂತಹ ಕರ್ಮಗಳಿಂದಲೇ ಪರಮಾತ್ಮ

ನನ್ನು ಭಕ್ತಿ ಮತ್ತು ಇಂದ್ರಿಯನಿಗ್ರಹಪೂರ್ವಕ ಆರಾಧಿಸುವವನೇ ಮೋಕ್ಷಹೊಂದುವನೆಂದು ಹೇಳಲಾಗಿದೆ. ಅಂದಬಳಿಕ, ಯಾವ ವಿಧದಿಂದ ಕರ್ಮಮಾಡಿ ಜ್ಞಾನವನ್ನು ಸಂಪಾದಿಸಿ, ಮೋಕ್ಷಹೊಂದುವನೆಂಬ ಪ್ರಕಾರವನ್ನು ವಿಸ್ತರಿಸಬೇಕೆಂದು ಅರ್ಜುನನು ಪ್ರಾರ್ಥಿಸಿದ್ದಕ್ಕೆ ಉತ್ತರ ಕೊಟ್ಟದ್ದು:—

**असक्तबुद्धिः सर्वत्र जितात्मा विगतस्पृहः ।**
**नैष्कर्म्यसिद्धिं परमां संन्यासेनाधिगच्छति ॥ ४९ ॥**

**सिद्धिं प्राप्तो यथा ब्रह्म तथाप्नोति निबोध मे ।**
**समासेनैव कौंतेय निष्ठा ज्ञानस्य या परा ॥ ५० ॥**

**ಅಂ**—ಕುಂತಿಯ ಕಂದನೇ, ಶಬ್ದಾದಿ ವಿಷಯುಗಳಲ್ಲೆಲ್ಲ ಆಸಕ್ತಿ ಇಲ್ಲದವನಾಗಿಯೂ, ಮನಸ್ಸನ್ನು ವಶಪಡಿಸಿಕೊಂಡವನಾಗಿಯೂ, ಕೀಳ ವೈಷಯಿಕ ಸುಖದಲ್ಲಿ ದುರಾಸೆಯಿಲ್ಲದವನಾಗಿಯೂ, ಮೋಕ್ಷಫಲಕ್ಕೆ ಬೇಕಾದ ಜ್ಞಾನೋಪಾಯದ ಸಿದ್ಧಿಗಾಗಿ ಅಥವಾ ಪ್ರಾರಬ್ಧಕರ್ಮದ ಹೊರ್ತು ಅನ್ಯ ಅನಿಷ್ಟಕರ್ಮಗಳ ನಾಶಕ್ಕಾಗಿ, ಕಾಮ್ಯಕರ್ಮತ್ಯಾಗದಿಂದ ಎಲ್ಲ ಕರ್ಮಗಳನ್ನು ಪರಮಾತ್ಮನಿಗೆ ಅರ್ಪಿಸಿದರೆ, ಮೋಕ್ಷ ಹೊಂದುವಿ. ಇನ್ನು ಮೋಕ್ಷಕ್ಕಾಗಿ ಬೇಕಾದ ಉಪಾಯವು ಯಾವುದೆಂದರೆ, ಜ್ಞಾನದ ಉತ್ತಮವಾದ ಸ್ಥಿತಿಯು. ಅದನ್ನು ಸಂಪಾದಿಸಿ ಮತ್ತು ಆಚರಿಸಿ ಹೇಗೆ ಶ್ರೀ ಲಕ್ಷ್ಮೀದೇವಿಯನ್ನು ಹೊಂದಬಹುದೋ ಆ ಪ್ರಕಾರವನ್ನು ನನ್ನಿಂದ ಸಂಕ್ಷೇಪದಿಂದ ತಿಳಿದುಕೊಳ್ಳು.

**ವಿಂ ಅಂ**—ಮನಸ್ಸನ್ನು ವಶಮಾಡಿ, ನಶ್ವರವಾದ ಐಹಿಕ–ಪಾರತ್ರಿಕ ಸುಖಗಳ ಆಸೆ ತೊರೆದು ಸುಖಕ್ಕೆ ಸಾಧನಗಳಾದ ವಿಷಯಗಳಲ್ಲಿ ಆಸಕ್ತಿಯನ್ನು ಬಿಟ್ಟು, ಪರಮಾತ್ಮನಲ್ಲಿಯೇ ಆಸಕ್ತಿಯನ್ನಿಟ್ಟು, ಹಿಂದೆ (೯–೨೭,೨೮)ನೆಯ ಶ್ಲೋಕಗಳಲ್ಲಿ ಹೇಳಿದಂತೆ, ಕಾಮ್ಯಕರ್ಮಗಳನ್ನು ತ್ಯಜಿಸಿ, ಮಾಡಿದ ಸಕಲ ಕರ್ಮಗಳನ್ನೂ ಪರಮಾತ್ಮನಿಗೆ ಅರ್ಪಿಸಿದರೆ, ಮೋಕ್ಷಕ್ಕೆ ಬೇಕಾದ ಜ್ಞಾನರೂಪೋಪಾಯವನ್ನು ಸಂಪಾದಿಸುವದಲ್ಲದೆ, ಪ್ರಾರಬ್ಧಕರ್ಮದ ಹೊರ್ತು ಅನ್ಯ ಅನಿಷ್ಟಕರ್ಮಗಳ ನಾಶವೆಂಬ ಉಪಾಯಕ್ಕೂ ಯೋಗ್ಯನಾಗುವನು. ಆ ಉಪಾಯವು ಎಂತಹದೆಂದು ಕೇಳಿದರೆ. ಜ್ಞಾನದ ಉತ್ತಮವಾದ ಸ್ಥಿತಿಯು; ಅದು ಮೋಕ್ಷಕ್ಕೆ ಸಾಧನವಾಗಿದೆ. ಅದನ್ನು ಸಂಪಾದಿಸಿ ಆಚರಿಸಿದರೆ, ಶ್ರೀಲಕ್ಷ್ಮೀದೇವಿಯನ್ನು ಹೊಂದುವ ಪ್ರಕಾರವನ್ನು ಸಂಕ್ಷೇಪದಿಂದ ಹೇಳುವೆನು, ಕೇಳು. ‘ ನೀನು ಇದನ್ನು ಹೇಳು. ಇದನ್ನು ಹೇಳಲೇಬೇಕು ’ ಎಂದು ನನ್ನನ್ನು ತಡೆಯುವಿ, ಎಂದು ನಾನು ಕೋಪಿಸುವದಿಲ್ಲ; ಆದರೆ, ಹಿಂದೆ (೧೩–೮)ನೆಯ ಶ್ಲೋಕದಲ್ಲಿ ಹೇಳಿದಂತೆ, ಅಭಿಮಾನಾದಿ ದೋಷಗಳನ್ನು ತ್ಯಜಿಸಿ, ಜ್ಞಾನಕ್ಕೆ ಬೇಕಾದ ಸಕಲ ವಿಷಯಗಳನ್ನು ತಿಳಿದುಕೊಳ್ಳುವ ಲವಲವಿಕೆಯಿಂದ ಕೇಳುವಿ ಎಂತಲೇ ಸಂತೋಷಪಡುವೆನು. ನೀನು ನನ್ನ ಸೋದರತ್ತೆಯ ಮಗನಲ್ಲವೇ ? ಅಂದಬಳಿಕ, ನಿನ್ನಲ್ಲಿ ನನ್ನ ಕೋಪವೇಕೆ?

೫೧–೫೩. ಪರಮಾತ್ಮನ ಪ್ರಾಪ್ತಿಗೆ ಬೇಕಾದ ಉಪಾಯಗಳ ಕ್ರಮ ಹೇಳಿದ್ದು·—

**बुद्ध्या विशुद्धया युक्तो धृत्यात्मानं नियम्य च ।**
**शब्दादीन्विषयांस्त्यक्त्वा रागद्वेषौ व्युदस्य च ॥ ५१ ॥**

**विविक्तसेवी लघ्वाशी यतवाक्कायमानसः ।**
**ध्यानयोगपरो नित्यं वैराग्यं समुपाश्रितः ॥ ५२ ॥**

अहंकारं बलं दर्पं कामं क्रोधं परिग्रहम् ।
विमुच्य निर्ममः शांतो ब्रह्मभूयाय कल्पते ॥ ५३ ॥
ब्रह्मभूतः प्रसन्नात्मा न शोचति न कांक्षति ।
समः सर्वेषु भूतेषु मद्भक्तिं लभते पराम् ॥ ५४ ॥

भक्त्या मामभिजानाति
यावान्यश्चास्मि तत्त्वतः ।
ततो मां तत्त्वतो ज्ञात्वा
विशते तदनंतरम् ॥ ५५ ॥

**ಅಂ**—ವಿಷಯಗಳಲ್ಲಿ ಆಸಕ್ತಿ ಇಲ್ಲದ ಬುದ್ಧಿಯುಳ್ಳವನಾಗಬೇಕು. ಧೈರ್ಯದಿಂದ ಅಂದರೆ ಸ್ತಂಭನಶಕ್ತಿಯಿಂದ ಮನಸ್ಸನ್ನು ವಿಷಯಗಳಿಂದ ಸೆಳೆದು, ಶಬ್ದಾದಿ ವಿಷಯೋಪಭೋಗದ ಆಸೆ ನೀಗಿ, ರಾಗದ್ವೇಷಗಳನ್ನು ತ್ಯಜಿಸಬೇಕು. ಜನಸಮುದಾಯವಿಲ್ಲದ ಪ್ರದೇಶದಲ್ಲಿ ವಾಸಮಾಡಿ, ಮಿತ ಆಹಾರವನ್ನು ಸೇವಿಸಬೇಕು. ಶರೀರ, ವಾಕ್ಕು ಮತ್ತು ಮನಸುಗಳನ್ನು ನಿಗ್ರಹಿಸಬೇಕು; ಅಂದರೆ, ಸದ್ವಿಷಯಗಳಲ್ಲಿಯೇ ಮಿತಭಾಷಣಾದಿಗಳನ್ನು ಮಾಡಬೇಕು. ವೈರಾಗ್ಯವನ್ನಾಶ್ರಯಿಸಿ, ಯಾವಾಗಲೂ ಧ್ಯಾನಯೋಗದಲ್ಲಿ ತತ್ಪರನಾಗಬೇಕು. ತಾನು ಕರ್ತನೂ, ಸಮರ್ಥನೂ, ಎಂಬ ಅಭಿಮಾನವನ್ನೂ, ಭೀತಿಮೂಲಕ ಅದರ ಕಡೆಗೆ ಲಕ್ಷ್ಯವನ್ನೂ, ವಿಷಯಾಸಕ್ತಿಯನ್ನೂ, ಕೋಪವನ್ನೂ, ಹೆಂಡರು—ಮಕ್ಕಳು, ಮನೆ—ಮಾರು, ಮುಂತಾದವುಗಳ ಸಂಗವನ್ನೂ, ಬಿಟ್ಟು, ಮಾಡುವ ಕರ್ಮಗಳಲ್ಲಿ 'ತಾನು, ತನ್ನದು' ಎಂಬ ಬುದ್ಧಿಯನ್ನು ತ್ಯಜಿಸಿ, ಕಾರಣವಿದ್ದರೂ ಕೋಪಿಸದೆ, ಆಚರಿಸುವ ಅಧಿಕಾರಿಯು ಪರಮಾತ್ಮನಲ್ಲಿ ಯಾವಾಗಲೂ ಮನಸನ್ನು ದೃಢಪಡಿಸಲು ಸಮರ್ಥನಾಗುವನು. ಮನಸಿನ ದೃಢತೆಯಿಂದ ಶ್ರೀಲಕ್ಷ್ಮೀದೇವಿಯನ್ನು ಹೊಂದಿ, ತಾನಾಗಿ ವಿಷಯಗಳಲ್ಲಿ ಪ್ರವೃತ್ತಿ ಇಲ್ಲದವನಾಗಿ, ಯಾವ ವಿಷಯಕ್ಕೂ ಶೋಕಪಡನು; ಮತ್ತು ಬಯಸನು; ಇದಲ್ಲದೆ, ಸಕಲ ಪ್ರಾಣಿಗಳ ವಿಷಯಕ್ಕೆ ಅವರವರ ಯೋಗ್ಯತೆಗನುಸರಿಸಿ ಅವನು ಉತ್ತಮ ಭಕ್ತಿಯುಳ್ಳವನಾಗುವನು. ಬಳಿಕ, ನಾನು ದೇಶ—ಕಾಲಗಳಿಂದ ಎಷ್ಟು ವ್ಯಾಪಿಸಿರುವೆನೋ ಮತ್ತು ಎಷ್ಟು ನಾಮರೂಪಗಳಿಂದ ಯುಕ್ತನೋ, ಅಂತಹ ನನ್ನನ್ನು ಮೇಲೆ ಹೇಳಿದ ಪರಮಭಕ್ತಿಯಿಂದ ಅಧಿಕಾರಿಯು ತನ್ನ ಯೋಗ್ಯತೆಗನುಸರಿಸಿ ತಿಳಿಯುವನು. ಕಡೆಗೆ, ಭಕ್ತಿಯ ಬಲದಿಂದ ನನ್ನ ಯಥಾರ್ಥಜ್ಞಾನವಾದ ಬಳಿಕ ಅವನು ಮೋಕ್ಷಹೊಂದುವನು.

**ವಿಂ ಅಂ**—ನಿಷ್ಕಾಮಕರ್ಮಕ್ಕೆ ಮೋಕ್ಷಫಲವೆಂದು ಹೇಳಿಯಿದೆ. ಅದರಿಂದ, ಅಂತಹ ಕರ್ಮವು ಮೊದಲನೆಯ ಸಾಧನವೂ, ಮೋಕ್ಷವು ಕಡೆಯ ಫಲವೂ, ಎಂದು ಹೇಳಿದಂತಾಯಿತು. ಇದಕ್ಕೆ ದೃಷ್ಟಾಂತವೇನಂದರೆ, ಶ್ರೀವಾಯುರೂಪೀ ಮುಖ್ಯಪ್ರಾಣನು ಸೀತಾದೇವಿಯ ಶೋಧಕ್ಕಾಗಿ ಮಾಡಿದ ಸಾಹಸವೂ, ಮುಂದೆ ಅವನಿಗೆ ದೊರೆತ ಫಲವೂ, ಕಂಡಿವೆ. ಇನ್ನು ಲೌಕಿಕದೃಷ್ಟಾಂತವೇನಂದರೆ, ಮೊದಲು ಬಂಡಿಯನ್ನೇರುವ ಸಾಹಸವೂ, ಬಳಿಕ ಅದರಲ್ಲಿ ಉಚ್ಚಸ್ಥಾನದಲ್ಲಿ ಕುಳಿತ ಫಲವೂ, ಕಂಡಿವೆ. ಹೀಗೆ ನಿಷ್ಕಾಮ ಕರ್ಮವನ್ನಾಚರಿಸುವದೇ ಮೋಕ್ಷಫಲದ ಪ್ರಾಪ್ತಿಗೆ ಸಾಧನವು. ಆದ್ದರಿಂದ ಕರ್ಮಯೋಗವನ್ನಾಶ್ರಯಿಸುವದೇ ಲೇಸು. ಏಕೆಂದರೆ, ನಿಷ್ಕಾಮಕರ್ಮದಿಂದ ಅಂತಃಕರಣ ಶುದ್ಧವಾಗುವದು. ಸಾತ್ವಿಕ ಅಂತಃಕರಣದಿಂದ ಮನೋನಿಗ್ರಹವಾಗಿ, ಶಬ್ದಾದಿ ವಿಷಯಗಳನ್ನು ವಿವೇಕದಿಂದ ದೂರದಲ್ಲಿ ತ್ಯಜಿಸಬಹುದು; ಹೀಗೆ ರಾಗದ್ವೇಷಗಳನ್ನು ಬಿಟ್ಟರೆ ಜನಸಮುದಾಯ ಇರದ

ಏಕಾಂತಸ್ಥಾನದಲ್ಲಿ ವಾಸಮಾಡುವದು ಸುಲಭ, ಅಲ್ಲಿ ಮಿತ ಆಹಾರವನ್ನು ಸೇವಿಸುವ ಕ್ರಮವಿಟ್ಟರೆ, ಶರೀರ, ವಾಕ್ಕು ಮತ್ತು ಮನಸುಗಳನ್ನು ನಿಗ್ರಹಿಸಬಹುದು. ಅದರಿಂದ ಧ್ಯಾನಯೋಗದಲ್ಲಿ ಯಾವಾಗಲೂ ತತ್ಪರನಾಗುವನು; ಅಂದರೆ, ಹೃತ್ಕಮಲದಲ್ಲಿ ಅಂತರ್ಗತನಾದ ಪರಮಾತ್ಮನ ವಿಷಯಕ್ಕೆ ಮಾಡುವ ಧ್ಯಾನಯೋಗದಲ್ಲಿ ವಿಶೇಷ ಅಭಿರುಚಿಯು ಹುಟ್ಟಿದ್ದರಿಂದ ಅನ್ಯ ವಿಷಯೋಪಭೋಗದಲ್ಲಿ ಮನಸು ಹೋಗದು. ಅದರಿಂದ ವೈರಾಗ್ಯವು ಹುಟ್ಟಿ, ದೇಹಾದಿಗಳಲ್ಲಿ ಮಮತೆ ಎಂಬ ಅಭಿಮಾನವೂ, ಸತ್ಕುಲ, ವಿದ್ಯೆ ಮೊದಲಾದವುಗಳಲ್ಲಿ ಅಹಂಕಾರವೂ, ಭೀತಿಯಮೂಲಕ ಧರ್ಮೋಲ್ಲಂಘನೆಯೂ, ವಿಷಯಗಳಲ್ಲಿ ಆಸಕ್ತಿಯೂ, ಅದರಿಂದ ಹುಟ್ಟುವ ಕೋಪವೂ, ಅದಕ್ಕೆ ಕಾರಣಗಳಾದ ಹೆಂಡಿರು–ಮಕ್ಕಳು, ಮನೆ–ಮಾರು ಮೊದಲಾದವುಗಳಲ್ಲಿ ಪ್ರೀತಿಯೂ ಇವುಗಳೆಲ್ಲ ನಾಶವಾಗುವವು. ಹೀಗೆ 'ನಾನು, ನನ್ನದು' ಎಂಬ ಅಭಿಮಾನವು ಪೂರ್ಣವಾಗಿ ಅಳಿಯಲು, ಶಾಂತಮನಸುಳ್ಳವನಾಗಿ ಶ್ರೀಲಕ್ಷ್ಮೀದೇವಿಯನ್ನು ಹೊಂದುವನು. ಅಂತಃಕರಣವು ನಿರ್ಮಲವಾದರೆ, ದುರಾಸೆಗಳಿಗೆ ಕಾರಣ ಇಲ್ಲದಂತಾಗಿ, (೬–೯)ನೆಯ ಶ್ಲೋಕದಲ್ಲಿ ಹೇಳಿದಂತೆ, ಎಲ್ಲ ಪ್ರಾಣಿಗಳ ವಿಷಯಕ್ಕೆ ಶತ್ರುಮಿತ್ರಗಳೆಂಬ ಬುದ್ಧಿಯು ನಾಶವಾಗಿ, (೬–೩೨)ನೆಯ ಶ್ಲೋಕದಲ್ಲಿ ಹೇಳಿದಂತೆ, ಸುಖದುಃಖ ಸಮತ್ವದ ಬುದ್ಧಿಯು ಹುಟ್ಟುವದು. ಪರಮಾತ್ಮನಲ್ಲಿ ಮಾಡುವ ಭಕ್ತಿಯು ಎಂತಹದೆಂದರೆ, ಅವನು ಅತಿ ಮಹಿಮೆಯುಳ್ಳವನೆಂಬ ಜ್ಞಾನದಿಂದ ಅತಿದೃಢವಾದ ಸ್ನೇಹಪೂರ್ವಕ ಭಕ್ತಿಯು. ಇಂಥ ಭಕ್ತಿಯು ಶ್ರವಣ–ಮನನ–ನಿದಿಧ್ಯಾಸನಾದಿಗಳಿಂದ ಪಕ್ವವಾಗುವದು. ಹಿಂದೆ (೭–೧೬)ನೆಯ ಶ್ಲೋಕದಲ್ಲಿ ಹೇಳಿದ ನಾಲ್ಕು ವಿಧದ ಭಕ್ತಿಗಳಲ್ಲಿ ಜ್ಞಾನವೆಂಬುದು ಕಡೆಯ ಭಕ್ತಿಯು. ಅದರಿಂದ ಪರಮಾತ್ಮನ ವಿಷಯಕ್ಕೆ ಯಥಾರ್ಥ ಜ್ಞಾನವಾಗುವದು, ಅಂದರೆ, ಅಧಿಕಾರಿಗೆ ಅವನ ಯೋಗ್ಯತೆಗನುಸರಿಸಿ ದೇಶ–ಕಾಲ–ಗುಣಗಳಿಂದ ನನ್ನ ವ್ಯಾಪ್ತಿ–ಸ್ವರೂಪಗಳ ಜ್ಞಾನವಾಗುವದು, ಕಡೆಗೆ, ಅಪರೋಕ್ಷಜ್ಞಾನದಿಂದ ನನ್ನ ಪ್ರಾಪ್ತಿ ಎಂದರೆ ಮೋಕ್ಷಹೊಂದುವನು. ಈ ವಿಷಯವಾಗಿ ಹಿಂದೆ (೩–೧೭)ನೇ ಶ್ಲೋಕದಲ್ಲಿ ವಿಸ್ತಾರವಾಗಿ ಹೇಳಿ ಇದೆ; ಹಾಗಾದರೆ, ಜ್ಞಾನದಿಂದ ಅಜ್ಞಾನವು ನಾಶವಾಗಲು, ಕೂಡಲೇ ಮೋಕ್ಷವಾಗದೆ ದೇಹವು ಬಿದ್ದುಹೋಗುವವರೆಗೆ ದಾರೀನೋಡುವ ಕಾರಣವೇನೆಂದು ಕೇಳಿದರೆ, ಬಲಿಷ್ಠವಾದ ಪ್ರಾರಬ್ಧಕರ್ಮವು ಪ್ರತಿಬಂಧಕವಾದುದರಿಂದ ಅಲ್ಲಿಯವರೆಗೆ ಮೋಕ್ಷವಿಲ್ಲ. ಪ್ರಾರಬ್ಧಕರ್ಮವು ಭೋಗದಿಂದಲೇ ನಾಶವಾಗುವದರಿಂದ ಅದು ಒಂದೇ ಜನ್ಮದಲ್ಲಿ ನಾಶವಾದರೆ, ಅದೇ ಜನ್ಮದಲ್ಲಿ, ಅಥವಾ ಮುಂದೆ ನಾಶವಾದ ಜನ್ಮದಲ್ಲಿ ಮೋಕ್ಷವು ದೊರೆಯುವದು.

೫೬. ಅಂತರಂಗ ಸಾಧನಗಳನ್ನು ಮತ್ತೆ ಹೇಳಿ ವಿಷಯವನ್ನು ಮುಗಿಸಿದ್ದು; ಅಥವಾ ಹಿಂದೆ (೧೮–೪೬)ನೆಯ ಶ್ಲೋಕದಲ್ಲಿ 'ಸ್ವಂತ ಕರ್ಮಗಳಿಂದ ಪರಮಾತ್ಮನನ್ನು ಆರಾಧಿಸಬೇಕೆಂದು' ಹೇಳಿ ಇದೆ ಆ ವಿಷಯದಲ್ಲಿ ಕರ್ಮಮಾಡಬೇಕೆಂದು ವಿಶೇಷವಾಗಿ ಹೇಳಿ, ಅದಕ್ಕೆ ಫಲಹೇಳಿದ್ದು, ಅಥವಾ ಈ ಮೇರೆಗೆ, ಶ್ರೀಕೃಷ್ಣನು ಗೀತಾಶಾಸ್ತ್ರವನ್ನು ಪೂರ್ಣವಾಗಿ ಮುಗಿಸಿ, 'ಅವನ ಉಪದೇಶದಿಂದ ಕೊನೆಗೆ ಕರ್ಮಮಾಡಲೇಬೇಕೆಂದು ಸಿದ್ಧವಾಯಿತಲ್ಲ ! ಇನ್ನೇನು ನನ್ನ ಗತಿಯು ' ಎಂದು ಅರ್ಜುನನ ಮನಕೋರಿಕೆಯನ್ನು ಅರಿತು, ತಾನು ಅವನಿಗೆ ನಿಶ್ಚಯಪೂರ್ವಕ ಹೇಳಿ, ಅವನ ಮನಸಿನಲ್ಲಿ ಆ ವಿಷಯವನ್ನು ದೃಢಪಡಿಸಿದ್ದರೂ, ಮತ್ತೆ ಕರ್ಮಯೋಗವನ್ನು ಮುಂದಿನ ಎರಡುಮರೆ ಶ್ಲೋಕಗಳಿಂದ ಹೇಳಿದ್ದು :—

**सर्वकर्माण्यपि सदा कुर्वाणो मद्व्यपाश्रयः ।**
**मत्प्रसादादवाप्नोति शाश्वतं पदमव्ययम् ॥ ५६ ॥**

ಅಂ—ತಾನುಮಾಡಿದ ಸಕಲ ಕರ್ಮಗಳನ್ನು ನನಗೆ ಅರ್ಪಿಸುತ್ತ ಎಲ್ಲ ವಿಹಿತಕರ್ಮಗಳನ್ನು ಯಾವಾಗಲೂ ಮಾಡುವ ಅಧಿಕಾರಿಯು ನನ್ನ ಅನುಗ್ರಹದಿಂದ ನಾಶರಹಿತ, ವಿಕಾರವಿಲ್ಲದ ಮತ್ತು ಆದ್ಯಂತಗಳಿಲ್ಲದ ನನ್ನ ಸ್ಥಾನವನ್ನು ಹೊಂದುವನು. ಇಲ್ಲಿ ಅಪಿ ಶಬ್ದವು ಒಂದು ಕರ್ಮವನ್ನು ಕೂಡ ಪರಮಾತ್ಮನಿಗೆ ಅರ್ಪಿಸದೆ ಮಾಡಕೂಡದೆಂಬ ಅರ್ಥವನ್ನು ಸೂಚಿಸುವದು.

ವಿಂ ಅಂ—ಅರ್ಜುನಾ, ನೀನು ಆಲೋಚಿಸುವದೇಕೆ? ನಿನ್ನ ವರ್ಣಾಶ್ರಮಗಳಿಗೆ ವಿಹಿತವಾದ ಕರ್ಮಗಳನ್ನು ಮಾಡತಕ್ಕದ್ದೇ ಸರಿ. ಸ್ವರ್ಗ ಅಥವಾ ಅನ್ಯ ಫಲದಲ್ಲಿ ಆಸಕ್ತಿಯನ್ನಿಡದೆ, ಸಕಲ ವಿಹಿತಕರ್ಮಗಳನ್ನು ನನ್ನ ಆರಾಧನೆಗಾಗಿಯೇ ಯಾವಾಗಲೂ ಆಚರಿಸುವ ಅಧಿಕಾರಿಯು ನನ್ನ ಅನುಗ್ರಹದಿಂದ ನಿತ್ಯ, ವಿಕಾರವಿಲ್ಲದ ನನ್ನ ಸ್ಥಾನವನ್ನು ಹೊಂದುವನು. ಈ ವಿಷಯಕ್ಕೆ ಹಿಂದೆ (೨–೫೧,೩–೧೯,೧೮–೪೫) ನೆಯ ಶ್ಲೋಕಗಳಲ್ಲಿ ಹೇಳಿಯದೆ. ನನ್ನ ಆರಾಧನೆಗಾಗಿ ಕರ್ಮಮಾಡಿದರೂ, ಅದರಿಂದ ನನ್ನ ಅನುಗ್ರಹದ್ವಾರಾ ಮುಕ್ತಿ ಹೊಂದುವನು. ಈ ವಿಷಯವಾಗಿ ಹಿಂದೆ (೩–೩೧,೧೨–೧೧) ನೆಯ ಶ್ಲೋಕಗಳಲ್ಲಿ ವಿವರಿಸಲಾಗಿದೆ, ಇದರಿಂದ, ಮಾಡಿದ ಸಕಲ ವಿಹಿತ ಕರ್ಮಗಳನ್ನು ಪರಮಾತ್ಮನಿಗೇ ಅರ್ಪಿಸಬೇಕು, ಹೊರ್ತು ಅವುಗಳಲ್ಲಿ ಒಂದನ್ನೂ ಕೂಡ ಅನ್ಯರಿಗೆ ಅರ್ಪಿಸಕೂಡದೆಂದು ಹೇಳಿದಂತಾಯಿತು.

೫೭. ಇನ್ನು ಪರಮಾತ್ಮನಲ್ಲಿ ಆಶ್ರಯಹೊಂದಿ ಮಾಡಿದ ಸಕಲ ವಿಹಿತಕರ್ಮಗಳನ್ನು ಅವನಿಗೆ ಅರ್ಪಿಸಿದರೆ, ವಿಹಿತ ಕರ್ಮಮಾಡುವವನಿಗೆ ಮೋಕ್ಷಫಲ ಉಂಟೆಂದು ಹೇಳಿದರೆ, ತ್ರೈವಿದ್ಯರಿಗೂ ಅಂಥ ಫಲವು ದೊರೆಯಬೇಕಾಯಿತಲ್ಲ! ಏಕೆಂದರೆ, ಅವರು ಕೂಡ ವಿಹಿತಕರ್ಮವನ್ನಾಚರಿಸಿ ಅದನ್ನು ಪರಮಾತ್ಮನಿಗೆ ಅರ್ಪಿಸುವರಷ್ಟೇ, ಎಂದು ಸಂದೇಹಪಟ್ಟರೆ, ಅದಕ್ಕೆ ಸಮಾಧಾನಹೇಳಿದ್ದು :—

**चतसा सर्वकर्माणि मयि संन्यस्य मत्परः ।**
**बुद्धियोगमुपाश्रित्य मच्चित्तः संततं भव ॥ ५७ ॥**

ಅಂ—ಮಾಡಿದ ಎಲ್ಲ ಕರ್ಮಗಳನ್ನು ಅಂತಃಕರಣಪೂರ್ವಕವಾಗಿ ನನಗೆ ಅರ್ಪಿಸಿ, ನಾನೇ ಸರ್ವೋತ್ತಮನೆಂದು ತಿಳಿದು, ಬುದ್ಧಿಯೋಗ ಎಂದರೆ ಜ್ಞಾನರೂಪ ಉಪಾಯವನ್ನಾಶ್ರಯಿಸಿ, ನನ್ನಲ್ಲಿಯೇ ಮನಸನ್ನು ಯಾವಾಗಲೂ ದೃಢಪಡಿಸು. ಇದರಿಂದ. ತ್ರೈವಿದ್ಯರಲ್ಲಿ ಇಂಥ ಭಾವನೆ ಇಲ್ಲದ್ದರಿಂದ, ಅಂದರೆ ಅವರು ಅನ್ಯದೇವತೆಗಳ ಉದ್ದೇಶದಿಂದ ಕರ್ಮಮಾಡಿ, ಅದನ್ನು ಕಡೆಗೆ ನನಗೆ ಅರ್ಪಿಸುವದರಿಂದ ಅವರಿಗೆ ಮೋಕ್ಷಫಲವಿಲ್ಲೆಂಬಲ್ಲಿ ಸಂದೇಹ ಉಳಿಯಲಿಲ್ಲ.

ವಿಂ ಅಂ—ಮಾಡುವ ಎಲ್ಲ ವಿಹಿತಕರ್ಮಗಳನ್ನು ಪರಮಾತ್ಮನ ಆರಾಧನೆಗಾಗಿಯೇ ಮಾಡಿ, ಅವುಗಳನ್ನು ಅವನಿಗೆ ಅರ್ಪಿಸು. ಈ ಬಗ್ಗೆ ಹಿಂದೆ (೯–೨೮)ನೆಯ ಶ್ಲೋಕದಲ್ಲಿ ವರ್ಣಿಸಲಾಗಿದೆ. ಅದರಿಂದ ಅವನು ಸಂತುಷ್ಟನಾಗಿ ಅನುಗ್ರಹಮಾಡುವನು. ಹೀಗೆ ಜ್ಞಾನೋಪಾಯವನ್ನಾಶ್ರಯಿಸಿ ಕರ್ಮದಿಂದಾದ ಶುದ್ಧ ಅಂತಃಕರಣವನ್ನು ಅವನಲ್ಲಿ ದೃಢಪಡಿಸು; ಅಂದರೆ ಸಂಪ್ರಜ್ಞಾತ ಮತ್ತು ಅಸಂಪ್ರಜ್ಞಾತ ಸಮಾಧಿಯುಳ್ಳವನಾಗು.

೫೮. ಪರಮಾತ್ಮನಲ್ಲಿ ಮನಸು ದೃಢಪಡಿಸಿದವನಿಗೆ ಫಲಹೇಳಿದ್ದು :

**मच्चित्तः सर्वदुर्गाणि मत्प्रसादात्तरिष्यसि ।**
**अथ चेत्त्वमहंकारान्न श्रोष्यसि विनंक्ष्यसि ॥ ५८ ॥**

**ಅ೦**—ಅರ್ಜುನಾ, ಮೇಲೆ ಹೇಳಿದಂತೆ, ನನ್ನಲ್ಲಿ ಮನಸು ನೆಲಿಸಿ, ಸಂಸಾರದಲ್ಲಿ ಒದಗುವ ಸಂಕಟಗಳನ್ನು ನನ್ನ ಅನುಗ್ರಹದಿಂದ ನಾಶಗೊಳಿಸುವಿ. ಈ ವಿಷಯುಕ್ಕೆ ಹಿಂದೆ (೩–೫೩,೧೦–೧೦)ನೆಯ ಶ್ಲೋಕಗಳಲ್ಲಿ ಹೇಳಿ ಇದೆ.

ಈ ಮೇರೆಗೆ, ಎಲ್ಲರು ತಮ್ಮ ತಮ್ಮ ವರ್ಣಾಶ್ರಮಗಳಿಗೆ ವಿಧಿಸಿದ ಕರ್ಮಗಳನ್ನಾಚರಿಸಬೇಕೆಂದು ಇಷ್ಟು ವಿಸ್ತಾರದಿಂದ ನಿರೂಪಿಸಿ, ಹಾಗೆ ಮಾಡದಿದ್ದರೆ ಅದರಿಂದಾಗುವ ಅನಿಷ್ಟವನ್ನು ಹೇಳಿದ್ದು; ಅಥವಾ “ಕೃಷ್ಣಾ, ನೀನು ಇಲ್ಲಿಯವರೆಗೆ ಕರ್ಮಯೋಗವನ್ನು ಉಪದೇಶಿಸಿರುವಿ; ಆದರೆ, ನಾನು ಅದನ್ನು ಬಯಸುವದಿಲ್ಲ. ಒಂದು ವೇಳೆ, ಕರ್ಮಯೋಗವನ್ನಾಚರಿಸಬಹುದು; ಆದರೆ ಯುದ್ಧಕರ್ಮವು ಬೇಡ; ಏಕೆಂದರೆ, ಅದು ಹಿಂಸಾರೂಪವಾದುದರಿಂದ, ಭೀಷ್ಮಾದಿಗಳ ಸಂಹಾರದಿಂದ ಒದಗುವ ಪಾಪದಿಂದ ನರಕಕ್ಕೆ ಸಾಧನವೇ ಸರಿ. ಹಾಗಾದರೆ, ವಿಹಿತ ಯುದ್ಧ ಕರ್ಮವನ್ನು ಮಾಡಲೇಬೇಕೆಂದು ಅನೇಕಸಾರೆ ಹೇಳಿದರೂ, ನೀನು ಹೇಳುವಂತೆ ಮಾಡಲು ನನಗೆ ಸಂದೇಹವೇಕೆಂದು” ಕೇಳಿದರೆ, ‘ಯುಕ್ತಿಗೆ ಸರಿಯಾದ ವಚನವನ್ನು ಸ್ವೀಕರಿಸಬೇಕೇ ಹೊರ್ತು ಗೌರವಕ್ಕಾಗಿ ಆಡಿದ ಮಾತನ್ನು ಸ್ವೀಕರಿಸತಕ್ಕದ್ದಲ್ಲ’ ಎಂಬ ನ್ಯಾಯುಕ್ಕನುಸರಿಸಿ ನಿನ್ನ ವಚನವು ಪ್ರಮಾಣಕ್ಕೆ ವಿರುದ್ಧವಾಗಿದೆ, ಎಂದು ಅರ್ಜುನನು ಆಕ್ಷೇಪಿಸಿದ್ದಕ್ಕೆ, ‘ಇಂತಹ ಕರ್ಮಮಾಡುವೆನು, ಅಥವಾ ಬಿಡುವೆನು, ಎಂದು ಹೇಳಲು ಪರಮಾತ್ಮನ ಹೊರ್ತು ಅನ್ಯರು ಸಮರ್ಥರಲ್ಲ; ಅವನು ಹೇಳಿದ್ದನ್ನು ಮಾಡಲೇಬೇಕೆಂಬ’ ಅಭಿಪ್ರಾಯದಿಂದ ಶ್ರೀಕೃಷ್ಣನು ನುಡಿದದ್ದು —

ಇಲ್ಲಿ **ಅಥ** ಶಬ್ದವು ಬೇರೆ ಅರ್ಥವನ್ನು ಹೇಳುವದು. ಅರ್ಜುನಾ, ನೀನು ಯುದ್ಧಮಾಡುವದಿಲ್ಲ ಎಂಬ ಅಹಂಕಾರದಿಂದ ಉಬ್ಬಿ, ಯುದ್ಧಮಾಡಬೇಕು, ಎಂಬ ನನ್ನ ವಚನವನ್ನು ಕೇಳಿ ಅದರಂತೆ ನಡೆಯದಿದ್ದರೆ, ನಿನಗೆ ಯಾವ ಪುರುಷಾರ್ಥಗಳೂ ಸಿಗಲಾರವು.

ಶಿ॰ ‘ನಾನು ಹೇಳಿದ್ದನ್ನು ಬಿಡಲು ನಿನಗೆ ಅಶಕ್ಯ’ ಎಂದು ಶ್ರೀಕೃಷ್ಣನು ಹೇಳಿದ್ದು; ಅಥವಾ ಕೃಷ್ಣಾ, ನೀನು ಹೇಳಿದ್ದನ್ನು ಕೇಳದಿದ್ದರೆ, ‘ನೀನು ಹಾಳಾಗಿ ಹೋಗು’ ಎಂದು ಶಾಪಕೊಡಲು ಸಮರ್ಥನು, ಹೊರ್ತು ನನಗೆ ಅನಿಷ್ಟವಾಗಲೆಂದು ಬಯಸುವದಿಲ್ಲ. ನೀನು ನನ್ನಿಂದ ಯುದ್ಧಕರ್ಮ ಮಾಡಿಸಲು ಸಮರ್ಥನು, ನಿನ್ನ ಸಾಮರ್ಥ್ಯ ಇಷ್ಟೇ ಅಲ್ಲವೇ? ಎಂದು ಅರ್ಜುನನು ನುಡಿದ ಮಾತಿಗೆ **ಉತ್ತರ:—**

**यदहंकारमाश्रित्य न योत्स्य इति मन्यसे ।**
**मिथ्यैष व्यवसायस्ते प्रकृतिस्त्वां नियोक्ष्यति ॥ ५९ ॥**

**ಅ೦**—ಅರ್ಜುನಾ, ನೀನು ಅಹಂಕಾರವನ್ನಾಶ್ರಯಿಸಿ ಯುದ್ಧಮಾಡುವದಿಲ್ಲೆಂಬ ನಿಶ್ಚಯದಿಂದ ನೀನು ಮಾಡುವ ಉದ್ಯೋಗವು ವ್ಯರ್ಥವಷ್ಟೆ! ಏಕೆಂದರೆ, ಪರಮಾತ್ಮನ ಇಚ್ಛೆಯೇ ನಿನ್ನನ್ನು ಅದಕ್ಕಾಗಿ ಪ್ರೇರಿಸುವದು ಕಂಡಿಯಾ!

**ವಿ೦ ಅ೦**—ಅರ್ಜುನಾ, ‘ಮಾಡಲು, ಅಥವಾ ಬಿಡಲು ನಾನೇ ಸಮರ್ಥನು, ಹೊರ್ತು ಮಾಡು ಅಥವಾ ಬಿಡು ಎಂದು ನನಗೆ ಹೇಳುವ ಅನ್ಯಸ್ವಾಮಿ ಇಲ್ಲ’ ಎಂದು ನಿನ್ನ ಕರ್ತೃತ್ವದ ಅಭಿಮಾನದಿಂದ ಅಹಂಕಾರವನ್ನಾಶ್ರಯಿಸಿ, ಯುದ್ಧಮಾಡುವದಿಲ್ಲೆಂದು ನಿಶ್ಚಯಿಸಿ, ಅದರಂತೆಯೇ ನುಡಿಯುವಿ. ಈ ಮಾತನ್ನೇ ನೀನು ಹಿಂದೆ (೨–೯)ನೆಯ ಶ್ಲೋಕದಲ್ಲಿ ಹೇಳಿರುವಿ; ಆದರೆ, ಯುದ್ಧಮಾಡುವದಿಲ್ಲ ಎಂಬ ನಿಶ್ಚಯವೂ, ‘ಅದರಂತೆ ನಡೆಯುವ ಮಾತೂ, ಹೀಗೆ ಎರಡನ್ನು ಕುರಿತು ನೀನು

ಮಾಡುವ ಉದ್ಯೋಗವೂ, ವ್ಯರ್ಥವೇ ಸರಿ. ಏಕೆಂದರೆ, ಪ್ರಕೃತಿ ಎಂದರೆ ಕ್ಷತ್ರಿಯ ಸ್ವಭಾವವೂ, ಆ ಜಾತಿಯನ್ನು ಹುಟ್ಟಿಸಲು ರಜೋಗುಣದ ಪರಿಣಾಮಿ ಕಾರಣವಾದ ಪ್ರಕೃತಿಯೂ, ಅಥವಾ ಪರ ಮಾತ್ಮನ ಇಚ್ಛೆಯೂ, ನೀನು ಯುದ್ಧ ಬಯಸದಿದ್ದರೂ, ನಿನ್ನನ್ನು ಆ ಕರ್ಮದಲ್ಲಿ ಪ್ರೇರಿಸುವವಷ್ಟೇ! ಮುಂದೆ ಆ ಪ್ರೇರಣೆಯಿಂದ ನೀನು ಯುದ್ಧಕರ್ಮ ಮಾಡಲೇಬೇಕಾಗುವದು. ಪ್ರಾಣಿಯು ಬಯಸ ದಿದ್ದರೂ, ಮಾಡುವ ಕರ್ಮವು ಅನಿಷ್ಟವಾದ್ದರಿಂದ ಅಯೋಗ್ಯವಾಗಿದ್ದರೂ, ಪಿಶಾಚಪ್ರೇರಿತನಾಗಿ ಅದನ್ನು ಮಾಡುವಂತೆ ಪರಮಾತ್ಮನ ಪ್ರೇರಣೆಯಿಂದ ಯುದ್ಧಕರ್ಮವು ನಿನಗೆ ಬಿಟ್ಟದ್ದಲ್ಲ. ನೀನು ಅದನ್ನು ಮಾಡಿ ತೀರಲೇಬೇಕು.

೬೦. ಪರಮಾತ್ಮನ ಇಚ್ಛೆಯೇ ಜೀವದ ಪ್ರೇರಣೆಗೆ ಕಾರಣ ಎಂಬ ಅಭಿಪ್ರಾಯದಿಂದ ಹಿಂದಿನ ಶ್ಲೋಕದಲ್ಲಿ ಹೇಳಿದ್ದರ ವಿಸ್ತಾರ; ಅಥವಾ 'ಕೃಷ್ಣಾ, ಬಯಸದ ನನ್ನಿಂದ ಕರ್ಮಮಾಡಿಸಲು ನಿನ್ನ ಇಚ್ಛೆಯು ಹೇಗೆ ಸಮರ್ಥವಾಗುವದು ? ನಾನಂತೂ ಯುದ್ಧವನ್ನು ಬಯಸುವದಿಲ್ಲ; ಅಂದಬಳಿಕ ನೀನೇನು ಮಾಡುವಿ?' ಎಂದು ಅರ್ಜುನನು ಕೇಳಿದ್ದಕ್ಕೆ ಉತ್ತರಕೊಟ್ಟದ್ದು :—

स्वभावजेन कौंतेय निबद्धः स्वेन कर्मणा ।
कर्तुं नेच्छसि यन्मोहात्करिष्यस्यवशोऽपि तत् ॥ ६० ॥

**ಅಂ**—ಕುಂತಿಕುಮಾರನೇ, ಸಂಸ್ಕಾರದಿಂದ ಹುಟ್ಟಿದ ಸ್ವಂತ ಕರ್ಮದಿಂದಲೇ ನೀನು ಬದ್ಧ ನಾಗಿರುವಿ. ಭ್ರಾಂತಿಯಿಂದ ಬಾಂಧವರಲ್ಲಿ ಆಸಕ್ತಿಯನ್ನಿಟ್ಟು ನೀನು ಬಯಸದೆ ಇದ್ದ ಯುದ್ಧ ಕರ್ಮವು ನಿನಗೆ ಅಧೀನವಾಗಿರದಿದ್ದರೂ, ನೀನು ಪರಮಾತ್ಮನ ಇಚ್ಛೆಗನುಸರಿಸಿ, ಆತನ ಪ್ರೇರಣೆ ಯಿಂದಲೇ ಮಾಡಬೇಕಾಗುವದು ತಿಳಿಯಿತೇನಪ್ಪ !

**ವಿಂ ಅಂ**—ಪ್ರಕೃತಿಯು ಪ್ರಾಣಿಯಿಂದ ಕರ್ಮಮಾಡಿಸಲು ಈಗ ಮುಂದರಿವುದು, ಅದರೆ, ಜೀವರಾಶಿಗಳು ಸೃಷ್ಟಿಗೆ ಬರುವ ಮೊದಲು ಯಾವ ಯಾವ ಕರ್ಮಮಾಡಬೇಕೋ, ಅವುಗಳಿಗೆ ಯೋಗ್ಯವಾದ ಬ್ರಾಹ್ಮಣಾದಿ ಜಾತಿಗಳನ್ನು ನಿರ್ಮಿಸಿ, ಅವುಗಳನ್ನು ಆಯಾಕರ್ಮಗಳಿಂದ ಬಂಧಿಸು ವದು; ಹೀಗೆ ಹಿಂದಿನ ಸಂಸ್ಕಾರ ಅಥವಾ ಕ್ಷತ್ರಿಯ ಸ್ವಭಾವ ಅಥವಾ ಕರ್ಮಮೂಲಕ ಅಂದರೆ, ಹಿಂದೆ (೧೮–೪೩)ನೆಯ ಶ್ಲೋಕದಲ್ಲಿ ಹೇಳಿದ ಕ್ಷತ್ರಿಯ ಸ್ವಭಾವದ ಕರ್ಮದಿಂದ ಬದ್ಧನಾದುದರಿಂದ ನೀನು ಅದನ್ನು ಮಾಡುವಿ. ಆ ಕರ್ಮವು ಎಂತಹದೆಂದು ಕೇಳಿದರೆ, ಭ್ರಾಂತಿಯಿಂದ ಅನಿಷ್ಟವೆಂದೂ, ಅಯೋಗ್ಯವೆಂದೂ, ತಿಳಿಯುವ ಆ ಯುದ್ಧವೆಂಬ ಕರ್ಮವೇ! ಹಾಗಾದರೆ 'ನಾನು ಯುದ್ಧ ಬಯಸುವ ದಿಲ್ಲೆಂದು ಹೇಳಿರುವೆನಲ್ಲ' ಎಂದು ಆಕ್ಷೇಪಿಸಿದರೆ, ಹಾಗೆ ಹೇಳುವವ ನೀನಾರು ? ನೀನೂ, ನೀನು ಮಾಡುವ ಕರ್ಮವೂ, ಪರಮಾತ್ಮನಿಗೆ ಅಧೀನವಲ್ಲವೇ ? ಆ ಕರ್ಮವು ಅಯೋಗ್ಯವಾದರೂ, ಅವನು ಪಿಶಾಚದಂತೆ ನಿನ್ನನ್ನು ಪ್ರೇರಿಸಿ, ಅದನ್ನು ನಿನ್ನಿಂದ ಮಾಡಿಸುವನು. 'ನೀನು ಈಗ ಬಯಸುವದಿಲ್ಲ' 'ನೀನು ಮುಂದೆ ಮಾಡುವಿ' ಎಂದು ವರ್ತಮಾನ ಮತ್ತು ಭವಿಷ್ಯತ್ಕಾಲಗಳ ಪ್ರಯೋಗಮಾಡಿದ್ದ ರಿಂದ, ಈಗ ಪ್ರಸಂಗ ಒದಗಿರಲು, ಯುದ್ಧಕರ್ಮ ಬಿಟ್ಟು ಮುಂದೆ ಬರುವ ಕಾಲದಲ್ಲಿ ಒದಗುವ ಶತ್ರುಗಳಿಂದ ಸಂಭವಿಸುವ ಪರಾಜಯದಿಂದ ಹುಟ್ಟುವ ನಾಚಿಕೆಯು, ನೀರೆಲ್ಲ ಹರಿದು ಹೋದ ಬಳಿಕ ಸೇತುಬಂಧನದ ಕಾರ್ಯದಂತೆ ಇರುವದೆಂದು ಸೂಚಿತವಾಗುವದು. ಈ ಬಗ್ಗೆ ನಾನು ಹಿಂದೆ (೨–೩೬) ನೆಯ ಶ್ಲೋಕದಲ್ಲಿ ಹೇಳಿರುವೆನು. ಕುಂತಿಯ ಪುತ್ರನೇ, ನೀನು ಕ್ಷತ್ರಿಯ ಕುಲದಲ್ಲಿ ಹುಟ್ಟಿಲ್ಲವೇ ? ಆದ್ದರಿಂದ ಯುದ್ಧಮಾಡುವದಿಲ್ಲೆಂದು ಇನ್ನುಮುಂದೆ ನುಡಿಯಬೇಡ ತಿಳಿಯಿತೇ ?

ಟಿ೧. ಇನ್ನು ಪರಮಾತ್ಮನ ಇಚ್ಛೆಯೇ ಪ್ರೇರಕ ಎಂದು ಹೇಳಿದರೆ, ಅವನು ಪ್ರೇರಕನಲ್ಲ ಎಂದು ಬರುವ ಸಂದೇಹವನ್ನು, ಅವನ ಸ್ವರೂಪವರ್ಣನೆಯಿಂದ ಪರಿಹರಿಸಿದ್ದು; ಅಥವಾ 'ಅಚೇತನ ವಾದ ಪ್ರಕೃತಿಯು ನನ್ನನ್ನು ಪ್ರೇರಿಸಲು ಹೇಗೆ ಸಮರ್ಥವು ? ಅದು ವಶವನ್ನಾಗಿ ಮಾಡಿ ಪ್ರೇರಿಸಲು ನನ್ನ ಹೊರ್ತು ಅನ್ಯ ಸ್ವತಂತ್ರನು ಯಾರು' ಎಂದು ಅರ್ಜುನನು ಕೇಳಿದ್ದಕ್ಕೆ ಉತ್ತರಕೊಟ್ಟದ್ದು·—

ईश्वरः सर्वभूतानां हृद्देशेऽर्जुन तिष्ठति ।
भ्रामयन्सर्वभूतानि यंत्रारूढानि मायया ॥ ६१ ॥

ಅಂ—ಅರ್ಜುನಾ, ಶರೀರದಲ್ಲಿ ವಾಸಮಾಡಿದ ಎಲ್ಲ ಜೀವಸಮುದಾಯವನ್ನು ಸ್ವರೂಪಭೂತ ಇಚ್ಛೆಗನುಸರಿಸಿ ಪ್ರೇರಿಸುತ್ತ ಪರಮಾತ್ಮನು ಅವುಗಳ ಹೃತ್ಕಮಲದಲ್ಲಿ ವಾಸಮಾಡಿರುವನು.

ವಿಂ ಅಂ—ಅರ್ಜುನಾ, ನಿನ್ನಿಂದ ಭಿನ್ನನೂ, ಸ್ವತಂತ್ರನೂ, ಪ್ರೇರಕನೂ, ಆದ ಪರಮಾತ್ಮನು ನಿನ್ನ ಅಷ್ಟೇ ಅಲ್ಲ, ಆದರೆ ಜೀವರಾಶಿಗಳ ಹೃತ್ಕಮಲದಲ್ಲಿ ವಾಸಮಾಡಿರುವನು. ಅವನು ಅಲ್ಲಿ ನಿಂತು ಮಾಡುವದೇನೆಂದು ಕೇಳಿದರೆ, ಎಲ್ಲ ಪ್ರಾಣಿಗಳು ಮಾಡುವ ಕರ್ಮಗಳಿಗನುಸರಿಸಿ ಸ್ವೇಚ್ಛೆಯಿಂದ ಅಥವಾ ತನಗೆ ಆಧೀನವಾದ ಪ್ರಕೃತಿಯಿಂದ ಅವರನ್ನು ವಿವಿಧ ಕರ್ಮಗಳಲ್ಲಿ ಪ್ರೇರಿಸುವನು. ಕಟ್ಟಿಗೆ ಯಿಂದ ನಿರ್ಮಿಸಲ್ಪಟ್ಟ ಆನೆ, ಕುದುರೆ, ಮೊದಲಾದ ಗೊಂಬೆಗಳನ್ನು ದಾರದಿಂದ ಕುಣಿಸುವ ಯಂತ್ರದ ಸ್ವಾಮಿಯಂತೆ ಪರಮಾತ್ಮನು ಸರ್ವ ಜೀವಸಮುದಾಯಕ್ಕೆ ಪ್ರೇರಕನಾಗಿರುವನು. ಈ ಬಗ್ಗೆ ಶ್ವೇತಾ ಶ್ವತರ (೬–೧೧), ಬೃಹಂ (೫–೨೨), ತೈಂ ಆಂ (೩–೧೧–೨), ನಾಂ ಶ್ರುಂ (೧೨–೩–೬), ಮುಂತಾದ ಶ್ರುತಿಯ ಮಂತ್ರಗಳು ಪ್ರಮಾಣ. ನೀನು ಶುದ್ಧ ಅಂತಃಕರಣದಿಂದ ಸತ್ಕರ್ಮಗಳನ್ನು ಮಾಡುವದ ರಿಂದ ಪರಮಾತ್ಮನನ್ನು ತಿಳಿಯಲು ಸಮರ್ಥನು. ಅವನೇ ತನಗೆ ಆಧೀನಳಾದ ಪ್ರಕೃತಿಯ ಮೂಲಕ ನಿನ್ನಿಂದ ಕರ್ಮಮಾಡಿಸುವನು. ಅವನು ಹೇಗೆ ಪ್ರೇರಿಸುವನೋ ಹಾಗೆ ನಡೆಯುವದು ತಪ್ಪಿದ್ದಲ್ಲ. ಅಂದಬಳಿಕ, 'ಮಾಡುವೆನು ಅಥವಾ ಬಿಡುವೆನು' ಎಂದು ನುಡಿಯಲು ನೀನು ಸಮರ್ಥನೇ ? ಅಲ್ಲ. ಆದ್ದರಿಂದ ಅವನು ನಿನ್ನಿಂದ ಯುದ್ಧಕರ್ಮ ಮಾಡಿಸುವದು ನಿಶ್ಚಯವೇ ಸೈ. ನೀನಾದರೂ ಅದನ್ನು ಮಾಡಿಯೇ ತೀರಬೇಕು.

ಟಿ೨. ನಿನ್ನಂತೆ ಪರಮಾತ್ಮನು ಹೊರಗೆ ನಿಂತು ಯುದ್ಧಮಾಡೆಂದು ನನಗೆ ನಿರ್ಬಂಧಿಸಿದರೆ, ನೀನು ಹೇಳಿದಂತೆ ಅವನ ಆಜ್ಞೆಯನ್ನು ಕೂಡ ಪಾಲಿಸಬಹುದು, ಆದರೆ, ಅವನು ದೇಹದಲ್ಲಿ ಅಂತರ್ಗ ತನಾಗಿ ಪ್ರೇರಿಸುವನೆಂದು ಹೇಳಿರುವಿ. ಅಂದಬಳಿಕ, ನಾನು ಮಾಡುವದೇನು ? ನನ್ನ ಗತಿ ಏನು ? ಅವನು ನ್ನನ್ನನ್ನು ವಿಹಿತಕರ್ಮಗಳಲ್ಲಿ ಪ್ರೇರಿಸುವಂತೆ ಮಾಡುವಲ್ಲಿ ಉಪಾಯವೇನು ? ಏಕೆಂದರೆ, ಅವನ ಆಜ್ಞೆಗನುಸರಿಸಿ ಮಾಡಿದ ಕರ್ಮವು ಅಂಗವಿಕಲವಾದರೂ, ಫಲದ್ರೂಪವಾಗುವದು ನಿಶ್ಚಯ, ಆದುದರಿಂದ ಈ ವಿಷಯದಲ್ಲಿ ಉಪಾಯ ಹೇಳೆಂದು ಅರ್ಜುನನು ನುಡಿಯಲಾಗಿ, ಶ್ರೀಕೃಷ್ಣನು ಉಪಾಯ ಹೇಳಿದ್ದು·—

तमेव शरणं गच्छ सर्वभावेन भारत ।
तत्प्रसादात्परां शांतिं स्थानं प्राप्स्यसि शाश्वतम् ॥ ६२ ॥

ಅಂ—ಭರತಕುಲ ಶ್ರೇಷ್ಠನೇ, ಪರಮಾತ್ಮನೊಬ್ಬನೇ ಸ್ವತಂತ್ರನು; ಮತ್ತು ಎಲ್ಲ ಜೀವ ಸಮೂಹವು ಅವನಿಗೆ ಆಧೀನವು. ಆದುದರಿಂದ ಅಹಂಕಾರವನ್ನು ಈಡಾಡಿ, ಅವನನ್ನೇ ಸರ್ವಪ್ರಕಾ ರದಿಂದ ಅಂದರೆ ದೇಹ, ವಾಣಿ, ಮನಸುಗಳಿಂದ ಮೊರೆಹೋಗು. ಅವನ ಅನುಗ್ರಹದಿಂದಲೇ ನಿನಗೆ

ಅವನಲ್ಲಿ ಅತಿಭಕ್ತಿಯೂ, ಮನಸಿನ ದೃಢತೆಯೂ, ಹುಟ್ಟಿ, ನೀನು ಅಕ್ಷಯಸ್ಥಾನವಾದ ವೈಕುಂಠ ಲೋಕವನ್ನು ಹೊಂದುವಿ.

**ವಿ. ಅ.**—ಪರಮಾತ್ಮನಲ್ಲಿ ಭಕ್ತಿ ಇಟ್ಟು, ಅವನು ಅಂತರ್ಗತನಾಗಿ ಪ್ರೇರಿಸಿದ ವಿಹಿತ ಕರ್ಮ ಮಾಡಿದರೆ, ಅದರಲ್ಲಿ ನ್ಯೂನತೆ ಇದ್ದರೂ, ಅದು ಫಲದಾಯಕವೇ ಆಗುವದು. ಹೀಗೆ ಪ್ರೇರಿಸುವ ಪರಮಾತ್ಮನು ಶ್ರೀಕೃಷ್ಣನೇ ಎಂಬುವಲ್ಲಿ (೩–೩೦, ೫–೧೦, ೧೨–೬, ೧೮–೪೬, ೧೮–೫೭) ಈ ಶ್ಲೋಕಗಳು ಪ್ರಮಾಣ; ಆದುದರಿಂದಲೇ ಇಲ್ಲಿ 'ನನಗೆ ಶರಣಾಗತನಾಗೆಂದು ಹೇಳದೆ, ಪರಮಾತ್ಮನಿಗೆ ಮೊರೆ ಹೋಗು' ಎಂದು ಹೇಳಿ ಇದೆ. ಈ ವಿಷಯವಾಗಿ 'ತನ್ನ ವಿಷಯಕ್ಕೆ ಪರೋಕ್ಷದಿಂದ ಹೇಳುವ ವಚನವು ನಿಶ್ಚಿತಾರ್ಥ' ಎಂದು ಸ್ಮೃತಿಯಲ್ಲಿ ಹೇಳಲಾಗಿದೆ. ಮೇಲಾಗಿ, ಶ್ರೀಕೃಷ್ಣನು ಯುದ್ಧದಿಂದ ಜಯ, ಲಾಭ, ಕೀರ್ತಿ, ಸುಖ, ಮೊದಲಾದ ಐಹಿಕ ಸುಖಗಳು ಪ್ರಾಪ್ತವಾಗುವವೆಂದು ತನ್ನ ವಿಶ್ವರೂಪದಲ್ಲಿ ತೋರಿಸಿರುವನು. 'ಶ್ರೀದೇವಿಯು ವೈಕುಂಠ ಸ್ವರೂಪದಿಂದ ಪರಮಾತ್ಮನಿಗೆ ವಾಸಸ್ಥಾನಳು' ಎಂಬ ಸ್ಮೃತಿವಚನಕ್ಕನುಸರಿಸಿ ವೈಕುಂಠಲೋಕವು ಶಾಶ್ವತವೆಂದು ತಿಳಿಯಬೇಕು.

೬೩. ಈ ಮೇರೆಗೆ, ಶ್ರೀಕೃಷ್ಣನು ಅರ್ಜುನನಿಗೆ ಗೀತಾಶಾಸ್ತ್ರವನ್ನು ಪೂರ್ಣವಾಗಿ ಉಪದೇಶಿಸಿ, ಕ್ಷತ್ರಿಯ ಕುಲಕ್ಕೆ ಯುದ್ಧವೇ ವಿಹಿತಕರ್ಮವಾಪುದರಿಂದ, 'ಅದನ್ನು ಮಾಡುವೆನು, ಅಥವಾ ಇಲ್ಲ, ಎಂದು ಯಾವುದನ್ನೂ ಹೇಳದೆ ಸುಮ್ಮನೆ ನಿಂತ ಅರ್ಜುನನ್ನು ಕಂಡು, "ಅರ್ಜುನಾ, ನೀನು ಭೀಷ್ಮಾದಿಗಳ ಸಂಗಡ ಯುದ್ಧ ಮಾಡಲೇಬೇಕೆಂದು ನಾನು ನಿರ್ಬಂಧಿಸಿದ್ದರಿಂದ ನನ್ನ ಉದ್ಧಾರಕ್ಕಾಗಿ ಯುದ್ಧ ಮಾಡು ಎಂದು ಹೇಳುವೆನೋ, ಅಥವಾ ಕ್ಷತ್ರಿಯರಿಗೆ ಯುದ್ಧವು ವಿಹಿತಕರ್ಮವಾದುದರಿಂದ, ನೀನು ಕೇವಲ ನಿಮಿತ್ತನು, ಆದರೆ ನಾನು ಭೂಭಾರವನ್ನು ಇಳಿಸುವದಕ್ಕಾಗಿ ಅವತಾರಧರಿಸಿ, ಸಕಲವನ್ನು ನಿನ್ನಿಂದ ಮಾಡಿಸುವೆನು ಎಂಬ ಭಾವನೆಯಿಂದ ಯುದ್ಧಮಾಡು ಎಂದು ಹೇಳುವೆನೋ ಎಂಬುದನ್ನು ಸ್ಪಷ್ಟವಾಗಿ ಹೇಳು. ನೀನು ಯುದ್ಧಮಾಡಿ ಸಂಪಾದಿಸಿದ ಸಂಪತ್ತಿನಲ್ಲಿ ನಾನು ಪಾಲು ಬೇಡುವೆನೇ ? ಹೊತ್ತು ಬಂದಾಗ ಆಪ್ತನು ಹೇಳುವಂತೆ ನಾನು ನಿನಗೆ ಹಿತದ ನಾಲ್ಕು ಮಾತುಗಳನ್ನು ಹೇಳಿರುವೆನು. ಇನ್ನು ನಿನ್ನ ಮೌನವು ಸಾಕು. ನಿನ್ನ ಮನಬಂದಂತೆ ವರ್ತಿಸು" ಎಂಬ ಅಭಿಪ್ರಾಯದಿಂದ ಶ್ರೀಕೃಷ್ಣನು ನುಡಿದದ್ದು —

**इति ते ज्ञानमाख्यातं गुह्याद्गुह्यतरं मया ।**
**विमृश्यैतदशेषेण यथेच्छसि तथा कुरु ॥ ६३ ॥**

**ಅ.**—ಅರ್ಜುನಾ, ಈ ಮೇರೆಗೆ, ಅತಿ ಗೌಪ್ಯವಾದ ಕರ್ಮಯೋಗ, ಧ್ಯಾನಯೋಗ, ಭಕ್ತಿಯೋಗ, ಜ್ಞಾನಯೋಗ, ಇವುಗಳಿಂದಲೂ, ಅವುಗಳ ಸಾಧನಗಳಿಂದಲೂ, ಯುಕ್ತವಾದ ಈ ಗೀತಾಶಾಸ್ತ್ರವನ್ನು ನಾನು ನಿನಗೆ ಪರಿಪರಿಯಿಂದ ಚನ್ನಾಗಿ ಉಪದೇಶಿಸಿರುವೆನು, ಆದನ್ನೆಲ್ಲ ನೀನು ಚನ್ನಾಗಿ ತೂಗಿ, ಅಳೆದು ನೋಡಿ ನಿನ್ನ ಮನಬಂದಂತೆ ವರ್ತಿಸು.

೬೪. ತತ್ವಗಳ ಸಾರವನ್ನು ಹೇಳಿ ತೀರಿಸಿ ಸಾಧನಗಳ ಸಾರದ ವರ್ಣನೆಯನ್ನು ಮುಗಿಸಿದ್ದು, ಅಥವಾ 'ಕೃಷ್ಣಾ, ನೀನು ಉಪದೇಶಿಸಿದ ಗೀತಾಶಾಸ್ತ್ರವು ಅತಿ ಗಂಭೀರವು; ಅದರ ಆಲೋಚನೆ ಮಾಡುವ ಪೂರ್ಣಸಾಮರ್ಥ್ಯವು ನನಗುಂಟೇ ? ಆದುದರಿಂದ ಅದರ ಸಾರವನ್ನಷ್ಟೇ ಹೇಳು' ಎಂದು ಅರ್ಜುನನು ಪ್ರಾರ್ಥಿಸಲು, ಅದಕ್ಕೆ ಹೇಳಿದ್ದು—

**सर्वगुह्यतमं भूयः शृणु मे परमं वचः ।**
**इष्टोऽसि मे दृढमिति ततो वक्ष्यामि ते हितम् ॥ ६४ ॥**

ಅಂ—ಸಕಲ ಸಾಧನಗಳಲ್ಲಿ ಗೌಪ್ಯವಾದ ಯಾವ ನನ್ನ ವಚನವೋ ಅದನ್ನೇ ಮತ್ತೆ ಕೇಳು. ನೀನು ನನಗೆ ಅತಿ ಪ್ರಿಯನೆಂದು ನನ್ನ ನಚ್ಚಿನ ನಂಬಿಗೆ; ಆದುದರಿಂದ ಈ ಗೀತಾಶಾಸ್ತ್ರವನ್ನು ಉಪಸಂಹಾರ ರೂಪದಿಂದ ನಾನು ನಿನ್ನ ಹಿತಕ್ಕಾಗಿ ಹೇಳುವೆ. ಸಾಧನಗಳ ಸಾರವನ್ನು ಹಿಂದೆ ೧೪ನೆಯ ಅಧ್ಯಾಯದಲ್ಲಿ ಹೇಳಿದ್ದರಿಂದ ಇಲ್ಲಿ 'ಮತ್ತೆ' ಎಂಬ ಶಬ್ದದ ಪ್ರಯೋಗ ಉಂಟು.

೬೫. ಗೌಪ್ಯವಚನವನ್ನು ಹೇಳಿದ್ದು:—

**मन्मना भव मद्भक्तो मद्याजी मां नमस्कुरु ।**
**मामेवैष्यसि सत्यं ते प्रतिजाने प्रियोऽसि मे ॥ ६५ ॥**

ಅಂ—ಅರ್ಜುನಾ, ಹಿಂದೆ ೯ನೆಯ ಅಧ್ಯಾಯದ ಕೊನೆಗೆ ಹೇಳಿದ ಮೇರೆಗೆ, ನನ್ನ ಆರಾಧನೆಗಾಗಿ ನಿನ್ನ ವರ್ಣಾಶ್ರಮಗಳಿಗೆ ವಿಹಿತವಾದ ಕರ್ಮಮಾಡಿ (ಇದರಿಂದ ಕರ್ಮಯೋಗವು), ಅದರಿಂದ ಶುದ್ಧಾಂತಃಕರಣವುಳ್ಳವನಾಗಿ, ಮನಸನ್ನು ನನ್ನಲ್ಲಿ ನಿಲ್ಲಿಸಿ (ಇದರಿಂದ ಧ್ಯಾನಯೋಗವು), ಶ್ರವಣ, ಮನನಾದಿಗಳಿಂದ ನನ್ನ ಮಹಿಮೆಯ ಯಥಾರ್ಥಜ್ಞಾನ ಪೂರ್ವಕ ಭಕ್ತಿಯುಳ್ಳವನಾಗಿ ( ಇದರಿಂದ ಭಕ್ತಿಯೋಗವು), ಕರ್ಮಾಚರಣೆಯಲ್ಲಿ ತಗಲಿದ ದೋಷಪರಿಹಾರಕ್ಕಾಗಿ ಪ್ರಾಯಶ್ಚಿತ್ತರೂಪ ನಮಸ್ಕಾರವನ್ನೂ (ಇದರಿಂದ ಜ್ಞಾನಯೋಗ) ನನಗೆ ಮಾಡು. ಈ ವಿಷಯಕ್ಕೆ ಭಾಗವತದ (೭–೫) ನೆಯ ಶ್ಲೋಕದಲ್ಲಿ ಒಂಭತ್ತು ವಿಧದ ಭಕ್ತಿಯಿಂದ ಪರಮಾತ್ಮನನ್ನು ಆರಾಧಿಸಬೇಕೆಂದು ಹೇಳಲ್ಪಟ್ಟಿದೆ. ಹೀಗೆ ಸಾಧನಗಳಲ್ಲಿ ಶ್ರೇಷ್ಠವಾದ ಈ ನಾಲ್ಕು ವಿಧದಿಂದ ನನ್ನನ್ನು ಆರಾಧಿಸುವವನು ಜ್ಞಾನದ್ವಾರಾ ನನ್ನನ್ನು ಹೊಂದುವನು ಎಂಬಲ್ಲಿ ಸಂದೇಹವಿಲ್ಲ. ನೀನು ನನಗೆ ಅತಿ ಪ್ರಿಯನಾದುದರಿಂದ ನೀನಾದರೂ ನನ್ನನ್ನು ಹಾಗೆ ಆರಾಧಿಸಿದರೆ, ನನ್ನನ್ನು ಹೊಂದುವಿ ಎಂದು ಸತ್ಯವಾಗಿ ಹೇಳುವೆನು. ಇಲ್ಲಿ **सत्यन्ते** ಎಂಬಲ್ಲಿ **सति** ಮತ್ತು **अन्ते** ಎಂದು ಪದಚ್ಛೇದ ಮಾಡಿ ನಿನ್ನ ಪ್ರಾರಬ್ಧ ಕರ್ಮವು ಮುಗಿದ ಬಳಿಕ ಮೋಕ್ಷ ಹೊಂದುವಿ, ಎಂದು ಅರ್ಥ ಹೇಳಬೇಕು.

೬೬. ಕೇವಲ ಪರಮಾತ್ಮನಲ್ಲಿ ಮನಸು ದೃಢಪಡಿಸುವದು ಹೇಗೆಂಬಲ್ಲಿ ಹೇಳಿದ್ದು:—

**सर्वधर्मान्परित्यज्य मामेकं शरणं व्रज ।**
**अहं त्वा सर्वपापेभ्यो मोक्षयिष्यामि मा शुचः ॥ ६६ ॥**

ಅಂ—ಅರ್ಜುನಾ, ಅನ್ಯ ಧರ್ಮಗಳನ್ನೆಲ್ಲ ತ್ಯಜಿಸಿ, ಹಿಂದಿನ ಶ್ಲೋಕದಲ್ಲಿ ಹೇಳಿದಂತೆ, ಪರಮಾತ್ಮನಲ್ಲಿ ಮನಸಿನ ದೃಢತೆಗೆ ಹೇಳಿದ ನಾಲ್ಕು ಸಾಧನಗಳನ್ನಾಚರಿಸುತ್ತ ನನ್ನೊಬ್ಬನಿಗೇ ಶರಣಾಗತನಾಗು. ಈ ಶ್ಲೋಕದ ಅರ್ಥವು ಹಿಂದಿನ ಶ್ಲೋಕಕ್ಕೆ ವ್ಯಾಖ್ಯಾನರೂಪವಾಗಿದೆ. ಈ ಬಗ್ಗೆ ಮಹಾವಿಷ್ಣುಪುರಾಣದಲ್ಲಿ "ಪರಮಾತ್ಮನು ಸರ್ವೋತ್ತಮನೆಂದು ವಿಶೇಷಜ್ಞಾನದಿಂದ ಅವನಲ್ಲಿ ಮನಸನ್ನು ಯಾವಾಗಲೂ ದೃಢಪಡಿಸಬೇಕು. ಅವನೇ ಎಲ್ಲ ಪ್ರೀತಿಯ ವಸ್ತುಗಳಿಗಿಂತ ಅತಿಪ್ರಿಯ ವಸ್ತುವೆಂದು ತಿಳಿದು, ಮಾಡಿದ ಸರ್ವಕರ್ಮಗಳನ್ನು ಅವನಿಗೆ ಸಮರ್ಪಿಸಬೇಕು. ಅಖಂಡ ಮೂರು ವಿಧದ ಪೂಜೆಯು ಸ್ವಾಭಾವಿಕವಾಗಿ ಅವನ ಪ್ರೀತಿಗಾಗಿಯೇ ಇರುವದು. ಅವನೇ ನನಗೆ ರಕ್ಷಕನೆಂದು ಅವನಲ್ಲಿ ಪೂರ್ಣ ವಿಶ್ವಾಸವಿಟ್ಟು, ತಾನು ಅವನ ಸೇವಕನೆಂತಲೂ ಸ್ಮರಿಸಬೇಕು. ಹೀಗೆ ಶ್ರೀವಿಷ್ಣುವಿಗೆ ಮೊರೆಹೋಗುವದೇ ಮೋಕ್ಷಫಲ ತಂದುಕೊಡುವದು" ಎಂದು ಹೇಳಿ ಇದೆ. ಅಥವಾ ಸಕಲ ಧರ್ಮಗಳಲ್ಲಿ ಫಲಾಸಕ್ತಿಯನ್ನು ಬಿಡಬೇಕು. ಹಾಗೆ ತಿಳಿಯದಿದ್ದರೆ, ಯುದ್ಧಕರ್ಮಕ್ಕೆ ವಿರೋಧ ಬರುವದು. ಅಥವಾ ವೈಷ್ಣವ ಧರ್ಮಕ್ಕೆ ವಿರುದ್ಧವಾದ ಸಕಲಧರ್ಮಗಳನ್ನು ತ್ಯಜಿಸು

ಬೇಕು. ಇನ್ನು, ಅನಾದಿ ಜನ್ಮಗಳಿಂದ ಒದಗಿದ ಪ್ರತಿಬಂಧವು ಇರಲು, ನನ್ನನ್ನೇ ಹೊಂದುವಿ ಎಂದು ಹೇಳುವದೇಕೆಂದು ಕೇಳಿದರೆ, ಅರ್ಜುನಾ, ಅನಾದಿ ಜನ್ಮಗಳಿಂದ ಉಂಟಾದ ಸಕಲ ಪಾಪಗಳಿಂದ ನಾನು ನಿನ್ನನ್ನು ಮುಕ್ತನನ್ನಾಗಿ ಮಾಡುವೆನು. ನೀನು ಸಂಸಾರಭೀತಿಗಾಗಿ ದುಃಖಪಡಬೇಡ ಕಂಡಿಯಾ!

**ವಿಂ ಆಂ**—ಹಿಂದಿನ ಶ್ಲೋಕದಿಂದ ಏನು ಹೇಳಿದಹಾಗಾಯಿತು? ಎಂದು ಕೇಳಿದರೆ, ಶ್ರೀವಿಷ್ಣುವಿಗೇ ಶರಣಾಗತನಾಗಬೇಕು; ಅಂದರೆ ಅವನೇ ರಕ್ಷಕನೆಂದು ಅವನಲ್ಲಿಯೇ ಆಶ್ರಯ ಹೊಂದಬೇಕು. ಅವನನ್ನು ಹೇಗೆ ಆರಾಧಿಸಬೇಕೆಂದು ಕೇಳಿದರೆ, ಅವನನ್ನು ಕುರಿತು ಆಚರಿಸುವ ಸಕಲ ಧರ್ಮಗಳಲ್ಲಿ ಫಲಾಸಕ್ತಿಯನ್ನು ಬಿಡಬೇಕು. ಈ ಬಗ್ಗೆ ಹಿಂದೆ ( ೧೮–೧೧ ) ನೆಯ ಶ್ಲೋಕದಲ್ಲಿ ಹೇಳಿ ಇದೆ. ಅನಾದಿಕಾಲದಿಂದ ಮಾಡಿದ ಪಾಪರಾಶಿಗಳ ಪ್ರತಿಬಂಧಕವಿರುವದರಿಂದ, ಹೀಗೆ ಆಚರಿಸುವ ಅಧಿಕಾರಿಯು ಅವನನ್ನು ಹೊಂದುವ ಬಗೆ ಹೇಗೆಂದು ಕೇಳಿದರೆ, ಅವನಿಗೆ ಮೊರೆಹೋಗುವದರಿಂದ ಸಂತುಷ್ಟನಾಗಿ ಪ್ರತಿಬಂಧಕಗಳಾದ ಸಕಲ ಪಾಪಗಳನ್ನು ಅವನು ನಾಶಗೊಳಿಸಲು ಅಧಿಕಾರಿಗೆ ಅವನ ಪ್ರಾಪ್ತಿ ಎಂಬ ಫಲವು ದೊರೆಯುವದು ಎಂಬಲ್ಲಿ ಸಂದೇಹವಿಲ್ಲ. ಅಂದಬಳಿಕ, ಅವನ ಪ್ರಾಪ್ತಿಗಾಗಿ ಶೋಕ ಮಾಡಕೂಡದು. ಈ ವಿಷಯಕ್ಕೆ ನಾನು ಹಿಂದೆ ( ೩–೩೬ ) ನೆಯ ಶ್ಲೋಕದಲ್ಲಿ ಹೇಳಿರುವೆನು. ಆದುದರಿಂದ ಹಿಂದೆ ( ೩–೩೦,೫–೧೦,೧೨–೬,೮–೭ ) ನೆಯ ಶ್ಲೋಕಗಳಲ್ಲಿ ಹೇಳಿದಂತೆ. ನನ್ನಲ್ಲಿ ಮನಸು ದೃಢಪಡಿಸಬೇಕು. ಅದರಂತೆಯೇ ಹಿಂದೆ ( ೨–೪೮,೨–೫೧,೩–೧೯,೪–೨೦, ೫–೧೨,೬–೧,೧೮–೬,೯–೧೧ ) ಈ ಶ್ಲೋಕಗಳಲ್ಲಿ ಹೇಳಿದಂತೆ ಮಾಡುವ ಎಲ್ಲ ಕರ್ಮಗಳಲ್ಲಿ ಫಲಾಸಕ್ತಿಯನ್ನು ಬಿಟ್ಟು ನಾನೇ ಸರ್ವರಿಗೆ ರಕ್ಷಕನೆಂಬ ವಿಶ್ವಾಸದಿಂದ ನನ್ನಲ್ಲಿ ಆಶ್ರಯಹೊಂದಿ, ಮಾಡಿದ ಸಕಲ ಕರ್ಮಗಳನ್ನು ನನಗೆ ಅರ್ಪಿಸಬೇಕು. ಅದರಿಂದ ನಾನು ಸಂತುಷ್ಟನಾಗಿ, ಹಿಂದೆ ( ೨–೫೦, ೯–೨೮ ) ಈ ಶ್ಲೋಕಗಳಲ್ಲಿ ಹೇಳಿದಂತೆ, ಮೋಕ್ಷಕ್ಕೆ ಪ್ರತಿಬಂಧಕಗಳಾದ ಪುಣ್ಯಪಾಪಗಳೆಂಬ ಎರಡೂ ವಿಧದ ಕರ್ಮಗಳಿಂದ ಮುಕ್ತನನ್ನಾಗಿ ಮಾಡಿ, ಹಿಂದೆ ( ೧೮–೪೬,೫೬–೬೨ ) ಶ್ಲೋಕಗಳಲ್ಲಿ ಹೇಳಿದಂತೆ, ಪುನರಾವೃತ್ತಿ ಇಲ್ಲದ ಸ್ವರೂಪಾನಂದ ಎಂಬ ಮೋಕ್ಷಕೊಡುವೆನು. ಆದ್ದರಿಂದ, ಅರ್ಜುನಾ, ಯಾವ ಸಂದೇಹವನ್ನೂ ಮನಸಿನಲ್ಲಿ ತರದೆ, ನಿನ್ನ ವರ್ಣಾಶ್ರಮಗಳಿಗೆ ವಿಹಿತವಾದ ಯುದ್ಧವೆಂಬ ಕರ್ಮವನ್ನೇ ಆಚರಿಸು. ಅದರಿಂದ, ನಿನ್ನನ್ನು ಕಂಡು ಯೋಗ್ಯ ಅಧಿಕಾರಿಗಳೆಲ್ಲ ತಮ್ಮತಮ್ಮ ವರ್ಣಾಶ್ರಮಗಳಿಗೆ ವಿಹಿತ ಕರ್ಮಗಳನ್ನೇ ಆಚರಿಸಿ, ಈ ಸಂಸಾರಸಾಗರವನ್ನು ದಾಟಿ ಮೋಕ್ಷಹೊಂದುವರು.

೬೭. ಗೀತಾಶಾಸ್ತ್ರಕ್ಕೆ ಅನಧಿಕಾರಿಗಳು ಯಾರೆಂದು ನಿರಾಕರಿಸುತ್ತ, ಅದಕ್ಕೆ ಅಧಿಕಾರಿಗಳು ಯಾರೆಂಬುದನ್ನು ಕುರಿತು ಹೇಳಿದ್ದು; ಅಥವಾ "ಕೃಷ್ಣಾ, ನೀನು ಪರಮಕೃಪೆಯಿಂದ ನನಗೆ ಗೌಪ್ಯವಾದ ಈ ಗೀತಾಶಾಸ್ತ್ರವನ್ನು ಉಪದೇಶಿಸಿರುವಿ. ಈ ಉಪದೇಶವು ನನ್ನ ಉದ್ಧಾರಕ್ಕಷ್ಟೇ ಅಲ್ಲ: ಆದರೆ, ನನ್ನ ನೆವದಿಂದ ಸಕಲ ಲೋಕೋದ್ಧಾರಕ್ಕಾಗಿಯೂ ಉಂಟು. ಆದ್ದರಿಂದ (೨–೧೫,೩–೧೧, ೩–೩೨,೧೧–೧೫ ) ಶ್ಲೋಕಗಳಿಂದ ನೀನು ಮಾಡಿದ ಉಪದೇಶವು ಪರೋಕ್ಷವಾಗಿದೆ. ಇದರಿಂದ ಅನ್ಯರಿಗೆ ಕೂಡ ಉಪದೇಶಿಸಬಹುದೆಂದು ನನ್ನ ಆಶಯವು. ಅಂದಬಳಿಕ ಅದನ್ನು ಯಾರಿಗೆ ಉಪದೇಶಿಸಬೇಕು ಮತ್ತು ಯಾರಿಗೆ ಉಪದೇಶಿಸಕೂಡದೆಂಬುದನ್ನು ಕುರಿತು ಈಗ ನಿಶ್ಚಯವಾಗಿ ಹೇಳಬೇಕು" ಎಂದು ಅರ್ಜುನನು ಕೇಳಿದ್ದಕ್ಕೆ ಸಮಾಧಾನ ಹೇಳಿದ್ದು —

**इदं ते नातपस्काय नाभक्ताय कदाचन ।**
**न चाशुश्रूषवे वाच्यं न च मां योऽभ्यसूयति ॥ ६७ ॥**

**ಅಂ**— ಅರ್ಜುನಾ, ಈ ಗೀತಾಶಾಸ್ತ್ರವನ್ನು ತಪೋಹೀನನಿಗೂ, ನನ್ನ ಸೇವೆಮಾಡದವನಿಗೂ, ನನ್ನನ್ನು ದ್ವೇಷಿಸುವವನಿಗೂ, ಉಪದೇಶಿಸಕೂಡದು. ಭಕ್ತಿಹೀನನಿಗಂತು ಎಂದೂ ಉಪದೇಶಿಸಲೇ ಬಾರದು. ಶಬ್ದನಿರ್ಣಯದಲ್ಲಿ ಸಮುಚ್ಚಯ, ಆಧಿಕ್ಯ, ಮತ್ತು ನ್ಯೂನಾರ್ಥಗಳಲ್ಲಿ ಚ ಶಬ್ದದ ಪ್ರಯೋಗ ಉಂಟೆಂದು ಹೇಳಿ ಇದೆ. ಅದರಿಂದ ಇಲ್ಲಿ ವಿವೇಕವೇನಂದರೆ, ತಪೋಹೀನನಿಗಿಂತ ಸೇವೆ ಮಾಡದವನಿಗೆ ಉಪದೇಶವು ಹೆಚ್ಚು ದೋಷಕರ ಎಂದು ತಿಳಿಯಬೇಕು. 'ಭಕ್ತಿಹೀನನಗೆ ಎಂದೂ ಉಪದೇಶಿಸಕೂಡದು' ಎಂದು ಹೇಳಿದ್ದರಿಂದ, ಸ್ವಲ್ಪ ತಪಸ್ಸು ಮತ್ತು ಸೇವೆಗಳುಳ್ಳವನಿಗೆ ಒಂದು ವೇಳೆ ಉಪದೇಶಿಸಿದರೂ, ಭಕ್ತಿಹೀನನಿಗೆ ಮಾಡಿದ ಉಪದೇಶವು ಮಹಾದೋಷಕರ ಎಂದು ತಿಳಿಯಬೇಕು 'ನನ್ನನ್ನು ದ್ವೇಷಿಸುವವನಿಗೆ ಉಪದೇಶಿಸಕೂಡದು' ಎಂದು ಹೇಳಿದ್ದರಿಂದ, ತಪೋಹೀನ ಮುಂತಾದ ಮೂರು ದೋಷಗಳುಳ್ಳವನಿಗಿಂತ ದ್ವೇಷಿಗಳಿಗೆ ಉಪದೇಶಿಸಿದ್ದು ಎಲ್ಲಕ್ಕೂ ಹೆಚ್ಚಿನ ದೋಷವೆಂದು ತಿಳಿಯಬೇಕು. ಇದರ ಮೇಲಿಂದ ತಪಸ್ಸು ಮೊದಲಾದ ನಾಲ್ಕು ಗುಣಗಳಿಂದ ಯುಕ್ತನಾದವನೇ ಗೀತಾಶಾಸ್ತ್ರಕ್ಕೆ ಯೋಗ್ಯ ಅಧಿಕಾರಿ ಎಂದು ಹೇಳಿದಂತಾಯಿತು.

**ವಿಂ ಅಂ**— ಈ ಗೀತಾಶಾಸ್ತ್ರವನ್ನು ಭಗವದ್ಭಕ್ತಿ, ಇಂದ್ರಿಯನಿಗ್ರಹ, ಯಜ್ಞ, ದಾನ, ಮುಂತಾದ ಸ್ವಧರ್ಮಾಚರಣೆ ಇಲ್ಲದವನಿಗೆ ಹೇಳಕೂಡದು. ಈ ವಿಷಯಕ್ಕೆ ನಾರಾಯಣಶ್ರುತಿಯ ವಚನವು ಪ್ರಮಾಣ. ತಪಸ್ವಿಯಾದರೂ ಭಕ್ತಿ ಇಲ್ಲದವನಿಗೆ ಎಂದೂ ಹೇಳಕೂಡದು. ಅವನಿಗೆ ಒಂದು ವೇಳೆ ಹೇಳಿದರೂ, ಅವನಲ್ಲಿ ಭಕ್ತಿ ಇಲ್ಲದ್ದರಿಂದ ಅದರ ಅರ್ಥವು ಗೋಚರವಾಗದು. ಈ ಬಗ್ಗೆ ಶ್ವೇತಾಶ್ವತರ ಶ್ರುತಿಯ (೬—೨೩) ನೆಯ ಮಂತ್ರವು ಪ್ರಮಾಣವಾಗಿದೆ. ತಪಸ್ವಿ ಇದ್ದು ಭಕ್ತಿಯುಳ್ಳವನಾದರೂ, ಸೇವೆಮಾಡದವನಿಗೆ ಹೇಳಕೂಡದು. ಶ್ರವಣೇಚ್ಛೆ, ಗುರುಸೇವೆಗಳಿಲ್ಲದವನಿಗೆ ಹೇಳಕೂಡದು ಈ ವಿಷಯಕ್ಕೆ ಹಿಂದೆ ( ೪—೩೪ ) ನೆಯ ಶ್ಲೋಕದಲ್ಲಿ ಹೇಳಿ ಇದೆ. ಅದರಿಂದ ಆ ಗುಣಗಳುಳ್ಳವನಿಗೆ ಹೇಳಬಹುದೆಂದು ತಿಳಿದು ಬರುವದು. ನನ್ನ ಉತ್ಕರ್ಷವನ್ನು ಸಹಿಸದೆ ನನ್ನಲ್ಲಿ ದೋಷ ಎಣಿಸುವವನಿಗೆ ಹೇಳಕೂಡದು. ಮೇಲೆ ಹೇಳಿದ ದೋಷಗಳಲ್ಲಿ ಒಂದು ದೋಷವುಳ್ಳವನಿಗೆ ಹೇಳಕೂಡದೆಂದು ಹೇಳಿದ್ದರಿಂದ, ಎಲ್ಲ ದೋಷಗಳುಳ್ಳವನಿಗೆ ಹೇಳಿದರೆ, ಮಹಾ ದೋಷ ಒದಗುವದು ಎಂದು ಸೂಚಿಸುವದಕ್ಕಾಗಿ ನಞ್ ನಿಷೇಧಾರ್ಥಕ ಪ್ರಯೋಗವು ಪ್ರತಿವಾಕ್ಯದಲ್ಲಿ ಉಂಟು. ಕ್ರಮಕ್ಕನುಸರಿಸಿ ದ್ವೇಷಿಸುವವನಿಗೆ ಹೇಳಕೂಡದೆಂದು ನಿಷೇಧಿಸದೆ, " ನನ್ನನ್ನು ದ್ವೇಷಿಸುವವನಿಗೆ " ಎಂದು ವಿಲಕ್ಷಣ ವಾಕ್ಯರಚನೆಯಿಂದ ಪರಮಾತ್ಮನನ್ನು ದ್ವೇಷಿಸುವವನು ಅತಿನಿಂದ್ಯನಾದ್ದರಿಂದ ಅವನನ್ನು ಸರ್ವಥಾ ತ್ಯಜಿಸಬೇಕೆಂದು ಸೂಚಿತವಾಗುವದು. ಆದ್ದರಿಂದ ಮಾತ್ಸರ್ಯ ಇರಕೂಡದೆಂದು ಅಧಿಕಾರಿಗೆ ವಿಶೇಷಣ ಹೇಳಿ ಇದೆ (೯—೧). ಅಂದ ಬಳಿಕ, ನನ್ನನ್ನು ದ್ವೇಷಿಸುವವನಿಗೆ ಹೇಳಕೂಡದೆಂದು ಏನು ಹೇಳಬೇಕು ಎಂಬ ಆರ್ಥವನ್ನು ಸೂಚಿಸುವದಕ್ಕಾಗಿ ಇಲ್ಲಿ 'ನನ್ನನ್ನು ದ್ವೇಷಿಸುವವನಿಗೆ' ಎಂದು ಪ್ರಯೋಗ ಉಂಟು. ಅರ್ಜುನಾ, ಈ ಗೀತಾಶಾಸ್ತ್ರವನ್ನು ಮೇಲಿನ ದೋಷಗಳಿಲ್ಲದವನಿಗೆ ಉಪದೇಶಿಸಿದರೆ, ಅದು ಲೋಕದಲ್ಲಿ ಪ್ರಸಿದ್ಧಿಗೆ ಬಂದು ಪ್ರಾಣಿಗಳು ಕೃತಾರ್ಥರಾಗಿ ನಿತ್ಯ ಸುಖದಲ್ಲಿ ಮುಳುಗುವರು. ಈ ಬಗ್ಗೆ (೧) **विद्या ह वै ब्राह्मणमाजगाम**········· (೨) **य आतृणत्त्यवितथेन**········ (೩) **अध्यापिता ये गुरुम्**······ (೪) **यमेव विद्याः शुचिमप्रमत्तम्**······ ಎಂಬ ಮಂತ್ರಗಳೂ, **मा नः स्तेनेभ्यो** ······ ಎಂಬ ಋಗ್ವೇದದ ೨ನೆಯ ಅಷ್ಟಕ ೨೩ನೆಯ ವರ್ಗದ ೧೬,೧೭ನೆಯ ಮಂತ್ರಗಳೂ, ಪ್ರಮಾಣಗಳಾಗಿವೆ.

೬೮. ಗೀತಾಶಾಸ್ತ್ರದ ವ್ಯಾಖ್ಯಾನವನ್ನು ಫಲ ಹೇಳುತ್ತ ಎರಡು ಶ್ಲೋಕಗಳಲ್ಲಿ ಮುಗಿಸಿದ್ದು:—

**य इदं परमं गुह्यं मद्भक्तेष्वभिधास्यति ।**
**भक्तिं मयि परां कृत्वा मामेवैष्यत्यसंशयः ॥ ६८ ॥**

ಅಂ—ಈ ಗೀತಾಶಾಸ್ತ್ರವು ಅತಿ ಗೌಪ್ಯ. ಯಾವ ಅಧಿಕಾರಿಯು ಅದನ್ನು ನನ್ನ ಭಕ್ತರಿಗೆ ಉಪದೇಶಿಸುವನೋ, ಅವನು ನನ್ನಲ್ಲಿ ಅತಿ ಭಕ್ತಿಯನ್ನು ಮಾಡಿ, ಜ್ಞಾನದ್ವಾರಾ ನನ್ನನ್ನೇ ಹೊಂದುವನು, ಇದರಲ್ಲಿ ಸಂದೇಹವಿಲ್ಲ.

ವಿಂ ಅಂ—ಹಿಂದಣ ಶ್ಲೋಕದಲ್ಲಿ ಶಮ, ದಮ, ಯಜ್ಞ, ದಾನ, ಹೀಗೆ ೪ ವಿಧದ ಸ್ವಂತ ಧರ್ಮಾಚರಣೆ ಉಳ್ಳವನಿಗೆ ಗೀತಾಶಾಸ್ತ್ರವನ್ನು ಉಪದೇಶಿಸಬೇಕೆಂದು ಹೇಳಿದ್ದು, 'ಇಲ್ಲಿ ನನ್ನ ಭಕ್ತರಿಗೆ ಉಪದೇಶಿಸಬೇಕೆಂದು' ಹೇಳುವ ಕಾರಣವೇನೆಂದು ಕೇಳಿದರೆ, ನನ್ನಲ್ಲಿ ಭಕ್ತಿ ಮಾಡುವವನೇ ನನ್ನ ಆರಾಧನೆಗಾಗಿ ಕರ್ಮ ಮಾಡುವನು; ಹೀಗೆ 'ನನ್ನಲ್ಲಿ ಭಕ್ತಿಯುಳ್ಳವನೇ' ಎಂದು ಹೇಳಿದ್ದರಿಂದ, ಅವನಲ್ಲಿ ಮೂರು ಗುಣಗಳೂ ಇರಬೇಕೆಂದು ಹೇಳಿದಹಾಗಾಯಿತು. ಭಕ್ತಿಹೀನನಾದರೂ ತನಗೆ ಸತ್ಕಾರಾದಿಗಳು ದೊರೆಯಬೇಕೆಂದು ನನ್ನ ಭಕ್ತರಿಗೆ ಅದನ್ನು ಉಪದೇಶಿಸಿದರೆ, ಅವನಲ್ಲಿ ನನ್ನ ವಿಷಯಕ್ಕೆ ಭಕ್ತಿ ಹುಟ್ಟಿ, ಅದರಿಂದ ಜ್ಞಾನ ಸಂಪಾದಿಸಿ ನನ್ನನ್ನು ಹೊಂದುವನು. 'ಸಂದೇಹರಹಿತನಾಗಿ ಶಿಷ್ಯನ ಸಂದೇಹಗಳನ್ನು ನಿರಾಕರಿಸಲು ಸಮರ್ಥನಾದವನೇ ಗುರುವೆನಿಸುವನು" ಎಂಬ ವಚನಕ್ಕನುಸರಿಸಿ ಅಧಿಕಾರಿಯೇ ಇದನ್ನು ಉಪದೇಶಿಸಬೇಕು. ಏಕೆಂದರೆ, ಪ್ರವಚನದಿಂದ ಸಂದೇಹವು ದೂರಾಗಿ, ಅದರಿಂದ ಭಕ್ತಿ ಹುಟ್ಟಿ, ಜ್ಞಾನದ್ವಾರದಿಂದ ನನ್ನ ಪ್ರಾಪ್ತಿ ಎಂದು ತಿಳಿಯಬೇಕು. ಹಿಂದಣ ಶ್ಲೋಕದಲ್ಲಿ अतपस्काय ಎಂದು ಏಕವಚನವನ್ನು ಪ್ರಯೋಗಿಸಿ, ಇಲ್ಲಿ भक्तेषु ಎಂದು ಬಹುವಚನ ಪ್ರಯೋಗ ಇರುವದರಿಂದ ಅಧಿಕಾರಿಯಾದ ಒಬ್ಬನಿಗೂ ಕೂಡ ಈ ಶಾಸ್ತ್ರವನ್ನು ಹೇಳದೆ, ಭಕ್ತರಾದ ಅನೇಕ ಅಧಿಕಾರಿಗಳಿಗೆ ಹೇಳಬೇಕು, ಎಂದು ಸೂಚಿತವಾಯಿತು. ಭಕ್ತರಿಗೆ ಹೇಳುವದಕ್ಕಿಂತ ಅನಧಿಕಾರಿಗಳಿಗೆ ಹೇಳಕೂಡದು ಎಂದು ಹೇಳಿದ್ದರಿಂದ, ಅಧಿಕಾರಿಗಳಗೆ ಹೇಳುವದಕ್ಕಿಂತ ಅನಧಿಕಾರಿಗಳಿಗೆ ಹೇಳದೆ ಇರುವದೇ ಲೇಸೆಂತಲೇ ಸೂಚಿತವಾಯಿತು.

೬೯. ಕೃಷ್ಣಾ, ಗೀತಾಶಾಸ್ತ್ರವನ್ನು ಪ್ರವಚನಮಾಡುವವನಿಗೆ ಭಕ್ತಿದ್ವಾರದಿಂದ ಮೋಕ್ಷಫಲದ ಪ್ರಾಪ್ತಿಯು ಹೇಳಿ ಇದೆ. ಆದರೆ, ಅದನ್ನು ಕೇಳುವವನಿಗೂ ಅಂತಹ ಫಲ ಉಂಟು. ಜ್ಞಾನದ್ವಾರಾ ಮೋಕ್ಷಫಲದ ಪ್ರಾಪ್ತಿಗಾಗಿ ಶ್ರವಣಾದಿಗಳು ವಿಧಿಸಲ್ಪಟ್ಟಿವೆ, ಅಂದಬಳಿಕ, ಶ್ರವಣ ಮಾಡುವ ಅಧಿಕಾರಿಗಳಿಗಿಂತ ಪ್ರವಚನ ಮಾಡುವವನಲ್ಲಿ ವಿಶೇಷವೇನೆಂದು ಅರ್ಜುನನು ಕೇಳಿದ್ದಕ್ಕೆ ಉತ್ತರ ಹೇಳಿದ್ದು:—

न च तस्मान्मनुष्येषु कश्चिन्मे प्रियकृत्तमः ।
भविता न च मे तस्मादन्यः प्रियतरो भुवि ॥ ६९ ॥

ಅಂ—ಈ ಭೂಮಿಯಲ್ಲಿ ನನ್ನ ಭಕ್ತರಿಗೆ ಗೀತಾಶಾಸ್ತ್ರವನ್ನು ಪ್ರವಚನ ಮಾಡುವ ಮನುಷ್ಯನಿಗಿಂತ ನನಗೆ ಶ್ರೇಷ್ಠ ಪ್ರಿಯನಿಲ್ಲ. ಇಲ್ಲಿ 'ಈಗ ಇರುವದಿಲ್ಲ' ಎಂದು ಹೇಳಿದ್ದರಿಂದ ಹಿಂದೆ ಇದ್ದಿಲ್ಲ ಎಂದು ತಿಳಿಯಬೇಕು. ಮುಂದೆಯಾದರೂ ಅಂಥವನಾಗುವದಿಲ್ಲ, ಹೀಗೆ ಅವನಿಗಿಂತ ಹೆಚ್ಚಿನವನಿಲ್ಲ ಎಂದು ಹೇಳುವ ಕಾರಣವೇ ಇಲ್ಲ. ಇಲ್ಲಿ ವಿವೇಕವೇನಂದರೆ, ಸ್ತೋತ್ರ, ಮಂತ್ರ, ಪೂಜೆ, ಮೊದಲಾದ ಬಾಹ್ಯ ಸಾಧನಗಳುಳ್ಳವರು ನನಗೆ ಪ್ರಿಯರು; ಶ್ರವಣಮನನಾದಿ ಸಾಧನಗಳುಳ್ಳವರು ಹೆಚ್ಚಿನ ಪ್ರಿಯರು; ಮತ್ತು ಗೀತಾಶಾಸ್ತ್ರ ಪ್ರವಚನಮಾಡುವವರು ಎಲ್ಲಕ್ಕೂ ಹೆಚ್ಚಿನ ಪ್ರಿಯರು. ಶ್ರವಣಾದಿಗಳನ್ನು ಮಾಡುವವರಿಗಿಂತ ಪ್ರವಚನಮಾಡುವವರಲ್ಲಿ ಇದು ವಿಶೇಷವೆಂದು ತಿಳಿಯಬೇಕು. 'ಭೂಮಿಯಲ್ಲಿ ಗೀತಾಶಾಸ್ತ್ರ ಪ್ರವಚನಮಾಡುವ ಮನುಷ್ಯರಿಗಿಂತ ನನಗೆ ಹೆಚ್ಚಿನ ಪ್ರಿಯನು ಹಿಂದೆ ಆಗಿಲ್ಲ, ಈಗ ಇರುವದಿಲ್ಲ, ಮತ್ತು ಮುಂದೆ ಆಗುವದಿಲ್ಲ' ಎಂದು ಹೇಳಿದ್ದರಿಂದ, ಸ್ವರ್ಗಾದಿಗಳಲ್ಲಿ ವಾಸಮಾಡಿದ ದೇವತೆಗಳು ಅವರಿಗಿಂತ ನನಗೆ ಹೆಚ್ಚಿನ ಪ್ರಿಯರು ಎಂದು ಸೂಚಿತವಾಯಿತು.

೭೦. ಫಲಹೇಳುವದರಿಂದ ಗೀತಾಧ್ಯಯನವನ್ನು ಸ್ತುತಿಸಿದ್ದು; ಅಥವಾ ಉಪದೇಶಿಸುವದಕ್ಕೆ ಯೋಗ್ಯನಾದವನು ಭಕ್ತರಿಗೆ ಗೀತಾಶಾಸ್ತ್ರ ಉಪದೇಶಿಸಿ, ಅದಕ್ಕೆ ಹೇಳಿದ ಫಲವನ್ನು ಹೊಂದುವನು; ಆದರೆ ಅದಕ್ಕೆ ಸಮರ್ಥನಾಗದವನು ಜ್ಞಾನಪೂರ್ವಕ ಅಥವಾ ಅಜ್ಞಾನಮೂಲಕ ಗೀತಾ ಪಾರಾಯಣಮಾಡುವವನಿಗೆ ಫಲವೇನು? ಅದರಿಂದ ನಿನಗೆ ಸಂತೋಷವಾಗುವದೇ? ಅದೇಮೇರೆಗೆ, ಗುರು ಮುಖದಿಂದ ಅದನ್ನು ಅಧ್ಯಯನಮಾಡುವವನಿಗೆ ಫಲವೇನು! ಹೀಗೆ ಕೇಳಿದ್ದಕ್ಕೆ ಉತ್ತರಕೊಟ್ಟಿದ್ದು:-

**अध्येष्यते च य इमं धर्म्यं संवादमावयोः ।**
**ज्ञानयज्ञेन तेनाहमिष्टः स्यामिति मे मतिः ॥ ७० ॥**

**ಅಂ**—'ಧರ್ಮ್ಯ'ಶಬ್ದವಾಚ್ಯನಾದ ಪರಮಾತ್ಮನ ಪ್ರೀತಿಗೆ ಸಾಧನವಾದ ಮತ್ತು ಮೋಕ್ಷದ ಪ್ರಾಪ್ತಿಗೆ ಬೇಕಾದ ಜ್ಞಾನಕ್ಕೆ ಸಾಧನವಾದ ನಮ್ಮ ಸಂವಾದರೂಪ ಈ ಗೀತಾಶಾಸ್ತ್ರವನ್ನು ಯಾರು ಜಪಿಸುವರೋ, ಜ್ಞಾನ ಅಥವಾ ಅಜ್ಞಾನಪೂರ್ವಕವಾಗಿ ಪಾರಾಯಣಮಾಡುವರೋ, ಅವರ ಈ ಜ್ಞಾನರೂಪಯಜ್ಞದಿಂದ ನಾನು ಆರಾಧಿಸಲ್ಪಟ್ಟೆನೆಂದು ನನ್ನ ನಿಶ್ಚಯು. ಅದೇಮೇರೆಗೆ ಯಾವನು ಗುರು ಮುಖದಿಂದ ಈ ಶಾಸ್ತ್ರವನ್ನು ಅಧ್ಯಯನಮಾಡುವನೋ, ಅವನ ಈ ಜ್ಞಾನಯಜ್ಞದಿಂದ ನಾನು ಪರಮಸಂತುಷ್ಟನಾಗುವೆನು. ಸಕಲ ಯಜ್ಞಗಳಿಗಿಂತ ಈ ಜ್ಞಾನಯಜ್ಞವು ಶ್ರೇಷ್ಠವು. ಈ ಬಗ್ಗೆ ಹಿಂದೆ (೪-೩೩,೯-೧೫)ನೆಯು ಶ್ಲೋಕಗಳಲ್ಲಿ ಹೇಳಿ ಇದೆ ಹೀಗೆ ಅರ್ಥಜ್ಞಾನವಿಲ್ಲದೆ ಪಾರಾಯಣ ಮಾಡುವವನಿಗೆ ಇಂತಹ ಫಲ ದೊರೆತಬಳಿಕ, ಜ್ಞಾನಪೂರ್ವಕ ಪಾರಾಯಣಮಾಡುವವರಿಗೆ ಮಹಾ ಫಲ ದೊರೆಯುವದೆಂದು ಹೇಳುವದೇನು!

೭೧ ಗುರುಮುಖದಿಂದ ಗೀತಾಶಾಸ್ತ್ರ ಕಲಿತವನಿಗೆ ಫಲವೇನು? ಪಾರಾಯಣ ಅಥವಾ ಅಧ್ಯಯನಮಾಡುವಕಾಲಕ್ಕೆ ಸಮೀಪದಲ್ಲಿ ಕುಳಿತು ಅದನ್ನು ಕೇಳುವವನಿಗೆ ಫಲವೇನು? ಎಂದು ಕೇಳಿದ್ದಕ್ಕೆ ಉತ್ತರಹೇಳಿದ್ದು:—

**श्रद्धावाननसूयश्च शृणुयादपि यो नरः ।**
**सोऽपि मुक्तः शुभाँल्लोकान्प्राप्नुयात्पुण्यकर्मणाम् ॥ ७१ ॥**

**ಅಂ**—ಗೀತಾಶಾಸ್ತ್ರದ ಶ್ರವಣವು ಪರಮಾತ್ಮನ ಪ್ರೀತಿಯ ದ್ವಾರದಿಂದ ತನಗೆ ಮಹಾಫಲದಾಯಕವೆಂಬ ಆಸ್ತಿಕ್ಯಬುದ್ಧಿಯುಳ್ಳವನಾಗಿಯೂ, ಅಸೂಯೆ ಎಂದರೆ ದೋಷರಹಿತನಾಗಿಯೂ, ನಮ್ಮಿಬ್ಬರ ಸಂವಾದ ಕೇಳುವ ಮನುಷ್ಯನು ಕೂಡ ಪಾಪಗಳಿಂದ ಮುಕ್ತನಾಗಿ ಪುಣ್ಯದಿಂದ ಹೊಂದುವ ಸ್ವರ್ಗ, ಸತ್ಯಾದಿ ಉತ್ತಮ ಲೋಕಗಳನ್ನು ಹೊಂದುವನು; ಅಥವಾ ಪುಣ್ಯಕರ್ಮಗಳಿಂದ ದೊರೆಯುವ ಉತ್ತಮದೇಹಪಡೆಯುವದಲ್ಲದೆ. ಮುಂದೆ ಉಪದೇಶದಿಂದ ಜ್ಞಾನಸಂಪಾದಿಸಿ ಕಡೆಗೆ ಮುಕ್ತಿ ಹೊಂದುವನು. ಇಲ್ಲಿ 'ಶ್ರವಣಮಾಡುವವನು ಕೂಡ ಮುಕ್ತನಾಗುವನು, ಅಂದಬಳಿಕ ಅದನ್ನು ಅಧ್ಯಯನ ಮಾಡುವವನು ಮುಕ್ತನಾಗುವನೆಂದು ಹೇಳುವದೇನು!' ಎಂಬುದರಿಂದ ಅಧ್ಯಯನಮಾಡುವವನಿಗೆ ಹೆಚ್ಚು ಸುಖವು, ಅವನಿಗಿಂತ ಪ್ರವಚನಮಾಡುವವನಿಗೆ, ಅವನಿಗಿಂತ ದೇವತೆಗಳಿಗೆ, ಹೀಗೆ ಹೆಚ್ಚೆಚ್ಚು ಸುಖ ಉಂಟೆಂತಲೂ ಸೂಚಿತವಾಯಿತು.

೭೨. ಇಲ್ಲಿಯವರೆಗೆ ಮಾಡಿದ ಉಪದೇಶವು ಅರಣ್ಯರೋದನದಂತೆ ನಿಷ್ಫಲವಾಯಿತೇ? ಎಂಬ ಅಭಿಪ್ರಾಯದಿಂದ ಶ್ರೀಕೃಷ್ಣನು ಅರ್ಜುನನಿಗೆ ನುಡಿದದ್ದು; ಅಥವಾ ಹಿಂದೆ (೨-೧೧)ನೇ ಶ್ಲೋಕ

ದಿಂದ ಪ್ರಕೃತ ಅಧ್ಯಾಯದ ೬೬ನೇ ಶ್ಲೋಕದವರೆಗೆ ಅತಿಮಹಿಮೆಯುಳ್ಳ, ಸಂಸಾರ ಎಂಬ ಭೀತಿಯ ನಾಶಕ್ಕೆ ರಸಾಯನದಂತೆ ಇರುವ, ಮೋಕ್ಷವೆಂಬ ಮಹಾಪುರುಷಾರ್ಥಕ್ಕೆ ಸಾಧನವಾದ ಮತ್ತು ಸಕಲ ಪಾಪಗಳ ನಾಶಕ್ಕೆ ಮಹಾ ಅಸ್ತ್ರವಾದ ಈ ಗೀತಾಶಾಸ್ತ್ರವನ್ನು ಅರ್ಜುನನಿಗೆ ಉಪದೇಶಿಸಿ, ಅದರ ಪಾರಪ್ರಪಚನ, ಶ್ರವಣಮನನನಿದಿಧ್ಯಾಸಾದಿಗಳಿಂದ ಹುಟ್ಟುವ ಮಹಾಫಲವನ್ನು ಹೇಳಿ ಅಜ್ಞಾನ. ಸಂಶಯ, ವಿಪರೀತಜ್ಞಾನಗಳು ಹೋಗುವವರೆಗೆ ಗುರುವು ಶಿಷ್ಯನಿಗೆ ಉಪದೇಶಿಸಬೇಕೆಂದು ಲೋಕದಲ್ಲಿ ದೃಷ್ಟಾಂತವನ್ನು ಸ್ಥಾಪಿಸುವದಕ್ಕಾಗಿ ಅರ್ಜುನನಲ್ಲಿ ಅವುಗಳು ನಾಶವಾಗಿ ಯಥಾರ್ಥ ಜ್ಞಾನವು ಹುಟ್ಟಿರುವದು ಎಂದು ಶ್ರೀಕೃಷ್ಣನು ಅರಿತಾಗ್ಯೂ, ಗೊತ್ತಿಲ್ಲದವನಂತೆ ಅರ್ಜುನನಿಗೆ ಕೇಳಿದ್ದು :—

**कच्चिदेतच्छ्रुतं पार्थ त्वयैकाग्रेण चेतसा ।**
**कच्चिदज्ञानसंमोहः प्रनष्टस्ते धनंजय ॥ ७२ ॥**

**ಅಂ**—ಅರ್ಜುನಾ, ನಾನು ಇಲ್ಲಿಯವರೆಗೆ ಉಪದೇಶಿಸಿದ ಗೀತಾಶಾಸ್ತ್ರದ ಪ್ರಮೇಯಗಳನ್ನೆಲ್ಲ ಏಕಾಗ್ರ ಮನಸಿನಿಂದ ಕೇಳಿರುವಿಯೋ ? ಧನಂಜಯಾ, ನಿನ್ನಲ್ಲಿ ಅಜ್ಞಾನಮೂಲಕ ಹುಟ್ಟಿದ ಮೋಹವು ದೂರಾಯಿತೇ ? ಯಾವದಾದರೂ ಪ್ರಮೇಯದ ವಿಷಯಕ್ಕೆ ಸಂದೇಹ ಇದ್ದರೆ, ಅದನ್ನು ಕೇಳು; ದೂರಮಾಡುವೆನು. ಶಿಷ್ಯನ ಅಜ್ಞಾನಾದಿಗಳನ್ನು ದೂರಮಾಡುವದು ಗುರುವಿನ ಕರ್ತವ್ಯ

೭೩. ಹೀಗೆ ಶ್ರೀಕೃಷ್ಣನು ಕೇಳಿದ್ದಕ್ಕೆ, ಶಿಷ್ಯನು ಗುರುಗಳಿಂದ ತತ್ತ್ವೋಪದೇಶ ಹೊಂದಿದ ಬಳಿಕ ಕೃತಜ್ಞಪೂರ್ವಕವಾಗಿ ಉತ್ತರಕೊಡತಕ್ಕದ್ದೆಂದು ತೋರಿಸಲು ಅರ್ಜುನನು ಉತ್ತರಕೊಟ್ಟದ್ದು —

**अर्जुन उवाच ।**

**नष्टो मोहः स्मृतिर्लब्धा त्वत्प्रसादान्मयाच्युत ।**
**स्थितोऽस्मि गतसंदेहः करिष्ये वचनं तव ॥ ७३ ॥**

**ಅಂ**—ನಾಶರಹಿತನೇ, ಮೊದಲನೆಯ ಅಧ್ಯಾಯದಲ್ಲಿ ಹೇಳಿದಂತೆ ವಿಪರೀತಜ್ಞಾನದಿಂದ ಹುಟ್ಟಿದ ನನ್ನ ಮೋಹವು ನಾಶವಾಯಿತು. ನೀನು 'ಶ್ರೀಮನ್ನಾರಾಯಣ ಮತ್ತು ಅವನ ಭಕ್ತರ ಕೂಡ ದ್ವೇಷಮಾಡುವ ಶತ್ರುಗಳನ್ನು ನಾಶಗೊಳಿಸುವದೇ ಉತ್ತಮ ಧರ್ಮ' ಎಂದು ಉಪದೇಶಿಸಿದ ಸಂಗತಿಯು ನನ್ನ ಸ್ಮರಣೆಯಲ್ಲಿ ನಿಶ್ಚಲವಾಗಿದೆ. ಮೇಲಾಗಿ, ನೀನು ಹಿಂದೆ ೬೩ ನೆಯ ಶ್ಲೋಕದಲ್ಲಿ 'ನೀನು ನಿನ್ನ ಮನಬಂದಂತೆ ಮಾಡಬಹುದು' ಎಂದು ಹೇಳಿರುವಿ; ಆದರೆ, ಈಗ ನನ್ನ ಮನಸು ದೃಢವಾದುದರಿಂದ ನಿನ್ನ ಆಜ್ಞಾರೂಪ ವಚನದಂತೆಯೇ ವರ್ತಿಸುವೆನು ಇದೆಲ್ಲ ನಿನ್ನ ಅನುಗ್ರಹದ ಫಲವೇ, ಹೊರ್ತು ನನ್ನ ಸಾಮರ್ಥ್ಯದಿಂದ ಹಾಗೆ ಹೇಳುವದಿಲ್ಲ.

**ವಿಂ ಅಂ**—ಇಲ್ಲಿ ಅರ್ಜುನನ ಅಭಿಪ್ರಾಯವೇನಂದರೆ, ಅಜ್ಞಾನದಿಂದ ಹುಟ್ಟಿದ ಮೋಹವು ದೂರವಾಯಿತು. ಪರಾಪರತತ್ತ್ವಗಳ ವಿಷಯಕ್ಕೆ ಹೇಳಿದ ಪ್ರಮೇಯಗಳು ಸ್ಮರಣೆಗೆ ಬಂದವು. ಈ ಬಗ್ಗೆ ನಾನು ಹಿಂದೆ (೧೦–೧೩)ನೆಯ ಶ್ಲೋಕದಲ್ಲಿ ಹೇಳಿರುವೆನು ಯುದ್ಧವು ಕ್ಷತ್ರಿಯರಿಗೆ ಉತ್ತಮ ಧರ್ಮ; ಆದರೆ, ಅದನ್ನು ಆಚರಿಸದೆ ಬಿಟ್ಟರೆ, ನರಕವು ತಪ್ಪದು. ಸರ್ವರು ತಮ್ಮ ತಮ್ಮ ವರ್ಣಾಶ್ರಮಗಳಿಗೆ ವಿಹಿತವಾದ ಧರ್ಮಗಳನ್ನೇ ಆಚರಿಸಬೇಕು. ಈ ಮೊದಲಾದ ಯಥಾರ್ಥಜ್ಞಾನವು ನಿನ್ನ ಉಪದೇಶದಿಂದ ನನ್ನಲ್ಲಿ ಬೇರೂರಿತು. ನಿನ್ನಲ್ಲಿ ಆಶ್ರಯಹೊಂದಿದವರನ್ನು ನೀನು ಎಂದೂ ದೂರ

ಮಾಡಲಾರಿ. ಆದ್ದರಿಂದಲೇ ನಿನಗೆ ಅಚ್ಯುತನೆನ್ನುವರು. ಹಿಂದೆ (೨–೨೭)ನೆಯ ಶ್ಲೋಕದಲ್ಲಿ ನಿನ್ನ ಶಿಷ್ಯನಾಗಿ ಬಂದ ನನಗೆ ಉಪದೇಶಿಸಬೇಕೆಂದು ಪ್ರಾರ್ಥಿಸಿದಮೇರೆಗೆ, ನೀನು ನನಗೆ ಗೀತಾಶಾಸ್ತ್ರ ಉಪದೇಶಿಸಿ, ನನ್ನ ಅಜ್ಞಾನಾದಿಗಳನ್ನು ನಾಶಗೊಳಿಸಿರುವಿ. ಆದುದರಿಂದ ನೀನು ಹೇಳಿದಂತೆ, ಯುದ್ಧ ಮಾಡಬೇಕೆಂಬಲ್ಲಿ ನನ್ನ ಮನಸು ದೃಢವಾಗಿದೆ. ಇಲ್ಲಿ 'ಯುದ್ಧಮಾಡುವೆ' ಎಂದು ಹೇಳದೆ 'ವಚನ ನಡಿಸುವೆ' ಎಂದು ಹೇಳಿದ್ದರಿಂದ, ಕೇವಲ ಯುದ್ಧವನ್ನಷ್ಟೇ ಮಾಡುವೆನು ಹೀಗೇನಲ್ಲ, ಆದರೆ, ಯಾವುದನ್ನು ಮಾಡಬೇಕೆಂದು ಹೇಳಿರುವಿಯೋ, ಅದನ್ನೆಲ್ಲ ಮಾಡುವೆ ಎಂದು ಸೂಚಿಸುವದು. ಏಕೆಂದರೆ, ನಿನ್ನ ಮಾತಿನಲ್ಲಿ ಅಂತಹ ವಿಶ್ವಾಸವು ಹುಟ್ಟಿದೆ. ನಿನ್ನ ಆಜ್ಞೆಪಾಲಿಸುವದು ನಿನ್ನ ಹಿತಕ್ಕಾಗಿ ಅಲ್ಲ, ನನ್ನ ಹಿತಕ್ಕಾಗಿಯೇ ಎಂದು ಇಲ್ಲಿ ಆತ್ಮನೇ ಪದಪ್ರಯೋಗವು ಸೂಚಿಸುವದು. ನೀನು ಹಿಂದೆ ೬೩ನೆಯ ಶ್ಲೋಕದಲ್ಲಿ 'ನಿನ್ನ ಮನಬಂದಂತೆ ವರ್ತಿಸು' ಎಂದು ಹೇಳಿದ್ದರಿಂದ ಕೋಪಿಸದೆ ನನ್ನಲ್ಲಿ ಕನಿಕರಪಟ್ಟು ನನ್ನನ್ನು ಕಾಪಾಡು. ನನಗೆ ನೀನೇ ಗತಿಯು, ಹೊರತು ಅನ್ಯರಲ್ಲ. ನಾನು ನಿನಗೆ ಅನನ್ಯಭಾವದಿಂದ ಶರಣಾಗತನಾಗಿರುವೆನು.

೭೪. ಶ್ರೀಕೃಷ್ಣನನಿಗೂ, ಅರ್ಜುನನಿಗೂ ನಡೆದ ಏಕಾಂತದಲ್ಲಿಯ ಸಂವಾದವನ್ನು ನೀನು ಹೇಗೆ ಕೇಳಿದಿ ? ಎಂದು ಧೃತರಾಷ್ಟ್ರನು ಕೇಳಿದ್ದಕ್ಕೆ ಸಂಜಯನು ಉತ್ತರ ಹೇಳಿದ್ದು:—

**संजय उवाच ।**

**इत्यहं वासुदेवस्य पार्थस्य च महात्मनः ।**
**संवादमिममश्रौषमद्भुतं रोमहर्षणम् ॥ ७४ ॥**

**ಅಂ**—ಮೊದಲನೆಯ ಅಧ್ಯಾಯದಿಂದ ಇಲ್ಲಿಯವರೆಗೆ ಹೇಳಿದ ಶ್ರೀಕೃಷ್ಣ ಮತ್ತು ಮಹಾನುಭವನಾದ ಅರ್ಜುನ ಇವರೀರ್ವರಲ್ಲಿ ನಡೆದ ಸಂವಾದವು ಅತ್ಯಾಶ್ಚರ್ಯಕರವಾಗಿದೆ. ಅದನ್ನು ನಾನು ಕೇಳಿದ್ದರಿಂದ ನನ್ನ ಮೈಮೇಲಿನ ರೋಮಾಂಚಗಳು ಹರುಷದಿಂದ ಉಬ್ಬಿದವು. ಅದರಿಂದ ಆದ ಆನಂದವನ್ನು ಎಷ್ಟೆಂದು ವರ್ಣಿಸಲಿ !

**ವಿಂ ಅಂ**—ಕೃಷ್ಣಾರ್ಜುನರಿಗೆ ನಡೆದ ಸಂವಾದವು ಅನ್ಯರ ಮುಖದಿಂದ ಕೇಳಿದರೆ, ಇಂತಹ ಹರುಷವಾದಬಳಿಕ ಸಾಕ್ಷಾತ್ ಶ್ರೀಕೃಷ್ಣನ ಮುಖದಿಂದ ಅದನ್ನು ಕೇಳಿದ ಅರ್ಜುನನಿಗೆ ಎಷ್ಟು ಆನಂದವಾಗಿರಬಹುದು ! ಅದಕ್ಕೆ ಎಣೆಯೇ ಇಲ್ಲ; ಅಂತೆಯೇ ಅವನು ಮಹಾನುಭಾವನು. ಆದುದರಿಂದಲೇ ಶ್ರೀಕೃಷ್ಣನು ಅವನಿಗೆ 'ದೇಹಧಾರಿಗಳಲ್ಲಿ ಶ್ರೇಷ್ಠನು' ಎಂದು ಹಿಂದೆ (೮–೪)ನೆಯ ಶ್ಲೋಕದಲ್ಲಿ ಸಂಬೋಧಿಸಿರುವನು. ಇಲ್ಲಿ **ವಾಸುದೇವ** ಮತ್ತು **ಪಾರ್ಥ** ಈ ಶಬ್ದಗಳು 'ಯಾವ ವಸುದೇವನ ಮನೆಯಲ್ಲಿ ಕೃಷ್ಣರೂಪೀ ಪರಮಾತ್ಮನು ಅವತಾರಧರಿಸಿದನೋ, ಮತ್ತು ಯಾವ ಕುಂತಿಯ ಉದರದಲ್ಲಿ ಪರಮ ಭಗವದ್ಭಕ್ತನಾದ ಅರ್ಜುನನು ಜನಿಸಿ ಶ್ರೀಕೃಷ್ಣನ ಅನುಗ್ರಹಕ್ಕೆ ಪಾತ್ರನಾಗಿ ಇಂತಹ ಉಪದೇಶವನ್ನು ಹೊಂದಿದನೋ, ಆ ವಸುದೇವ ಕುಂತಿಯರು ಧನ್ಯರೆಂತಲೂ, ಹುಟ್ಟುಕುರುಡನಾದ ಯಾವ ಧೃತರಾಷ್ಟ್ರನಿಂದ ಹುಟ್ಟಿ ಪರಮಾತ್ಮ ಮತ್ತು ಅವರ ಭಕ್ತರ ಕೂಡ ದ್ವೇಷಮಾಡುತ್ತ ದುರ್ಯೋಧನನು ಸಕಲ ಜಗತ್ತಿನ ನಾಶಕ್ಕೆ ಕಾರಣನಾದನೋ, ಅಂತಹ ಕುರುಡನ ಜನ್ಮಕ್ಕೆ ಧಿಕ್ಕಾರವಿರಲಿ' ಎಂತಲೂ ಸೂಚಿಸುವವು.

೭೫. ಹಿಂದಣ ಶ್ಲೋಕದಲ್ಲಿ ಅರ್ಜುನ ಮತ್ತು ಶ್ರೀಕೃಷ್ಣ ಇವರೀರ್ವರಿಗೆ ಏಕಾಂತದಲ್ಲಿ ಆದ ಸಂವಾದವು ಹೇಗೆ ಕೇಳಿದಿ ? ಎಂದು ಧೃತರಾಷ್ಟ್ರನು ಕೇಳಿದ್ದಕ್ಕೆ ಸಂಜಯನು ಸಮಾಧಾನ ಹೇಳಿದನು.

ಅದಕ್ಕೆ, ಈಗ ಸಂವಾದದ ಶ್ರವಣವೂ, ಪರಮಾತ್ಮನ ವಿಶ್ವರೂಪದ ದರ್ಶನವೂ, ದೂರದಲ್ಲಿ ಇದ್ದವನಿಗೆ ಸಂಭವಿಸೀತೆ ? ಲೋಕದಲ್ಲಂತೂ ಇಂತಹ ಮಾತು ಅನುಭವಕ್ಕೆ ಬಂದಿಲ್ಲ, ಎಂದು ಮತ್ತೆ ಕೇಳಲು, ಅದಕ್ಕೆ ಸಂಜಯನು ಉತ್ತರ ಕೊಟ್ಟದ್ದು :—

**व्यासप्रसादाच्छ्रुतवानेतद्गुह्यमहं परम् ।**
**योगं योगेश्वरात्कृष्णात्साक्षात्कथयतः स्वयम् ॥ ७५ ॥**

ಅಂ—ಧೃತರಾಷ್ಟ್ರನೇ, ಕುರುಕ್ಷೇತ್ರದಲ್ಲಿ ವರ್ತಿಸಿದ ಯುದ್ಧವು ಮುಗಿಯುವವರೆಗೆ ಅಲ್ಲಿ ನಡೆದ ಸಕಲ ವೃತ್ತಾಂತವು ನನ್ನ ಕಣ್ಣಿದುರಿಗೆ ತೋರಲೆಂತಲೂ, ಕೇಳಲೆಂತಲೂ, ಅದನ್ನು ನಿನಗೆ ಅರುಹಬೇಕೆಂತಲೂ, ಸಕಲ ಉಪಾಯಗಳಿಗೆ ಸ್ವಾಮಿಯಾದ ಶ್ರೀವೇದವ್ಯಾಸನು ನನಗೆ ದಿವ್ಯದೃಷ್ಟಿಯನ್ನು ಕೊಟ್ಟದ್ದರಿಂದ, ಅವನ ಅನುಗ್ರಹಮೂಲಕ ಪರಮಪುರುಷಾರ್ಥದ ಪ್ರಾಪ್ತಿಗೆ ಸಾಧನವಾದ ಈ ಗೌಪ್ಯಶಾಸ್ತ್ರವನ್ನೆಲ್ಲ ಶ್ರೀಕೃಷ್ಣನು ಸಾಕ್ಷಾತ್ ತಾನಾಗಿ ಅರ್ಜುನನಿಗೆ ಉಪದೇಶಿಸಿದ್ದನ್ನೆಲ್ಲ ನಾನು ಕೇಳಿದೆನು ಕಂಡಿಯಾ. ಅಘಟಿತಘಟನಾ ಸಾಮರ್ಥ್ಯವುಳ್ಳ ಶ್ರೀವೇದವ್ಯಾಸನ ಅನುಗ್ರಹವಾದ ಬಳಿಕ ಲೋಕದಲ್ಲಿ ಯಾವ ಸಂಗತಿಯು ದುರ್ಘಟ !

೭೬. ಧೃತರಾಷ್ಟ್ರನು ಕೇಳಿದ್ದೇನಂದರೆ, "ಸಂಜಯಾ, ಕುರುಕ್ಷೇತ್ರದಲ್ಲಿ ನನ್ನವರಾದ ದುರ್ಯೋಧನಾದಿ ಕೌರವರೂ, ಪಾಂಡವರೂ, ಯುದ್ಧಕ್ಕೆ ಕೂಡಿದವರಾಗಿ ಏನು ಮಾಡಿದರು ?" ಎಂದು ಕೇಳಿದ್ದಕ್ಕೆ, ಯುದ್ಧವು ಪ್ರಾರಂಭವಾಗುವ ಮೊದಲು ಪಾಂಡವರ ಸೇನೆಯನ್ನು ನೋಡಿ, ವ್ಯಾಕುಲ ಅಂತಃಕರಣವುಳ್ಳ ದುರ್ಯೋಧನನು ತನ್ನ ಗುರುವಾದ ದ್ರೋಣನ ಸಮೀಪಕ್ಕೆ ಹೋಗಿ, ತನ್ನ ದುಃಖವನ್ನು ಅವನಿಗೆ ಅರುಹಿದನು. ಅದನ್ನು ಕಂಡು ಕುರುಕುಲಕ್ಕೆ ಮುತ್ತಜ್ಜನಾದ ಭೀಷ್ಮನು ಸಿಂಹನಾದದಿಂದ ಅವನನ್ನು ಸಮಾಧಾನಗೊಳಿಸಿದನು. ಬಳಿಕ ಕೃಷ್ಣಾರ್ಜುನರು ಕೂಡ ರಣಾಂಗಣಕ್ಕೆ ಬಂದು, ತಮ್ಮ ತಮ್ಮ ಶಂಖಗಳನ್ನು ಊದಿದರು. ಈ ಮೇರೆಗೆ, ಸಿದ್ಧವಾದ ಎರಡೂ ಸೇನೆಗಳ ಮಧ್ಯದಲ್ಲಿ ಶ್ರೀಕೃಷ್ಣನು ಅರ್ಜುನನನ್ನು ನೆವಮಾಡಿ, ಸಕಲ ಲೋಕೋದ್ಧಾರಕ್ಕಾಗಿ ಅವನಿಗೆ ಎಲ್ಲ ಗೀತಾಶಾಸ್ತ್ರ ಉಪದೇಶಿಸಬೇಕೆಂದು ಆಲೋಚಿಸಿದನು. ಅವನು ಸಕಲ ಇಂದ್ರಿಯಗಳಿಗೆ ಪ್ರೇರಕನಾದುದರಿಂದ, ಅರ್ಜುನನಲ್ಲಿ ಶೋಕ ಮತ್ತು ಮೋಹಗಳನ್ನು ಹುಟ್ಟಿಸಿ 'ನಾನು ನಿನ್ನ ಶಿಷ್ಯನಲ್ಲವೇ ? ನನಗೆ ಗೀತಾಶಾಸ್ತ್ರವನ್ನು ಉಪದೇಶಿಸು' ಎಂದು ಅವನಿಂದ ಪ್ರಾರ್ಥಿಸಲ್ಪಟ್ಟು, ಅವನಿಗೆ ಅದನ್ನೆಲ್ಲ ಉಪದೇಶಿಸಿದನು. ಅದನ್ನು ನೀನು ಶ್ರೀವೇದವ್ಯಾಸನ ಅನುಗ್ರಹದಿಂದ ಕೇಳಿ ನನಗೆ ಹೇಳಿರುವಿ, ಮತ್ತು ಅರ್ಜುನನು ಗೀತಾಶಾಸ್ತ್ರದ ಉಪದೇಶದಿಂದ ಯುದ್ಧಕ್ಕೆ ಸಿದ್ಧನಾದನೆಂತಲೂ ಹೇಳಿರುವಿ, ಆದುದರಿಂದ ಮುಂದೇನಾಯಿತು? ಹೀಗೆ ಕೇಳಲಾಗಿ, ಅದಕ್ಕೆ ಸಂಜಯನು ಹೇಳಿದ್ದು:—

**राजन्संस्मृत्य संस्मृत्य संवादमिममद्भुतम् ।**
**केशवार्जुनयोः पुण्यं हृष्यामि च मुहुर्मुहुः ॥ ७६ ॥**

ಅಂ—ಧೃತರಾಷ್ಟ್ರಚಕ್ರವರ್ತಿಯೇ, ಏನು ಹೇಳಲಿ! ಯುದ್ಧದ ಮುಂದಿನ ವೃತ್ತಾಂತವನ್ನು ಈಗಲೇ ಹೇಳಲು, ನನಗೆ ಉತ್ಸಾಹ ಇಲ್ಲ; ಸ್ವಲ್ಪ ತಡೆ; ಶ್ರೀಕೃಷ್ಣಾರ್ಜುನರ ನಡುವೆ ಮೊದಲಿನಿಂದ ಕಡೆಯವರೆಗೆ ಆದ ಸಂವಾದವನ್ನೆಲ್ಲ ತಿರುತಿರುಗಿ ಸ್ಮರಿಸಿ, ಅದರಿಂದಾಗುವ ಸುಖಾತಿಶಯವನ್ನು ಮೊದಲು ಅನುಭವಿಸುವೆನು. ಅದು ಸಕಲ ದುರಿತಗಳನ್ನು ನಾಶಗೊಳಿಸುವದಲ್ಲದೆ ಮಹಾ ಪುಣ್ಯಫಲ ಕೊಡುವದು. ನೀನೂ ಅದನ್ನು ನೆನಿಸಿ ಆನಂದಪಡು. ಅಹಹ! ನನ್ನ ಭಾಗ್ಯವನ್ನು ಎಷ್ಟೆಂದು ವರ್ಣಿ

ಸಲಿ! ಸಂವಾದದ ಸ್ಮರಣೆಯಿಂದ ಹುಟ್ಟಿದ ಹರುಷದಿಂದ ನನ್ನ ಮೈ ರೋಮಾಂಚಿತವಾಗಿರುವದಲ್ಲ! ಆನಂದಕಂಬನಿಗಳು ಉದುರುವವಲ್ಲ! ಹಿಂದಿನ ನೂರಾರು ಜನ್ಮಗಳಲ್ಲಿ ನಾನು ಮಾಡಿದ ಪುಣ್ಯವು ಎಂತಹದು! ಆಚರಿಸಿದ ತಪಸ್ಸು ಎಂತಹದು! ಮಾಡಿದ ಯಜ್ಞ–ಯಾಗಾದಿಗಳು ಎಂಥವೋ ತಿಳಿಯದು, ಕಂಡಿಯಾ! ಅವುಗಳ ಪುಣ್ಯಬಲದಿಂದ ಶ್ರೀವೇದವ್ಯಾಸರ ಅನುಗ್ರಹವಾಗಿ ಇಂಥ ಸಂವಾದದ ಲಾಭವು ನನಗೆ ದೊರೆಯಿತಲ್ಲ! ಅಲ್ಪಕಾಲದಮೇಲೆ ಮುಂದಿನ ಸಂಗತಿಯನ್ನು ಹೇಳುವೆ, ಕೇಳು.

೭೭. ಸಂಜಯಾ, ನೀನು ಕೇಳಿಕೊಂಡಂತೆ ನಿನಗೆ ಅವಕಾಶ ದೊರೆಯಿತಲ್ಲ. ಇನ್ನಾದರೂ ಬೇಗನೆ ಮುಂದಿನ ವೃತ್ತಾಂತವನ್ನು ಅರುಹೆಂದು ಧೃತರಾಷ್ಟ್ರನು ಪ್ರಾರ್ಥಿಸಲಾಗಿ ಅದಕ್ಕೆ ಸಂಜಯನು ನುಡಿದದ್ದು:—

**तच्च संस्मृत्य संस्मृत्य रूपमत्यद्भुतं हरेः ।**
**विस्मयो मे महान् राजन् हृष्यामि च पुनःपुनः ॥ ७७ ॥**

ಅಂ—ಮಹಾರಾಜನೇ, ಕೇಳಿದ ಸಂಗತಿಯ ಸ್ಮರಣೆಗಿಂತ ಕಣ್ಣಾರೆಕಂಡದ್ದರ ಸ್ಮರಣೆಯಿಂದ ಹೆಚ್ಚಿನ ಆನಂದವಾಗುವದು. ಶ್ರೀಕೃಷ್ಣನು ಅರ್ಜುನನಿಗೆ ತೋರಿಸಿದ ಯಾವ ವಿಶ್ವರೂಪವೋ ಅಂತಹ ವಿಶ್ವರೂಪವನ್ನು ನಾನು ಕಂಡೆನಲ್ಲ! ಅದರ ದರ್ಶನದಿಂದ ಎಲ್ಲ ಪಾಪಗಳು ದೂರಾಗುವವು. ತಿರುತಿರುಗಿ ಅದರ ಸ್ಮರಣೆಯಿಂದ ನನ್ನಲ್ಲಿ ಅತ್ಯಾಶ್ಚರ್ಯ ಉಂಟಾಗುತ್ತಲಿದೆ. ಅಂತಹ ರೂಪದ ದರ್ಶನದಿಂದ 'ನಾನು ಧನ್ಯನು; ನಾನು ಧನ್ಯನು, ಕೃತಕೃತ್ಯನಾದೆನು; ನನ್ನ ಜನ್ಮವು ಸಫಲವಾಯಿತು' ಹೀಗೆ ನನ್ನೊಳಗೇ ನಾನು ಹರುಷಪಡುವೆನು. ಆ ಸ್ವರೂಪದ ವಿಷಯಕ್ಕೆ ನಾನು ಹೇಳಿದ್ದನ್ನೆಲ್ಲ ನೀನಾದರೂ ಸ್ಮರಿಸಿ ಧನ್ಯನಾಗು.

೭೮. ಸಂಜಯಾ, ಅರ್ಜುನನು ಯುದ್ಧಮಾಡುವದನ್ನು ನಿಶ್ಚಯಿಸಲು, ಅದರಲ್ಲಿ ಜಯವು ಯಾರಿಗೆ ದೊರತೀತೆಂದು ನಿನಗೆ ತೋರುವದು? ನನಗಂತೂ ನಮ್ಮ ಪಕ್ಷಕ್ಕೆಯೇ ಜಯ ಆಗುವದೆಂದು ತೋರುವದು. ಏಕೆಂದರೆ, ನಮ್ಮ ಪಕ್ಷದವರು ಶ್ರೇಷ್ಠರಿದ್ದು, ನಮ್ಮಕಡೆಗೆ ಸೇರಿದವರ ಸಂಖ್ಯೆಯೂ ಹೆಚ್ಚಾಗಿದೆಯಲ್ಲವೇ? ಎಂದು ಧೃತರಾಷ್ಟ್ರನು ತನ್ನ ಅಭಿಪ್ರಾಯ ಹೇಳಲು, ಅದಕ್ಕೆ ಸಂಜಯನು ಉತ್ತರಕೊಟ್ಟಿದ್ದು:—

**यत्र योगेश्वरः कृष्णो यत्र पार्थो धनुर्धरः ।**
**तत्र श्रीर्विजयो भूतिर्ध्रुवा नीतिर्मतिर्मम ॥ ७८ ॥**

ಅಂ—ಯಾವ ಪಕ್ಷದಲ್ಲಿ ಮಹಾಪುರುಷಾರ್ಥಕ್ಕೆ ಸಾಧನಗಳಾದ ಕರ್ಮ, ಜ್ಞಾನ, ಭಕ್ತಿ, ವೈರಾಗ್ಯ, ಯೋಗಗಳಿಗೆ ಸ್ವಾಮಿಯಾದ ಶ್ರೀಕೃಷ್ಣರೂಪೀ ಪರಮಾತ್ಮನು ಯುದ್ಧಕಾರ್ಯ ಜರಗಿಸಲು ಮುಂದರಿದು ನಿಂತಿರುವನೋ, ಮತ್ತು ಧನುರ್ವಿದ್ಯೆಯಲ್ಲಿ ಪಂಡಿತನಾಗಿ ಗಾಂಡೀವಧನುಸ್ಸು ಧರಿಸಿ, ಅವನಿಗೆ ಮಗನಂತೆ ಪ್ರೀತಿಪಾತ್ರನಾದ ಅರ್ಜುನನು ಆ ಕಾರ್ಯಕ್ಕೆ ಸಿದ್ಧನಾಗಿರುವನೋ, ಅದೇ ಪಕ್ಷಕ್ಕೆ ರಾಜ್ಯಲಕ್ಷ್ಮಿ, ಜಯ, ಆನೆಕುದುರೆ, ಧನಧಾನ್ಯ ಮೊದಲಾದ ಸಂಪತ್ತು, ನೀತಿ, ಹೀಗೆ ಎಲ್ಲವೂ ಅಕ್ಷಯವಾಗಿ ದೊರೆಯುವವೆಂದು ಗುರುಗಳ ಅನುಗ್ರಹದಿಂದ ಸಂಪಾದಿಸಿದ ಯಥಾರ್ಥಜ್ಞಾನವುಳ್ಳ ನನಗೆ ನಿಶ್ಚಯವಾಗಿ ತೋರುವದು. ಆದುದರಿಂದ ಧೃತರಾಷ್ಟ್ರನೇ, ನೀನು ದುರ್ಮಾರ್ಗಿಗಳಾದ ನಿನ್ನ ಪುತ್ರರಲ್ಲಿ ಇಟ್ಟ ಸ್ನೇಹವನ್ನು ತ್ಯಾಗಮಾಡಿ, ಸಾಕ್ಷಾತ್ ಕೃಷ್ಣರೂಪೀ ಪರಮಾತ್ಮನಲ್ಲಿಯೂ, ಪರಮ ಭಗವದ್ಭಕ್ತರಾದ ಪಾಂಡವರಲ್ಲಿಯೂ, ಸ್ನೇಹಬೆಳಿಸಿ, ಅವರ ಸಂಗಡ ಸಂಧಿಮಾಡು. ಅದರಿಂದ ನಿನಗೂ, ನಿನ್ನವರಿಗೂ, ಸಾರಾಂಶವೆಂದರೆ ಸಕಲ ಜಗತ್ತಿಗೂ, ಕ್ಷೇಮವಾಗುವದು ಕಂಡಿಯಾ!

**೭೮ ಅಂ**—ಹಿಂದೆ (೧–೧೪) ನೆಯ ಶ್ಲೋಕದಲ್ಲಿ ಗೀತಾಶಾಸ್ತ್ರದಲ್ಲಿ ಪ್ರತಿಪಾದಿಸಿದ ಕರ್ಮ, ಜ್ಞಾನ, ಧ್ಯಾನ, ಭಕ್ತಿಯೋಗ, ಇವುಗಳಿಗೆ ಸ್ವಾಮಿಯಾದ ಶ್ರೀಕೃಷ್ಣನು ಗುರುವೆಂತಲೂ, ಮುಂಡಕ ಉಂ (೪–೪) ನೆಯ ಮಂತ್ರದಲ್ಲಿ 'ಧನುಸ್ಸಿನ ಬಾಣಗಳಿಗೆ ಪರಬ್ರಹ್ಮ ಎಂಬ ವಸ್ತುವನ್ನು ಗುರಿಮಾಡಿ, ಚನ್ನಾಗಿ ಎಸೆಯಬೇಕು' ಎಂದು ಹೇಳಿದ ವಚನಕ್ಕನುಸರಿಸಿ, ರಕ್ಷಿಸುವದಕ್ಕೆ ಸಮರ್ಥನಾದುದರಿಂದ ಪರಮಾತ್ಮ ಎನಿಸುವ ವಸ್ತುವೇ ತನಗೆ ಪ್ರಯೋಜನವೆಂದು ಭಾವಿಸುವ ಅರ್ಜುನನು ಶಿಷ್ಯನೆಂತಲೂ ಪ್ರಸ್ತುತ ವಿಷಯರಾಗಿರುವರು. ಅವರಿದ್ದೆಡೆಯಲ್ಲಿಯೇ ಐಶ್ವರ್ಯ ಮೊದಲಾದ ಸಂಪತ್ತು ದೊರೆಯುವದಲ್ಲದೆ, ಮುಕ್ತಿಯೂ ದೊರೆಯುವದು. ಇಂತಹ ಮಹಾ ಪುರುಷಾರ್ಥಕೊಡುವ ಗೀತಾಶಾಸ್ತ್ರದ ಉಪದೇಶಕ್ಕಾಗಿಯೇ ಶ್ರೀಕೃಷ್ಣಾರ್ಜುನರು ಅವತಾರ ಧರಿಸಿರುವರು. ಈ ಶಾಸ್ತ್ರವು ಇಹಪರಲೋಕಗಳ ಮಹಾಫಲಗಳನ್ನು ಕೇಳುವವರಿಗೂ, ಹೇಳುವವರಿಗೂ, ತಪ್ಪದೆ ಕೊಡುವದು. ಯಾವ ದೇಶದಲ್ಲಿ ಯಾವ ರಾಜ್ಯದಲ್ಲಿ, ಯಾವ ಹಳ್ಳಿಪಳ್ಳಿಗಳಲ್ಲಿ ಶ್ರೀಕೃಷ್ಣಾರ್ಜುನರಿಗೆ ನಡೆದ ಈ ಸಂವಾದವು ಹೇಳಲ್ಪಡುವದೋ, ಅಲ್ಲಿ ಹೇಳು–ಕೇಳುವವರಿಗೆ ರಾಜ್ಯ, ಸಂಪತ್ತು, ಜಯ, ಭಕ್ತಿ, ಮುಕ್ತಿ, ಮೊದಲಾದ ಸಕಲ ಪುರುಷಾರ್ಥಗಳು ದೊರೆಯುವವು ಎಂಬಲ್ಲಿ ಎಳ್ಳಷ್ಟಾದರೂ ಸಂದೇಹವಿಲ್ಲ.

**इति श्रीमद्भगवद्गीतासूपनिषत्सु ब्रह्मविद्यायां योगशास्त्रे श्रीकृष्णार्जुनसंवादे सन्न्यासयोगो नामाष्टादशोऽध्यायः ॥ १८ ॥**

ಅಂ—ಈ ಮೇರೆಗೆ, ಷಡ್ಗುಣೈಶ್ವರ್ಯಸಂಪನ್ನನಾದ ಪರಮಾತ್ಮನಿಂದ ಮನೋಹರವಾದ.
ಅಲಂಕಾರಿಕ ಮತ್ತು ಇಷ್ಟ ಶಬ್ದಗಳಿಂದ ಉಪದೇಶಿಸಲ್ಪಟ್ಟದ್ದೂ, ಉಪನಿಷತ್ತಿಗೆ
ಸಮಾನವೂ ಪರಬ್ರಹ್ಮವಿಷಯಕ ವಿದ್ಯೆಯೂ ಎನಿಸುವ ಮತ್ತು ಕರ್ಮ
ಯೋಗಾದಿಗಳನ್ನು ಪ್ರತಿಪಾದಿಸುವ, ಶ್ರೀಕೃಷ್ಣನಿಗೂ ಅರ್ಜುನ
ನಿಗೂ ನಡೆದ ಸಂವಾದರೂಪ **ಗೀತಾಶಾಸ್ತ್ರದಲ್ಲಿಯ**
**ಸನ್ಯಾಸಯೋಗವೆಂಬ ಹದಿನೆಂಟನೆಯ**
ಅಧ್ಯಾಯವು ಮುಗಿಯಿತು.




ಮುದ್ರಕರು:—ಖಂ. ರಾ. ಭಿಸೆ, ಕ. ಪ್ರಿಂ. ವ. ಧಾರವಾಡ, ೧೩೨೧,೩೨,೩೫೦

## ತಿದ್ದುಪಡಿ

| ಅಶುದ್ಧ. | ಶುದ್ಧ. | ಪುಟ. | ಪಂಕ್ತಿ. |
|---|---|---|---|
| ಆಚರಿಸದರೆ | ಆಚರಿಸಿದರೆ | ೧ | ೬ |
| ಆ ಸಕ್ತಿಯೇ | ಆಸಕ್ತಿಯೇ | ೧೩ | ೧೫ |
| ಳಂ | ಳ | ೧೬ | ೨೮ |
| ಬಾಹುಗಳುಳ್ಳ | ಬಾಹುಗಳುಳ್ಳವ | ೬೦ | ೧೨ |
| ಗಡಗಡ | ಗದಗದ | ,, | ೨೫ |
| बसाना | वसाना | ೭೪ | ೪ |
| श्रिय | श्रियं | ೭೫ | ೧ |
| ಪದಿಂದ | ಪದದಿಂದ | ೮೩ | ೬ |
| मश्रुते | मश्नुते | ೮೭ | ೨೫ |
| ಪ್ರಮೇಯುನ್ನು | ಪ್ರಮೇಯುವನ್ನು | ೯೯ | ೨೧ |
| ಅತ್ಯುತ್ತವಾದುದೇ | ಅತ್ಯುತ್ತಮವಾದುದೇ | ,, | ೨೨ |
| ಆರಿತು | ಅರಿತು | ೧೦೦ | ೫ |
| ಸಾರೂಪ್ಯವನ್ನು | ಸಾರೂಪ್ಯವನ್ನು | , | ೧೬ |
| ನಾನಿರುಸುವೆ | ನಾನಿರಿಸುವೆ | ,, | ೩೨ |
| ಶ್ಥೋಕದಲ್ಲಿ | ಶ್ಲೋಕದಲ್ಲಿ | ೧೦೧ | ೧೬ |
| ಬಾಹ್ಯೇಂದ್ರಿಗಳ | ಬಾಹ್ಯೇಂದ್ರಿಯಗಳ | ೧೦೩ | ೨೮ |
| फसम् | फलम् | ೧೦೮ | ೭ |
| ಆವುಗಳು | ಅವುಗಳು | ೧೧೯ | ೧೭ |
| ಮಹದಂಕಾರಗಳ | ಮಹದಹಂಕಾರಗಳ | ,, | ೩೪ |
| या | यो | ೧೩೦ | ೩೩ |
| ಕಾವಾಕ್ಯರಣ | ವಾಕ್ಯಕಾರಣ | ೧೩೭ | ೧೨ |
| ಇಲ್ಲದ | ಇಲ್ಲದೆ | ೧೭೭ | ೨ |
| ಮೋಕ್ಷೇಚ್ಛೆಯ | ಮೋಕ್ಷೇಚ್ಛೆಯು | ೧೮೧ | ೮ |

## ಇದೇ ಗ್ರಂಥಕರ್ತರಿಂದ ಪ್ರಕಾಶಿತವಾದ ಇತರ

# ಗ್ರಂಥಗಳು

## [ಅ] ಸಂಸ್ಕೃತ

### (೧) ಶ್ರೀಮದ್ಭಾಗವತದ ಟಿಪ್ಪಣಿಗಳು

| | | | |
|---|---|---|---|
| ೧ | ಯಾದುಪತ್ಯ ೧ ರಿಂದ ೫ ಮತ್ತು ೭ನೇ ಸ್ಕಂಧಗಳು | ಕ್ರಯ | ೧೦—೦—೦ |
| ೨ | ತಾತ್ಪರ್ಯದಮೇಲೆ ಪ್ರಬೋಧಿನಿ (ಛಲಾರಿ) ೧ ರಿಂದ ೧೨ ಸ್ಕಂಧಗಳು | ,, | ೬—೦—೦ |
| ೩ | ಚಟ್ಟೀ ೬ನೇ ಸ್ಕಂಧ | ,, | ೨—೦—೦ |
| ೪ | ಛಲಾರಿ ೮ನೇ ,, | ,, | ೨—೮—೦ |
| ೫ | ,, ೯ನೇ ,, | ,, | ೨—೦—೦ |
| ೬ | ಮಂದನಂದಿನಿ ೭ನೇ ,, | ,, | ೩—೦—೦ |
| ೭ | ಲಿಂಘೇರಿ ೮ನೇ ,, | ,, | ೨—೮—೦ |
| ೮ | ಶ್ರೀನಿವಾಸತೀರ್ಥ ೧೧ನೇ ಸ್ಕಂಧ | ,, | ೪—೮—೦ |
| ೯ | ದುರ್ಘಟಭಾವದೀಪಿಕೆ ೧ ರಿಂದ ೧೨ ಸ್ಕಂಧಗಳು | ,, | ೬—೦—೦ |
| ೧೦ | ವಿಜಯಧ್ವಜ ಆದ್ಯಂತಶ್ಲೋಕಗಳ ವ್ಯಾಖ್ಯಾನ | ,, | ೦—೧೨—೦ |
| ೧೧ | ಸತ್ಯಧರ್ಮ ೮ನೇ ಸ್ಕಂಧ | ,, | ೩—೦—೦ |
| | ( ಇದರ ೬, ೭ ೯, ೧೨ ಸ್ಕಂಧಗಳು ಅಚ್ಚಾಗುತ್ತಲಿವೆ ) | | |

### (೨) ಶ್ರೀಮನ್ನ್ಯಾಯಸುಧೆ (ಟಿಪ್ಪಣಿ ಸಹಿತ)

| | | | |
|---|---|---|---|
| ೧೨ | ಶ್ರೀಮದನುವ್ಯಾಖ್ಯಾನ, ಶೇಷವಾಕ್ಯಾರ್ಥಚಂದ್ರಿಕಾ ಸಮೇತ ಶ್ರೀಮನ್ನ್ಯಾಯ ಸುಧೆಯ ೪ನೇ ಅಧ್ಯಾಯವು | ಕ್ರಯ | ೪—೮—೦ |
| ೧೩ | ಶ್ರೀನಿವಾಸತೀರ್ಥ ,, ,, | ,, | ೧—೦—೦ |
| ೧೪ | ಯಾದುಪತ್ಯ ,, ,, | ,, | ೧—೦—೦ |
| ೧೫ | ಕಂಭಾಲೂರ ,, ,, | ,, | ೨—೦—೦ |
| ೧೬ | ಯಾದುಪತ್ಯ ೧ನೇ ,, | ,, | ೬—೦—೦ |
| ೧೭ | ಶ್ರೀನಿವಾಸತೀರ್ಥ ,, ,, | ,, | ೫—೦—೦ |
| ೧೮ | ಕಾಶೀ ಆಚಾರ್ಯ ,, ,, | ,, | ೩—೦—೦ |
| ೧೯ | ಕಂಭಾಲೂರ ( ಜಿಜ್ಞಾಸಾ, ೧ನೇ ಅಧ್ಯಾಯ ೨।೩ ಪಾದಗಳು ) | ,, | ೫—೦—೦ |
| ೨೦ | ಸನ್ನ್ಯಾಯರತ್ನಾವಳಿ ೧ರಿಂದ ೪ ಅಧ್ಯಾಯ ಪೂರ್ಣ | ,, | ೪—೮—೦ |
| ೨೧ | ನಯಚಂದ್ರಿಕೆ ,, ,, ,, | ,, | ೩—೦—೦ |
| ೨೨ | ಶ್ರೀಮದನುವ್ಯಾಖ್ಯಾನ, ವಾಕ್ಯಾರ್ಥ, ಶೇಷವಾಕ್ಯಾರ್ಥ ಚಂದ್ರಿಕಾ ಸಮೇತ ಶ್ರೀಮನ್ನ್ಯಾಯಸುಧೆಯ ೧ನೇ ಅಧ್ಯಾಯ ಪೂರ್ಣ | ,, | ೨೦—೦—೦ |

## ಗ್ರಂಥಗಳು

### (ಇ) ಇತರ ಸಂಸ್ಕೃತ

| | | | |
|---|---|---|---|
| ೨೩ | ಸೂತ್ರಾರ್ಥ ರತ್ನಾವಳಿ | ,, | ೧—೪—೦ |
| ೨೪ | ಶ್ರೀರಾಘವೇಂದ್ರ ಸ್ವಾಮಿಗಳ ದಶೋಪನಿಷತ್‌ಖಂಡಾರ್ಥ | ,, | ೮—೦—೦ |
| ೨೫ | ಪ್ರಮಾಣಪದ್ಧತಿ ( ೮ ಟಿಪ್ಪಣಿಸಹಿತ ) | ,, | ೪—೦—೦ |
| ೨೬ | ಗೀತಾವಿವೃತಿ | ,, | ೨—೦—೦ |

## [ಬ] ಕನ್ನಡ ಗ್ರಂಥಗಳು

| | | | |
|---|---|---|---|
| ೨೭ | ಉಪನಿಷದರ್ಥಬೋಧಿನಿ | ,, | ೩—೦—೦ |
| ೨೮ | ಗೀತಾರ್ಥಬೋಧಿನಿ ( ಭಾಗ ೧ ) | ,, | ೩ - ೦—೦ |
| ೨೯ | ,, ( ಭಾಗ ೨ ) | ,, | ೩—೦ ೦ |

( ಎರಡೂ ಭಾಗಗಳನ್ನು ಒಮ್ಮೆಲೇ ತಗೊಳ್ಳುವವರಿಗೆ ೫॥ ರು೦ ಮತ್ತು ೧ನೆಯ ಭಾಗವನ್ನು ಮೊದಲು ತಗೊಂಡವರಿಗೆ ೨॥ ರು೦ ಮತ್ತು ಬರಿಯ ೨ನೆಯ ಭಾಗವನ್ನು ತಗೊಳ್ಳುವವರಿಗೆ ೩ ರು೦ ಕ್ರಯ ಬೀಳುವದು )

* ಮೇಲ್ಕಾಣಿಸಿದ ಕ್ರಯದ ಹೊರತು ಪೋಷ್ಟೇಜ ಬೇರೆ ಪುಸ್ತಕ ದೊರೆಯುವ ಸ್ಥಳ:—

**ಗೋವಿಂದರಾವ ಸವಣೂರ**
ಪೆನಶನರ
ಅಂಕಲಿಗಿ ಬ್ಯಾಂಕ, ಲಿಮಿಟೆಡ್,
**ಧಾರವಾಡ**

